# ನಾಯಕ ಸಂಸ್ಥಾನಗಳ ರಾಣಿಯರು

## (ಕಲ್ಯಾಣ ಕರ್ನಾಟಕವನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ನಿಬಂಧ)

ಸಂಶೋಧಕರು

ನೋಂದಣಿ ಸಂ. ೧೮೦೧೯೦೩೦೦೨




ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೯

# ನಾಯಕ ಸಂಸ್ಥಾನಗಳ ರಾಣಿಯರು

(ಕಲ್ಯಾಣ ಕರ್ನಾಟಕವನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ನಿಬಂಧ)

ಸಂಶೋಧಕರು
ನೋಂದಣಿ ಸಂಖ್ಯೆ : ೧೮೦೧೯೦೩೦೦೨೦




ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯದ, ಹಂಪಿ**
ವಿದ್ಯಾರಣ್ಯ – ೫೮೩೨೭೬

2019-20

# ಪರಿವಿಡಿ

# ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಮತ್ತು ವೈಧಾನಿಕತೆ

---

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ಸ್ವರೂಪ

೧.೪. ಅಧ್ಯಯನದ ವೈಧಾನಿಕತೆ

# ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವೈಧಾನಿಕತೆ

### ಪ್ರಸ್ತಾವನೆ

ಚರಿತ್ರೆ ಅಧ್ಯಯನ ಇಂದು ತನ್ನ ಅಧ್ಯಯನದ ಮಗ್ಗುಲುಗಳನ್ನು ವಿಭಿನ್ನ ನೆಲೆಯಲ್ಲಿ ಬದಲಾಯಿಸಿಕೊಂಡಿದೆ. ಈವರೆಗೆ ಚರಿತ್ರೆಯ ಮೂಲ ದಾಖಲೆಗಳನ್ನು ಪ್ರಮುಖ ಆಧಾರವನ್ನಾಗಿಸಿಕೊಂಡು ಪ್ರಭುತ್ವ ಕೇಂದ್ರಿತ ರಾಜಮನೆತನಗಳ ಲಿಖಿತ ಚರಿತ್ರೆಯನ್ನು ಮಾತ್ರ ದಾಖಲಿಸಲಾಗಿತ್ತು. ಆದರೆ ಮನೆತನಗಳ ಕುರಿತು ಚಾರಿತ್ರಿಕ ಸಂಗತಿಗಳ ವಿಶೇಷವಾದ ಆಸಕ್ತಿಯನ್ನು ವಹಿಸಿ ಚರ್ಚೆ, ವಿಶ್ಲೇಷಣೆ, ವಿವರಣೆ ಹಾಗೂ ಸಂಶೋಧನೆಗಳು ಇತ್ತೀಚೆಗೆ ನಡೆಯುತ್ತಿವೆ ಎಂಬುದು ಗಮನಾರ್ಹವಾದ ಸಂಗತಿಯಾಗಿದೆ. ಈ ಹಿಂದೆ ಪ್ರಮುಖ ರಾಜಮನೆತನಗಳ ಶ್ರೇಯೋಭಿವೃದ್ಧಿಗೆ ಬಲವಾದ ಅಡಿಪಾಯವನ್ನು ಹಾಕಿ ಮತ್ತು ಅವುಗಳ ರಕ್ಷಣೆಗೆ ಸದಾ ಕಂಕಣ ಬದ್ದರಾಗಿ ಟೊಂಕಕಟ್ಟಿ ಹೋರಾಡಿದ ಸೈನಿಕರ, ಸಾಮಂತರ, ಮಾಂಡಳೀಕರ, ಪಾಳೇಗಾರರ ಕುರಿತಾದ ಚರಿತ್ರೆಯನ್ನು ಹುಡುಕಿಕೊಡುವಲ್ಲಿ ನಿರ್ಲಕ್ಷ್ಯ ಭಾವನೆಯನ್ನು ತೋರಿರುವುದು ವಿಷಾದದ ವಿಷಯವಾಗಿದೆ. ಇದರಿಂದಾಗಿ ತಳಮಟ್ಟದ ಚರಿತ್ರೆಯು ಕಣ್ಮರೆಯಾಗಿ ಮೇಲ್ಮಟ್ಟದ ರಾಜ ವೈಭೋಗವು ಇತಿಹಾಸದಲ್ಲಿ ಗುರುತಿಸಲ್ಪಡುತ್ತದೆ.

ವಿಜಯನಗರ ನಂತರ ವಿಪುಲವಾದ ಸ್ವತಂತ್ರಗೊಂಡ ನಾಯಕ ಸಂಸ್ಥಾನದವರು ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಬಹುಮುಖ್ಯ ಪಾತ್ರವಹಿಸುತ್ತಾರೆ. ಕ್ಷತ್ರಿಯ ಕುಲಕ್ಕೆ ಮೂಲತಃ ಸೇರಿದ ಬೇಡರಿಗೆ ಹಲವು ಬಗೆಯಲ್ಲಿ ಹೆಸರಿಟ್ಟಿರುವುದನ್ನು ಕಾಣಬಹುದು. ಬುಡಕಟ್ಟು ಜನಾಂಗದವರನ್ನು ಬೇಡರು, ವಾಲ್ಮೀಕಿಗಳು, ತಳವಾರರು, ನಾಯಕರು ಮತ್ತು ಪಾಳೇಗಾರರು ಎಂದು ಹಲವು ಹೆಸರುಗಳಲ್ಲಿ ಕರೆಯುತ್ತಾರೆ. ಪುರಾಣ ಕಾಲದ ವಾಲ್ಮೀಕಿ, ಧರ್ಮದವನಾದ ಬೇಡರ ಕಣ್ಣಪ್ಪ, ಏಕಲವ್ಯ ಶಬರಿಯನ್ನು ಹೊರತುಪಡಿಸಿ. ಕ್ರಿ.ಶ. ೯ನೇ ಶತಮಾನಕ್ಕೆ ಸೇರಿದ 'ವಡ್ಡಾರಾಧನೆ' ಎಂಬ ಗದ್ಯಕೃತಿಯಲ್ಲಿ ಬರುವ ಅನೇಕ ಕಥೆಗಳಲ್ಲಿ ನಗರ ರಕ್ಷಣೆಯಲ್ಲಿ ನಿರತನಾದ 'ತಳವಾರ'ನ ಉಲ್ಲೇಖವಿರುವುದನ್ನು ಕಾಣಬಹುದಾಗಿದೆ. ಇವರೆಲ್ಲರನ್ನು ಒಟ್ಟಾಗಿ 'ನಾಯಕರು' ಅಥವಾ ಪಾಳೇಗಾರರು ಎಂದು ಕರೆಯುವ ವಾಡಿಕೆಯಿದೆ.

ಪ್ರಸ್ತುತ ಅಧ್ಯಯನವು ನಾಯಕ ಸಂಸ್ಥಾನದಲ್ಲಿ ಕಂಡುಬರುವಂತಹ ಕಲ್ಯಾಣ ಕರ್ನಾಟಕ ಸಂಸ್ಥಾನದ ನಾಯಕ ಅರಸುಮನೆತನದಲ್ಲಿ ಮತ್ತು ನಾಯಕ ಸಂಸ್ಥಾನದ ರಾಣಿಯರ ಕುರಿತು ಅಧ್ಯಯನ ಮಾಡುವುದಾಗಿದೆ. ನಮ್ಮ ಸಮಾಜವು ಮಹಿಳೆಯನ್ನುಐಶ್ವರ್ಯ ಸಂಪತ್ತಿನ ಅಧಿದೇವತೆ ಲಕ್ಷ್ಮಿಗೆ ಹೋಲಿಸಿದ್ದಾರೆ. ಪುರುಷ ಪ್ರಧಾನತೆಯ ಈ ಸಮಾಜದಲ್ಲಿ ಜೀವಿಸುವ ಮಹಿಳೆಯು ಬುದ್ಧಿ, ಮನಸ್ಸು, ವೈಚಾರಿಕತೆಯಲ್ಲಿ ಪುರುಷರಿಗಿಂತ ಮೇಲುಗೈಯಾಗಿದ್ದಾಳೆ.

ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ತಂತ್ರಜ್ಞಾನದ ಕಾಲದಲ್ಲಿಯೂ ನಮ್ಮ ದೇಶದ ಸಾಂಸ್ಕೃತಿಕ ಪರಂಪರೆ ನಾಗರೀಕತೆಯ ಸಂವರ್ಧನೆಯ ವಿಷಯದಲ್ಲಿ ಬಹುಮುಖ್ಯ ಪಾತ್ರ ನಿರ್ವಹಿಸಿದವಳು ಮಹಿಳೆಯಾಗಿರುವುದು ಒಂದು ಮಹತ್ವ ಸಂಗತಿಯಾಗಿದೆ.

## ೧.೧. ಅಧ್ಯಯನದ ಉದ್ದೇಶ

ನಮ್ಮ ದೇಶದ ವಿವಿಧ ಜಾತಿ ವರ್ಗ ಧರ್ಮಗಳಲ್ಲಿ ಮಹಿಳೆಯರ ಜೀವನ ಬೇರೆ-ಬೇರೆ ರೀತಿಯ ವಿವರಣೆ ನೀಡುವುದು ಕಷ್ಟವಾದ ಸಂಗತಿಯಾಗಿದೆ. ಪ್ರಸ್ತುತ ಅಧ್ಯಯನದ 'ನಾಯಕ ಸಂಸ್ಥಾನಗಳ ರಾಣಿಯರು, (ಕಲ್ಯಾಣ ಕರ್ನಾಟಕವನ್ನು ಅನುಲಕ್ಷಿಸಿ') ಎನ್ನುವ ವಿಷಯ ಕುರಿತು ಈವರೆಗೆ ನಡೆದ ಅಧ್ಯಯನಗಳನ್ನು ಗ್ರಹಿಸುತ್ತಾ ಅದರ ಒಳಗಿನ ಮಿತಿಗಳನ್ನು ಗುರುತಿಸಿಕೊಂಡು ಮತ್ತು ಇದರ ಒಳಗೆ ಇರುವಂತಹ ಮಾಹಿತಿಗಳು ಸಂಗ್ರಹಿಸಿ ಹೊಸ ಸಾಧ್ಯತೆಯ ಮೂಲಕ ನಾಯಕ ಸಂಸ್ಥಾನವನ್ನು ಸಂಶೋಧನೆಯ ಭಾಗವಾಗಿ ಈ ಅಧ್ಯಯನವನ್ನು ರೂಪಿಸಲಾಗಿದೆ. ನಾಯಕ ಸಂಸ್ಥಾನದ ಒಳಗಿರುವಂತಹ ಚಾರಿತ್ರಿಕ, ಸಾಮಾಜಿಕ, ಸಾಂಸ್ಕೃತಿಕ, ಆಡಳಿತದ ಕುರಿತು ಚರ್ಚಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

೧. ವರ್ತಮಾನದಲ್ಲಿ ನಾಯಕ ಸಂಸ್ಥಾನದ ರಾಣಿಯರ ಬದುಕು ಯಾವ ಬಗೆಯ ಸಾಂಸ್ಕೃತಿಕ ಸ್ವರೂಪವನ್ನು ಪಡೆದಿದೆ ಎಂದು ತಿಳಿಯುವುದಾಗಿದೆ.
೨. ನಾಯಕ ಸಂಸ್ಥಾನದ ಪ್ರಾದೇಶಿಕ ಚರಿತ್ರೆ ಭೌಗೋಳಿಕ ಪರಿಸರ, ನಾಯಕ ಅರಸುಮನೆತನದ ಐತಿಹಾಸಿಕ ಹಿನ್ನೆಲೆ ಗುರುತಿಸುವ ಉದ್ದೇಶವಾಗಿದೆ.
೩. ನಾಯಕ ಸಂಸ್ಥಾನದ ರಾಣಿಯರ ಆಡಳಿತ, ರಾಜಕೀಯ, ಶೈಕ್ಷಣಿಕ, ಸಾಹಿತ್ಯಿಕ, ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಅಂಶಗಳನ್ನು ಪ್ರಮುಖವಾಗಿ ಇಟ್ಟುಕೊಂಡು ಚರ್ಚಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಒಟ್ಟಾರೆ ಬದಲಾದ ಸಾಮಾಜಿಕ, ಸಾಂಸ್ಕೃತಿಕ ವಲಯದಲ್ಲಿ ಪ್ರಾಚೀನ ಕಾಲದಿಂದ ಹಿಡಿದು ವರ್ತಮಾನದವರೆಗಿನ ಮಹಿಳೆಯ ಪಾಲುದಾರಿಕೆಯಲ್ಲಿ ಮತ್ತು ಆಕೆಯ ಸಾಮಾಜಿಕ ಸ್ಥಾನಮಾನಗಳಲ್ಲಿ ಏನಾದರೂ ವ್ಯತ್ಯಾಸವಾಗಿದೆಯ, ಆ ಮೂಲಕ ಆಸ್ಮಿತೆಗಳೇನು ಎನ್ನುವುದನ್ನು ತಿಳಿಯುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಸ್ವಾತಂತ್ರ್ಯ ಪೂರ್ವದಿಂದಲೂ ಮಹಿಳೆಯರು ಪುರುಷರು ಸರಿಸಮಾನವಾಗಿ ಹೋರಾಟಗಳಲ್ಲಿ ಭಾಗವಹಿಸಿದ್ದಾರೆ. ರಾಜ ಮಹಾರಾಜರ ಚಕ್ರಾಧಿಪತ್ಯದ ಬಗ್ಗೆ ಗಮನಿಸಿದಾಗ

ಅಲ್ಲಿಯೂ ಸಹ ರಾಣಿಯರು ಮತ್ತು ಸೈನಿಕರ ಪತ್ನಿಯರು ಅರಮನೆಯ ರಕ್ಷಣೆಗಾಗಿ, ಸಾಮ್ರಾಜ್ಯದ ಅಂತಸ್ತನ್ನು ಕಾಪಾಡಿಕೊಳ್ಳುವುದಕ್ಕಾಗಿ ದಾಳಿಕೋರರ ವಿರುದ್ಧ ಹೋರಾಡಿ ವೀರಮರಣ ಹೊಂದಿರುವುದನ್ನು ನಮ್ಮ ದೇಶದ ಇತಿಹಾಸವನ್ನು ಗಮನಿಸುತ್ತಾ ಬಂದಾಗ ಬಹಳಷ್ಟು ವೀರ ರಮಣೀಯರ ಹೆಸರುಗಳು ಎಲ್ಲಿಯೂ ಕೂಡ ದಾಖಲುಗೊಂಡಿರುವುದಿಲ್ಲ. ಕೇವಲ ಮೌಖಿಕವಾಗಿ ಮಾತ್ರ ಕೇಳಿಬರುತ್ತವೆ. ಹಾಗೆಯೇ ಸ್ವತಂತ್ರಕ್ಕೆ ಹೋರಾಡಿದ ಬಹುಪಾಲು ಮಹಿಳೆಯನ್ನು ಗುರುತಿಸಬಹುದು.

ಪ್ರಸ್ತುತ ಅಧ್ಯಯನವುನಾಯಕ ಸಂಸ್ಥಾನದ ರಾಣಿಯರನ್ನು ಪ್ರಮುಖವಾಗಿರಿಸಿಕೊಂಡಿದೆ. ಅಧ್ಯಯನದ ವಸ್ತುವಿಷಯಕ್ಕೆ ಮಹತ್ವದ ಅಧ್ಯಯನದ ಸ್ಪಷ್ಟತೆಗಾಗಿ ಅಧ್ಯಯನದ ವ್ಯಾಪ್ತಿಯನ್ನು ಕಲ್ಯಾಣ ಕರ್ನಾಟಕದ (ಹೈದರಾಬಾದ್ ಕರ್ನಾಟಕ)ದಲ್ಲಿ ಬರುವಂತಹ ನಾಲ್ಕು ಜಿಲ್ಲೆಗಳು ಮತ್ತು ನಾಲ್ಕು ತಾಲ್ಲೂಕುಗಳನ್ನು ಅಳವಡಿಸಲಾಗಿದೆ. ಅವುಗಳೆಂದರೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿಗೆ ಸೇರಿರುವ ಗುಡೇಕೋಟೆ, ಜರಿಮಲೆ ರಾಯಚೂರು ಜಿಲ್ಲೆಯಲ್ಲಿ ಬರುವಂತಹ ದೇವದುರ್ಗ ಸಂಸ್ಥಾನ ಮತ್ತು ಲಿಂಗಸೂರು ತಾಲ್ಲೂಕಿನ ಗುಡಗುಂಟೆ ಸಂಸ್ಥಾನ ಹಾಗೂ ಗುಂತಗೋಳ ಸಂಸ್ಥಾನ, ಹಾಗೂ ಯಾದಗಿರಿ ಜಿಲ್ಲೆಯ ಸುರಪುರ ಸಂಸ್ಥಾನ, ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಆನೆಗೊಂದಿ ಸಂಸ್ಥಾನ ಹಾಗೂ ಕನಕಗಿರಿ ಸಂಸ್ಥಾನ ಹೀಗೆ ಕೆಲವು ಸಂಸ್ಥಾನಗಳನ್ನು ಆಯ್ದುಕೊಂಡು ಒಂದು ನಿರ್ದಿಷ್ಟ ವ್ಯಾಪ್ತಿಯ ಮೂಲಕ ಅಧ್ಯಯನ ಮಾಡಲಾಗುವುದು.

**೧.೩. ಅಧ್ಯಯನದ ವಿಧಾನ**

"ನಾಯಕ ಸಂಸ್ಥಾನಗಳ ರಾಣಿಯರು"('ಕಲ್ಯಾಣ ಕರ್ನಾಟಕವನ್ನು ಅನುಲಕ್ಷಿಸಿ') ಎಂಬ ಸಂಪ್ರಬಂಧವು ನಾಯಕ ಸಂಸ್ಥಾನದ ರಾಣಿಯರ ಕುರಿತು ಅಧ್ಯಯನದ ರೂಪರೇಷೆಗಳಆಧಾರದ ಮೂಲಕ ರಚನೆಗೊಂಡಿದೆ, ಈ ನಾಯಕ ರಾಣಿಯರ ಜೀವನ ಚಿತ್ರಣವನ್ನು ನಿರ್ವಹಿಸುವಲ್ಲಿ ಹಲವು ರೀತಿಯ ಅಧ್ಯಯನ ವಿಧಿ-ವಿಧಾನಗಳಾದ ಪ್ರಾಥಮಿಕ ಮತ್ತು ಅನುಷಂಗಿಕ ವಿಧಾನಗಳ ಮೂಲಕ ಸಿದ್ಧಪಡಿಸಲಾಗಿದೆ.

**೧. ಪ್ರಶ್ನಾವಳಿ ವಿಧಾನ**

"ನಾಯಕ ಸಂಸ್ಥಾನಗಳ ರಾಣಿಯರು" ('ಕಲ್ಯಾಣ ಕರ್ನಾಟಕವನ್ನು ಅನುಲಕ್ಷಿಸಿ') ಎಂಬ ಅಧ್ಯಯನದ ವಿಷಯಕ್ಕೆ ಅನುಗುಣವಾಗಿ ಸಮಕಾಲೀನ ಸಂದರ್ಭದಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ಸೂಕ್ತವಾದ ಪ್ರಶ್ನೆಗಳನ್ನು ರಚಿಸಿಕೊಂಡು ಸಮೀಕ್ಷಿಸಲಾಗಿದೆ. ವ್ಯಕ್ತಿ ಅಧ್ಯಯನಕ್ಕೆ ಪ್ರಶ್ನೆಗಳನ್ನು ರಚಿಸಿ ಅವುಗಳಿಂದ ಪಡೆದ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

## ೨. ಸಂದರ್ಶನ ವಿಧಾನ

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಹೈದರಾಬಾದ್ ಕರ್ನಾಟಕದ ನಾಲ್ಕು ಜಿಲ್ಲೆಗಳಾದ ಬಳ್ಳಾರಿ, ರಾಯಚೂರು, ಯಾದಗಿರಿ, ಕೊಪ್ಪಳಗಳಲ್ಲಿ ಬರುವಂತಹ ನಾಯಕ ಸಂಸ್ಥಾನಗಳ ರಾಣಿಯರ ಕುರಿತು ಈ ನಾಲ್ಕು ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ಪ್ರತಿಯೊಂದು ಜಿಲ್ಲೆಯಲ್ಲಿ ಅವರ ವಯೋಮಿತಿಗನುಸಾರವಾಗಿ ಸಂದರ್ಶನ ನಡೆಸಲಾಗಿದೆ. ನಾಯಕ ಸಂಸ್ಥಾನದ ಹಿರಿಯರಿಂದ ಮಾಹಿತಿಯನ್ನು ಪಡೆದು ಸಂಪ್ರಬಂಧ ರಚನೆಯಲ್ಲಿ ಬಳಸಿಕೊಳ್ಳಲಾಗಿದೆ.

## ೩. ಅವಲೋಕನ ವಿಧಾನ

ಈ ಅಧ್ಯಯನದಲ್ಲಿ ಅವಲೋಕನ ವಿಧಾನಕ್ಕೂ ಆದ್ಯತೆ ನೀಡಲಾಗಿದೆ. ಸಂಸ್ಥಾನಗಳ ರಾಣಿಯರಲ್ಲಿ ಇತ್ತೀಚಿನ ದಿನಗಳಲ್ಲಿ ಅವರ ಜೀವನಮಟ್ಟ ಲಿಂಗತಾರತಮ್ಯವೃತ್ತಿ, ಇತರೆ ಕ್ರಮಗಳಲ್ಲಿ ಬದಲಾವಣೆಯಾಗಿರುವುದನ್ನು ಸೂಕ್ಷ್ಮವಾಗಿ ಅವಲೋಕಿಸಲಾಗಿದೆ.

## ೪. ಐತಿಹಾಸಿಕ ವಿಧಾನ

ಈ ನಾಯಕ ಸಂಸ್ಥಾನದಲ್ಲಿ ಐತಿಹಾಸಿಕವಾಗಿ ಚಾರಿತ್ರಿಕವಾಗಿ ವೈಭವ ಪೂರಿತ ಸಂಗತಿಗಳು ಇವರನ್ನು ಇಂದಿನವರೆಗೂ ಸಾಮಾಜಿಕ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

## ೫. ವಿಷಯ ಅಧ್ಯಯನ ವಿಧಾನ

ನಾಯಕ ಸಂಸ್ಥಾನಗಳ ರಾಣಿಯರ ಜೀವನದ ಹಲವು ಮುಖಗಳನ್ನು ಅರಿತುಕೊಳ್ಳಲು ಹಲವಾರು ಪುಸ್ತಕಗಳನ್ನು, ಲೇಖನಗಳಲ್ಲಿ, ಪೌರಾಣಿಕ ವಿಷಯವನ್ನು ಅರಿಯಲು ಈ ವಿಧಾನ ಸಹಾಯಕವಾಗಿದೆ. ಹಾಗೆಯೇ ಅನುಭವವುಳ್ಳ ವ್ಯಕ್ತಿಗಳನ್ನು ಭೇಟಿಮಾಡಿ ಅವರೊಂದಿಗೆ ಚರ್ಚಿಸಿ ವಿಷಯವನ್ನು ಸಮಗ್ರವಾಗಿ ಸಂಗ್ರಹಿಸಲಾಗಿದೆ. ಮೂಲದ ಬಗ್ಗೆಯಾಗಲಿ, ಹಬ್ಬ ಹರಿದಿನಗಳನ್ನು ಕುರಿತು ಹಾಗೂ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ರಾಜಕೀಯ ವಿಷಯವನ್ನು ಅರಿಯಲು ಈ ವಿಧಾನವನ್ನು ಅನುಸರಿಸಲಾಗಿದೆ. ನಾಲ್ಕು ಜಿಲ್ಲೆಯಲ್ಲಿ ಹಲವು ನಾಯಕ ಸಂಸ್ಥಾನದ ವ್ಯಕ್ತಿಗಳನ್ನು ಭೇಟಿಮಾಡಿ ವಿಷಯವನ್ನು ಸಂಗ್ರಹಿಸಲು ಈ ವಿಧಾನವನ್ನು ಬಳಸಲಾಗಿದೆ.

ಈ ಮೇಲಿನ ಎಲ್ಲಾ ವಿಧಾನಗಳನ್ನು ಬಳಸಿಕೊಂಡು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿಗಳು ಈ ಅಧ್ಯಯನದ ಮುಖ್ಯ ತಿರುಳುಗಳು ಆಗಿದೆ. ಈ ಬಗೆಯ ಅಧ್ಯಯನ ನಡೆದಿರುವುದು ಅತಿವಿರಳ ಆದ್ದರಿಂದ ಕೆಲವು ಅಧ್ಯಯನ ವಿಧಾನಗಳನ್ನು ಬಳಸಿಕೊಂಡು ನಾಯಕ ಸಂಸ್ಥಾನದ ರಾಣಿಯರನ್ನು ಗಮನದಲ್ಲಿರಿಸಿಕೊಂಡು ಒಂದು ನಾಯಕ ಸಂಸ್ಥಾನದ ರಾಣಿಯರ ವಾಸ್ತವ ಬದುಕನ್ನು ಶೋಧಿಸುವುದು ಸಂಶೋಧನ ಅಧ್ಯಯನದ ವಿಧಾನವಾಗಿದೆ.

## ೩.೪. ಅಧ್ಯಯನದ ಸ್ವರೂಪ

ಸಹಜವಾಗಿ ಹುಟ್ಟಿಕೊಂಡ ಸಮಾಜದ ಚೌಕಟ್ಟಿನಲ್ಲಿ ಸ್ತ್ರೀ ಪುರುಷರು ಸರಿಸಮನಾಗಿ ಬದುಕಲು ಸಾಮಾಜೀಕರಣ ಅತಿ ಪ್ರಮುಖವಾಗಿದೆ. ಪುರುಷ ನಿರ್ಮಿತ ಸಾಮಾಜಿಕ ಚೌಕಟ್ಟಿನಲ್ಲಿ ಸ್ತ್ರೀ–ಪುರುಷರ ಬೆಳವಣಿಗೆ ಶಿಸ್ತು ಮತ್ತು ರೂಢಿ ಸಂಪ್ರದಾಯಗಳನ್ನು ಒಳಗೊಂಡಿವೆ."ನಾಯಕ ಸಂಸ್ಥಾನಗಳ ರಾಣಿಯರು" (ಕಲ್ಯಾಣ ಕರ್ನಾಟಕವನ್ನು ಅನುಲಕ್ಷಿಸಿ), ವಿಷಯವನ್ನು ಪರಿವಿಡಿಗೆ ಸಂಬಂಧಿಸಿದಂತೆ ಐದು ಅಧ್ಯಾಯಗಳಲ್ಲಿ ರೂಪಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನಗಳನ್ನು ಒಳಗೊಂಡಿರುತ್ತದೆ.

ಎರಡನೆಯ ಅಧ್ಯಾಯದಲ್ಲಿ ಕಲ್ಯಾಣ ಕರ್ನಾಟಕದ ನಾಯಕ ಸಂಸ್ಥಾನದ ಪ್ರಾದೇಶಿಕ ಚರಿತ್ರೆಯನ್ನು ಭೌಗೋಳಿಕ ಪರಿಸರ ಮತ್ತು ನಾಯಕ ಅರಸುಮನೆತನಗಳನ್ನು ಐತಿಹಾಸಿಕ ಹಿನ್ನೆಲೆಯನ್ನು ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕಲ್ಯಾಣ ಕರ್ನಾಟಕ ಆಡಳಿತಕ್ಕೆ ರಾಣಿಯರ ಕೊಡುಗೆಗಳು ಕುರಿತಾದ ಪಟ್ಟದ ರಾಣಿಯರ ನೇಮಕ, ನಾಯಕ ರಾಣಿಯರು ರಾಜಕೀಯ ಮತ್ತು ಆಡಳಿತ ಕ್ಷೇತ್ರದಲ್ಲಿ ಅವರು ಕೊಟ್ಟ ಕೊಡುಗೆಗಳನ್ನು ಕುರಿತು ವಿವೇಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕಲ್ಯಾಣ ಕರ್ನಾಟಕ ಸಾಂಸ್ಕೃತಿಕ ಕ್ಷೇತ್ರಕ್ಕೆ ರಾಣಿಯರು ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಿಗೆ ಹಾಗೂ ಸಂಪ್ರದಾಯ ಆಚರಣೆಗಳಿಗೆ ಅವರು ಕೊಟ್ಟಂತಹ ಮಹತ್ವ ಪೂರ್ಣವಾದ ಕೊಡುಗೆಗಳನ್ನು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಒಟ್ಟಾರೆಯಾಗಿ ಕಿರುಪ್ರಬಂಧದಲ್ಲಿ ಕಂಡುಕೊಂಡ ಫಲಿತಗಳನ್ನು ಸಮಾರೋಪದಲ್ಲಿ ಚರ್ಚಿಸಲಾಗಿದೆ.

## ೧.೫. ಅಧ್ಯಯನದ ಸಮೀಕ್ಷೆ

ಕಲ್ಯಾಣ ಕರ್ನಾಟಕದ ವ್ಯಾಪ್ತಿಯಲ್ಲಿ ಆಳ್ವಿಕೆ ಮಾಡಿದ ಅರಸು ಮನೆತನಗಳ ಕುರಿತಾಗಿ ಅನೇಕ ಕೃತಿಗಳು ಪ್ರಕಟಗೊಂಡಿವೆ. ಇತಿಹಾಸಕ್ಕೆ ಸಂಬಂಧಿಸಿದ ಅನೇಕ ಲೇಖನಗಳು ಪತ್ರಿಕೆಯಲ್ಲಿ ಪ್ರಕಟಗೊಂಡಿವೆ. ಜೊತೆಗೆ ಅನೇಕ ಸಂಪಾದಿತ ಕೃತಿಗಳಲ್ಲಿ ಬಿಡಿಲೇಖನಗಳು ಪ್ರಕಟಗೊಂಡಿವೆ. ಇವೆಲ್ಲವುಗಳು ನನ್ನ ಈ ಅಧ್ಯಯನಕ್ಕೆ ಆಕರಗ್ರಂಥಗಳಾಗಿದ್ದು, ಅಧ್ಯಯನದಲ್ಲಿ ಇವುಗಳನ್ನು ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ. ಈ ರೀತಿಯ ಕೃತಿಗಳೆಂದರೆ...

೧. ಅಮರೇಶ ಯತಗಲ್, ೨೦೧೮, **ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು,** ಪಲ್ಲವಿ ಪಬ್ಲಿಕೇಷನ್, ಕಸಬಾ ಲಿಂಗಸೂಗೂರು.

೨. ಅಮರೇಶ ಯತಗಲ್, ೨೦೨೮, **ಚಾರಿತ್ರಿಕ ಸುರಪುರ,** ಪಲ್ಲವಿ ಪಬ್ಲಿಕೇಷನ್, ಕಸಬಾ ಲಿಂಗಸೂಗೂರು.

೩. ಕೊಟ್ರೇಶ್ ಎಂ. ೨೦೧೮, **ಕಲ್ಯಾಣ ಕರ್ನಾಟಕದ ಅರಸುಮನೆತಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ತಾರೀಹಳ್ಳಿ ಹನುಮಂತಪ್ಪ, ೨೦೧೨, **ಕನಕಗಿರಿ ನಾಯಕರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಪಾಟೀಲ ಎಚ್. ಎಸ್. ೨೦೦೫, **ಕೊಪ್ಪಳ ಜಿಲ್ಲಾ ದರ್ಶನ,** ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ.

೬. ಶರಣಬಸಪ್ಪ ಕೋಲ್ಕಾರ, ೨೦೧೨, **ವಿಜಯನಗರ ಹಂಪಿ ಪರಿಸರ,** ವಿಶ್ವಾಸ ಪ್ರಿಂಟರ್ಸ್, ಬೆಂಗಳೂರು.

೭. ಶರಣಬಸಪ್ಪ ಕೋಲ್ಕಾರ, ೨೦೧೩, **ವಿಜಯನಗರದ ಮಾತೃಸ್ಥಾನ ಆನೆಗೊಂದಿ,** ವಿಶ್ವಾಸ ಪ್ರಿಂಟರ್ಸ್, ಬೆಂಗಳೂರು.

ಹೀಗೆ ಅನೇಕ ಬಿಡಿ ಲೇಖನಗಳು, ಪತ್ರಿಕಾ ಪ್ರಕಟಣೆಗಳು ಮತ್ತು ಕೃತಿಗಳು ಕಲ್ಯಾಣ ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿ ಅಧ್ಯಯನಗಳಾದರೂ ಕೂಡಾ ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ನಾಯಕ ಸಂಸ್ಥಾನದ ರಾಣಿಯರ ಕುರಿತಾಗಿ ಈವರೆಗೆ ಅಧ್ಯಯನಗಳು ನಡೆಯದೆ ಇರುವುದು ಒಂದು ವಿಪರ್ಯಾಸವೇ ಸರಿ. ಆದರೆ ಈ ವಿಷಯದ ಕುರಿತಾಗಿ ಬೆಳಕು ಚೆಲ್ಲುವ ಅನೇಕ ಮಾಹಿತಿಗಳನ್ನು ನನ್ನ ಅಧ್ಯಯನದಲ್ಲಿ ಸಂಗ್ರಹಿಸಿ ದಾಖಲಿಸಲಾಗಿದೆ. ಹೀಗಾಗಿ ಈ ಪ್ರಬಂಧವು ಈ ವಿಷಯದ ಕುರಿತಾಗಿರುವ ಅಧ್ಯಯನದ ಕೊರತೆಯನ್ನು ಹೋಗಲಾಡಿಸುವುದರಲ್ಲಿ ಯಾವುದೇ ಸಂದೇಹವಿಲ್ಲ.

# ಅಧ್ಯಾಯ : ಎರಡು

# ಕಲ್ಯಾಣ ಕರ್ನಾಟಕದ ಭೌಗೋಳಿಕತೆ ಮತ್ತು ಐತಿಹಾಸಿಕ ಹಿನ್ನೆಲೆ

---

೨.೧. ಕಲ್ಯಾಣ ಕರ್ನಾಟಕದ ಭೌಗೋಳಿಕ ಹಿನ್ನೆಲೆ

೨.೨. ಕಲ್ಯಾಣ ಕರ್ನಾಟಕದ ಐತಿಹಾಸಿಕ ಹಿನ್ನೆಲೆ

# ಅಧ್ಯಾಯ : ಎರಡು

# ಕಲ್ಯಾಣ ಕರ್ನಾಟಕದ ಭೌಗೋಳಿಕತೆ ಮತ್ತು ಐತಿಹಾಸಿಕ ಹಿನ್ನೆಲೆ

## ೨.೧. ಕಲ್ಯಾಣ ಕರ್ನಾಟಕದ ಭೌಗೋಳಿಕ ಹಿನ್ನೆಲೆ

ಅಧ್ಯಯನಕ್ಕಾಗಿ ಆಯ್ದುಕೊಂಡ ಪ್ರದೇಶದ ಭೌಗೋಳಿಕ ವಿವರಗಳನ್ನು ಅರಿತುಕೊಳ್ಳುವುದು ಅತ್ಯಂತ ಅವಶ್ಯಕ. ಆದ್ದರಿಂದ ಕಲ್ಯಾಣ ಕರ್ನಾಟಕದ ಭೌಗೋಳಿಕ ಪರಿಸರದಲ್ಲಿ ಕಂಡುಬರುವ ವಾಯುಗುಣ. ಉಷ್ಣಾಂಶ ಮಳೆ ಮತ್ತು ಭೌತಿಕಲಕ್ಷಣಗಳನ್ನು ಅರಿಯದಿದ್ದರೆ ನಾವು ಒಂದು ಪ್ರಧಾನ ನೆಲೆಯನ್ನು ಉಪೇಕ್ಷಿಸಿದಂತಾಗುತ್ತದೆ. ಆದ್ದರಿಂದ ಐತಿಹಾಸಿಕ ಪ್ರಕ್ರಿಯೆ, ಭೌಗೋಳಿಕ ಸನ್ನಿವೇಶಗಳು ಮತ್ತು ಪರಂಪರೆ ನಿಕಟ ಸಂಬಂಧ ಹೊಂದಿದ್ದು, ಭೌಗೋಳಿಕ ವೈಶಿಷ್ಟಗಳನ್ನು ಮರೆತು ಇತಿಹಾಸವನ್ನು ಬರೆಯಲು ಸಾಧ್ಯವಿಲ್ಲ ಎಂದು ಹೇಳಿದರೆ ತಪ್ಪಾಗುವುದಿಲ್ಲ.

ಕಾಡುಗಳ ಕೊರತೆಯಿಂದ ಪ್ರಾಣಿಪಕ್ಷಿಗಳ ಸಂಖ್ಯೆಯೂ ಕಡಿಮೆಯಾಗುತ್ತಿದೆ. ಚಿರತೆ, ತೋಳ, ಕತ್ತೆಕಿರುಬ, ನರಿ, ಕಪಿ ಮತ್ತು ಜಿಂಕೆಗಳು ಅಲ್ಲಲ್ಲಿ ಕಂಡುಬರುತ್ತವೆ. ಹಾವುಗಳ ಸಂತತಿ ಹೆಚ್ಚು ಇವೆ. ಚೇಳು, ಹಲ್ಲಿ, ನೀರಹಾವು, ಮಣ್ಣುಮುಕ್ಕ, ನಾಗರ ಹಾವು ಎಲ್ಲೆಡೆಯೂ ಇವೆ. ನೀರ್‌ಬಾತುಕೋಳಿ, ಕಾಗೆ, ಗಿಜುಗ, ಮುಖ್ಯವಾದ ಪಕ್ಷಿಗಳು, ಹಸು, ಎಮ್ಮೆ, ಕುರಿ, ಮೇಕೆ, ಕುದುರೆ ಮತ್ತು ಕೋಳಿ ಮುಖ್ಯ ಸಾಕುಪ್ರಾಣಿಗಳು.

ಭಾರತದ ವಿವಿಧ ಕ್ಷೇತ್ರಗಳಲ್ಲಿನ ಅಪೂರ್ವವಾದ ಸಾಂಸ್ಕೃತಿಕ ವೈವಿಧ್ಯತೆ ದೇಶದ ಹಿರಿಮೆಗೆ ಕಾರಣವಾಗಿದೆ. ವೈವಿಧ್ಯತೆಯಲ್ಲಿ ಏಕತೆ. ಬಹುಭಾಷೆಗಳ ಸಮನ್ವಯತೆ, ಆಚರಣೆಗಳು ವಿಶೇಷತೆ ಹಾಗೂ ಕಲೆ ಸಾಹಿತ್ಯಗಳ ಸಂಸ್ಕೃತಿಯಿಂದ ಶ್ರೀಮಂತಗೊಂಡಿದೆ. ಶಾತವಾಹನರು, ಮೌರ್ಯರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ಕಲಚೂರಿಗಳು, ಸೇವಣರು, ಬಹುಮನಿ ಸುಲ್ತಾನರು, ಆದಿಲ್‌ಶಾಹಿಗಳು ಮತ್ತು ಹೈದರಾಬಾದ್ ನಿಜಾಮರ ಆಳ್ವಿಕೆಯ ಕಾಲದ ಸಂಸ್ಕೃತಿ ಇಂದಿಗೂ ಕೆಲವಡೆ ಪ್ರಸ್ತುತ ವಿಶೇಷವಾಗಿ ಕನ್ನಡ ನಾಡು ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯಿಕವಾಗಿ ಬೆಳೆಯುವುದಕ್ಕೆ ಈ ಅರಸು ಮನೆತನಗಳೇ ಕಾರಣವಾಗಿವೆ.

ಭೌಗೋಳಿಕ ಮತ್ತು ಚಾರಿತ್ರಿಕ ಪರಂಪರೆಯುಳ್ಳ ಹೈದರಾಬಾದ್ ಕರ್ನಾಟಕದ ಜಿಲ್ಲೆಗಳು ಪ್ರಾಗೈತಿಹಾಸಿಕ ಕಾಲದಿಂದಲೂ ಸಾಂಸ್ಕೃತಿಕ ಕೇಂದ್ರವಾಗಿ ಗುರುತಿಸಿಕೊಂಡಿದೆ. ನಾವು ಅಶೋಕನ ಕಾಲದ ಶಾಸನ ಮಸ್ಕಿಯಲ್ಲಿ ಕಾಣಬಹುದು. ಈ ಆರು ಜಿಲ್ಲೆಯಲ್ಲಿ ಮೌರ್ಯರ ಕಾಲದಿಂದ ವಿಜಯನಗರ ಸಾಮ್ರಾಜ್ಯದವರಿಗೆ ಶಾಸನಗಳು ಮತ್ತು ಉಪಲಬ್ಧ ಪ್ರಾಚ್ಯಾವಶೇಷಗಳು ಈ ಜಿಲ್ಲೆಯ ಇತಿಹಾಸವನ್ನು ಬಿಚ್ಚಿಡುತ್ತವೆ. ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಘೋಷಿಸಿದ ಹೆಗ್ಗಳಿಕೆಗೆ ಹೆಸರಾದ ಈ ಪ್ರದೇಶಗಳು, ಪುಟ್ಟ ನದಿಗಳನ್ನು ಒಳಗೊಂಡ ಈ ಪ್ರದೇಶಗಳನ್ನು,

ಸಂಪದ್ಭರಿತವಾದ ಸಂಸ್ಕೃತಿಯನ್ನು ಬೆಳೆಸುವಲ್ಲಿ ಪೂರಕವಾಗಿ ಹೈದರಾಬಾದ್ ಕರ್ನಾಟಕ ಸರ್ಕಾರ ಶ್ರಮಿಸುತ್ತಿದೆ. ಅಲ್ಲಲ್ಲಿ ಕಂಡುಬರುವ ಕೆರೆ-ಬಾವಿ ಮಠ ಹಾಗೂ ದೇವಾಲಯಗಳು ಸಂಸ್ಕೃತಿಯನ್ನು ಬೆಳೆಸುವಲ್ಲಿ ಪೂರಕ ಪಾತ್ರ ನಿರ್ವಹಿಸಿವೆ.

ಕರ್ನಾಟಕದಲ್ಲಿ ಐದು ಪ್ರದೇಶಗಳಾದ ವಾಯುವ್ಯ ಕರ್ನಾಟಕ, ಈಶಾನ್ಯ ಕರ್ನಾಟಕ, ಹಳೇಯ ಮೈಸೂರು, ತುಳುನಾಡು, ಕೊಡಗು, ಕರ್ನಾಟಕದ ವಿಭಾಗಗಳು. ಇವುಗಳಲ್ಲಿ ಈಶಾನ್ಯ ಕರ್ನಾಟಕದಲ್ಲಿ ಬರುವುದು ಆರು ಜಿಲ್ಲೆಗಳು ಕಲಬುರಗಿ, ಬೀದರ್, ಯಾದಗಿರಿ, ಕೊಪ್ಪಳ, ರಾಯಚೂರು, ಬಳ್ಳಾರಿ, ಈ ಜಿಲ್ಲೆಗಳು ಹೈದರಾಬಾದ್ ಕರ್ನಾಟಕ ೧೦ ಏಪ್ರಿಲ್ ೨೦೧೦ ರಲ್ಲಿ ಘೋಷಣೆ ಮಾಡಲಾಗಿದೆ.

- **ಭೂ ವಿಸ್ತೀರ್ಣ**

ಕರ್ನಾಟಕದ ಪ್ರದೇಶದ ವಿಸ್ತೀರ್ಣ ೧,೯೧,೭೯೧ ಚದರ ಕಿ.ಮೀ (೭೪,೦೫೧,೯ ಚದರ ಮೈಲಿ) ವಿಸ್ತೀರ್ಣವಿದೆ. ಕರ್ನಾಟಕ ಪ್ರದೇಶದ ಎತ್ತರ ೧,೯೨೫ ಮೀ (೬,೩೧೬ ಅಡಿ), ಅತ್ಯಂತ ಕಡಿಮೆಎತ್ತರದ ಪ್ರದೇಶ ೦ ಮೀ(೦ ಅಡಿ) ಇದೆ. ಈ ಪ್ರದೇಶದಲ್ಲಿ ಬರುವ ಜಿಲ್ಲೆಗಳು ಬಳ್ಳಾರಿ ಜಿಲ್ಲೆಯ ವಿಸ್ತೀರ್ಣ: ೮೪೮೧ ಚ.ಕಿ.ಮೀ, ಕೊಪ್ಪಳ ವಿಸ್ತೀರ್ಣ: ೮೪೫೮ ಚ.ಕಿ.ಮೀ, ರಾಯಚೂರು ವಿಸ್ತೀರ್ಣ: ೫೫೫೯ ಚ.ಕಿ.ಮೀ, ಬೀದರ್ ವಿಸ್ತೀರ್ಣ: ೫೪೪೫ ಚ.ಕಿ.ಮೀ, ಕಲಬುರ್ಗಿ ವಿಸ್ತೀರ್ಣ: ೧೬೨೨ ಚ.ಕಿ.ಮೀ, ಯಾದಗಿರಿ: ೫.೬ ಕಿ.ಮೀ$^{2}$– (೩೪೯ಮೀ). ಈ ಹೈದರಾಬಾದ್ ಕರ್ನಾಟಕದಲ್ಲಿ ಬರುವ ಜಿಲ್ಲೆಗಳ ಭೂವಿಸ್ತೀರ್ಣ ಹೊಂದಿದೆ.

- **ಜನಸಂಖ್ಯೆ, ಶಿಕ್ಷಣ, ಸರ್ಕಾರದ ಸೌಲಭ್ಯಗಳು**

**ಜನಸಂಖ್ಯೆ**

೨೦೧೧ ಜನಗಣತಿ ಪ್ರಕಾರ ಕರ್ನಾಟಕದ ಜನಸಂಖ್ಯೆಯು ೬,೧೧,೩೦,೭೦೪ ಆಗಿದೆ ಮತ್ತು ಇದರಲ್ಲಿ ಪುರುಷರ ಸಂಖ್ಯೆ ೩,೧೦,೫೭,೭೪೨ (೫೦.೮೦%) ಹಾಗೂ ಸ್ತ್ರೀಯರ ಸಂಖ್ಯೆ ೩,೦೦,೭೨,೯೬೨ (೪೯.೧೯%) ಈ ಜನಗಣತಿ ಪ್ರಕಾರ ಪ್ರತಿ ೧೦೦೦ ಪುರುಷರಿಗೆ ೯೬೮ ಸ್ತ್ರೀಯರು ಕಡಿಮೆಯಾಗಿರುವದನ್ನು ಕಂಡುಬರುತ್ತದೆ. ಜನಸಂಖ್ಯಾ ಸಾಂದ್ರತೆಯು ೩೧೮,೮/ ಚ.ಕಿ.ಮೀ ರಷ್ಟಿದೆ. ಹಾಗೂ ನಗರ ಪ್ರದೇಶಗಳಲ್ಲಿ ೩೮.೫೭% ರಷ್ಟು ಜನ ವಾಸಿಸುತ್ತಾರೆ. ಈ ಜನಸಂಖ್ಯೆ ಜಿಲ್ಲೆಯವರು ನೋಡಿದಾಗ ಬಳ್ಳಾರಿ ಜಿಲ್ಲೆಯ ಜನಸಂಖ್ಯೆ ೪೨,೮೬೨ ಚ.ಕಿ.ಮೀ. ಇದೆ ಈ ಜಿಲ್ಲೆಯಲ್ಲಿ ೧೦ ತಾಲ್ಲೂಕುಗಳನ್ನು ಒಳಗೊಂಡಿದೆ. ಕೊಪ್ಪಳ ಜಿಲ್ಲೆಯ ಜನಸಂಖ್ಯೆ ೧೩,೪೯ ಲಕ್ಷ ಜನಸಂಖ್ಯೆ ಈ ಜಿಲ್ಲೆಯಲ್ಲಿ ತಾಲ್ಲೂಕುಗಳು ಇವೆ. ರಾಯಚೂರು ಜಿಲ್ಲೆಯ ಜನಗಣತಿ ಪ್ರಕಾರ ೧೬,೪೮,೨೧೨ ಹೊಂದಿದೆ. ಹಾಗೂ ಐದು ತಾಲ್ಲೂಕುಗಳನ್ನು ಕಾಣಬಹುದಾಗಿದೆ. ಯಾದಗಿರಿ ಜಿಲ್ಲೆಯ ಜನಸಂಖ್ಯೆ ೫೮೮೦೨, ಸಾಂದ್ರತೆ ೧೦೫೦೦,೩೬ / ಚ.ಕಿ.ಮೀ ಐದು ತಾಲ್ಲೂಕುಗಳನ್ನು ಒಳಗೊಂಡಿವೆ.

ಪ್ರತಿಯೊಂದು ಜಿಲ್ಲೆಗೆ ಜಿಲ್ಲಾಧಿಕಾರಿ ಇರುವರು. ಸಹಾಯಕ ಕಮಿಷನರ್, ತಹಸೀಲ್ದಾರ, ಶಿರಸ್ತೆದಾರ, ಸಹಾಯಕ ತಹಸೀಲ್ದಾರ, ಇವರಿಗೆ ಕಂದಾಯ ಪರಿಶೀಲನಾಧಿಕಾರಿ ಇರುವರು, ಸರ್ವೆ ಸಾಮಾನ್ಯವಾಗಿ ಗ್ರಾಮದ ಲೆಕ್ಕಿಗ ಮೊದಲಾದ ಹಲವು ಅಧಿಕಾರಿಗಳು ಜಿಲ್ಲಾಧಿಕಾರಿಗೆ ನೆರವಾಗಲು ಜಿಲ್ಲಾಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಇರುತ್ತಾರೆ.ಜಿಲ್ಲೆಯನ್ನುವಿಭಾಗಿಸಿ ತಾಲ್ಲೂಕುಗಳನ್ನು ರಚಿಸಲಾಗಿದೆ.ಜಿಲ್ಲಾಡಳಿತದಲ್ಲಿ ವಿಭಾಗಿಸಿ ಗ್ರಾಮಗಳನ್ನು ರಚಿಸಲಾಗಿದೆ. ಜಿಲ್ಲಾಡಳಿತದಲ್ಲಿ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್‌ಗಳು, ಗ್ರಾಮ ಪಂಚಾಯತ್‌ಗಳು, ನಗರಪಾಲಿಕೆಗಳು ಪಾಲ್ಗೊಳ್ಳುತ್ತವೆ.

ಈ ಜಿಲ್ಲೆಗಳು ಶಿಕ್ಷಣದಲ್ಲಿ ಉತ್ತಮ ಸ್ಥಾನ ಹೊಂದಿದೆ. ಕೆಲವು ಜಿಲ್ಲೆಯಲ್ಲಿ ವಿಶ್ವವಿದ್ಯಾಲಯಗಳು ಒಳಗೊಂಡಿವೆ. ರಾಯಚೂರು ಕೃಷಿ ವಿಶ್ವವಿದ್ಯಾಲಯ, ಗುಲ್ಬರ್ಗ ವಿಶ್ವವಿದ್ಯಾಲಯ ಗುಲ್ಬರ್ಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ ಬಳ್ಳಾರಿ, ಈ ವಿಶ್ವವಿದ್ಯಾಲಯಗಳು ಮಕ್ಕಳಲ್ಲಿ ಸಂಶೋಧನೆ ಮತ್ತು ಸೃಜನಶೀಲ ವ್ಯಕ್ತಿತ್ವ ಬೆಳೆಸುವಲ್ಲಿ ಅನುವು ಮಾಡಿಕೊಡುತ್ತದೆ. ಉನ್ನತ ಶಿಕ್ಷಣಕ್ಕೆ ಅನುವುಮಾಡಿಕೊಟ್ಟಿದೆ. ಈ ಜಿಲ್ಲೆಗಳಲ್ಲಿ ಪ್ರಮುಖವಾಗಿ ಸರ್ಕಾರದಿಂದ ಸಾಕ್ಷರತಾ ಆಂದೋಲನ ಯೋಜನೆ ಜಿಲ್ಲೆಗಳಲ್ಲಿ ಕಾರ್ಯನಿರತವಾಗಿರುವುದಲ್ಲದೆ, ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚಾಗಿ ಶಾಲೆಗಳನ್ನು ತೆರೆದು ಶಿಕ್ಷಣ ಒದಗಿಸಲಾಗುತ್ತಿದೆ. ಮಕ್ಕಳನ್ನು ಶಾಲೆಗೆ ಸೇರಿಸಲು ಒಡಂಬಡಿಸಿ ವಿವಿಧ ಯೋಜನೆಗಳನ್ನು ಜಾರಿಗೆ ತಂದು ಅವರಿಗೆ ಸೌಲಭ್ಯಗಳನ್ನು ಒದಗಿಸುವ ಪ್ರಯತ್ನವೂ ನಡೆದಿದೆ. ಆದರೆ ಅಜ್ಞಾನ, ಬಡತನ ಕುಟುಂಬದಲ್ಲಿ ಸಾಮಾನ್ಯ ಶಿಕ್ಷಣದ ಜೊತೆಗೆ ಉನ್ನತ ಶಿಕ್ಷಣ ನೀಡುವ ಕಾಲೇಜುಗಳು, ತಾಂತ್ರಿಕ ಶಿಕ್ಷಣ ನೀಡುವದು, ಪಾಲಿಟೆಕ್ನಿಕ್ ಕಾಲೇಜುಗಳು ಇವೆ. ಆರೋಗ್ಯ ಸುಧಾರಣೆಗಾಗಿ ಸರ್ಕಾರಿ ಆಸ್ಪತ್ರೆಗಳನ್ನು ಸ್ಥಾಪಿಸಲಾಗಿದೆ. ಭಾರತೀಯ ವೈದ್ಯಪದ್ಧತಿಯ ಚಿಕಿತ್ಸಾಲಯಗಳು ಅನೇಕ ಸರ್ಕಾರಿ ಆರೋಗ್ಯ ಕೇಂದ್ರಗಳು ಇವೆ.

- **ಹವಾಮಾನ**

ಕರ್ನಾಟಕ ಪ್ರದೇಶ ಎತ್ತರದ ಪ್ರದೇಶ ಸಮುದ್ರ ಮಟ್ಟದಿಂದ ಸರಾಸರಿ ಎತ್ತರ ೧೫೦೦ ಅಡಿ ಇದ್ದು ಇದು ಭಾರತದಲ್ಲಿ ಅತಿ ಹೆಚ್ಚಿನ ಸರಾಸರಿ ಎತ್ತರವುಳ್ಳ ರಾಜ್ಯಗಳಲ್ಲಿ ಒಂದು. ಕರ್ನಾಟಕದ ಬಯಲು ಪ್ರದೇಶವಾಗಿದೆ. ಇಲ್ಲಿ ೨೪ ಬಯಲುಸೀಮೆ ಪ್ರದೇಶಗಳು ಬರುತ್ತವೆ. ಪ್ರಮುಖವಾಗಿ ಹೈದರಾಬಾದ್ ಕರ್ನಾಟಕದಲ್ಲಿ ಆರು ಜಿಲ್ಲೆಗಳಿವೆ. ಇಲ್ಲಿಯ ಜನರ ಪ್ರಮುಖ ಉದ್ಯೋಗ ಕೃಷಿಯಾಗಿದೆ. ಕರ್ನಾಟಕದ ಅತಿ ಕಡಿಮೆ ತಾಪಮಾನವಾದ ೨.೮°ಸೆ (೩೭°ಎಫ್) ಬೀದರ್‌ನಲ್ಲಿ ದಾಖಲಾಯಿತು. ಕರ್ನಾಟಕದ ಅತಿ ಹೆಚ್ಚು ತಾಪಮಾನವಾದ ೪೫.೬°ಸೆ (೧೧೪°ಎಫ್) ರಾಯಚೂರಿನಲ್ಲಿ ದಾಖಲಾಯಿತು.

ಜಿಲ್ಲೆಗಳಲ್ಲಿ ಹವಾಗುಣವು ಬಹುತೇಕ ಒಣ ಹವೆ ಇರುವ ಪ್ರದೇಶಗಳೇ ಹೆಚ್ಚು ಸಾಧಾರಣ ಪ್ರಮಾಣ ಮಳೆಯಾಗುತ್ತದೆ. ಬೇಸಿಗೆಯಲ್ಲಿ ರಾಜ್ಯದಲ್ಲಿಯೆ ಅತಿ ಹೆಚ್ಚು ಅಂದರೆ ೪೫° ಡಿಗ್ರಿ ವರೆಗೆ ಉಷ್ಣತೆ ಇರುತ್ತದೆ.

- **ಮಳೆ ಹಾಗೂ ನದಿಗಳು**

ಈ ಆರು ಜಿಲ್ಲೆಗಳಲ್ಲಿ ಮಳೆಯ ಪ್ರಮಾಣ ವಾರ್ಷಿಕ ಸರಾಸರಿ, ಬಳ್ಳಾರಿ ೬೩೬, ಗುಲ್ಬರ್ಗಾ ೭೭೭, ಕೊಪ್ಪಳ ೫೭೩, ರಾಯಚೂರು ೬೨೧, ಜಿಲ್ಲಾ ಸರಾಸರಿ ವಾರ್ಷಿಕ ಮಳೆ (ಮಿಮೀ) ಬರುವುದು. ಈ ಜಿಲ್ಲೆಗಳಲ್ಲಿ ಕೃಷಿಯು ಮಳೆಗೆ ಹೆಚ್ಚು ಅವಲಂಬಿತರಾಗಿರುವರು. ಬಳ್ಳಾರಿ ಜಿಲ್ಲೆಯಲ್ಲಿ ಕೃಷಿಗೆ ನೀರಿನ ಸರಬರಾಜು ತುಂಗಭದ್ರ ನದಿ ಮತ್ತು ಹೊಸಪೇಟೆಯಲ್ಲಿನ ತುಂಗಭದ್ರ ಅಣೆಕಟ್ಟಿನಿಂದ ಸಹಾಯಕ ಆಗುತ್ತದೆ. ಇದರಿಂದ ಕೆಲವು ಪ್ರದೇಶಗಳು ನೀರಾವರಿ ಕೃಷಿಯಾಗಿದೆ. ರಾಯಚೂರು ಜಿಲ್ಲೆಯು ದಕ್ಷಿಣದಲ್ಲಿ ತುಂಗಭದ್ರಾ ನದಿ ಹಾಗೂ ಉತ್ತರದಲ್ಲಿ ಕೃಷ್ಣಾ ನದಿಯು ಹರಿಯುತ್ತಿದ್ದು, ಬಹುತೇಕ ಬಯಲು ಪ್ರದೇಶವನ್ನು ಹೊಂದಿದೆ.

- **ಮಣ್ಣು ಮತ್ತು ಕೃಷಿ**

ಈ ಜಿಲ್ಲೆಗಳಲ್ಲಿ ಮಣ್ಣುಗಳನ್ನು ಮೂರು ಪ್ರಮುಖ ಗುಂಪುಗಳಾಗಿ ವಿಂಗಡಿಸಬಹುದು. ಅವುಗಳು ಕರೆಕಲ್ಲು ಮಣ್ಣು ಮಧ್ಯಮ ಕಪ್ಪು ಮಣ್ಣು ಹಾಗೂ ಆಳವಾದ ಕಪ್ಪು ಮಣ್ಣು, ಮರಳುಮಿಶ್ರಿತ ಜೇಡಿ ಮಣ್ಣು ಹಾಗೂ ಜಂಬಟ್ಟಿಗೆ ಮಣ್ಣು ಸಹ ಕೆಲವೆಡೆ ಕಂಡುಬರುತ್ತದೆ. ಈ ಮಣ್ಣುಗಳ ವಿಧಾನಗಳನ್ನು ಸಹ ಗುರುತಿಸಬಹುದು. ಕಪ್ಪು ಮಿಶ್ರಿತ ಮಣ್ಣು ಕೆಲವು ಬಣ್ಣದಿಂದ ಮಾಸಿನ ಕಂದು ಬಣ್ಣವಾಗಿದ್ದು, ಕಡಿಮೆ ಆಳದಿಂದ ಮಧ್ಯದ ಆಳದವರಿಗೆ ಇರುತ್ತದೆ. ಈ ಮಣ್ಣಿನ ಮಾದರಿಯನ್ನು ಯಾದಗಿರಿ (ತಾ) ಕೆಲವು ಭಾಗಗಳಲ್ಲಿ ಸುರಪುರ ಹಾಗು ಕೆಲವು ತಾಲ್ಲೂಕುಗಳ ಕೆಲವೆಡೆಗಳಲ್ಲಿ ಕಾಣಬಹುದು. ಜೇಡಿಮಣ್ಣು ಮಳೆಮಿಶ್ರಿತ ಹಾಗೂ ನದಿಯ ಹತ್ತಿರ ಇರುವ ತಾಲ್ಲೂಕುಗಳು ನೀರಾವರಿ ಉಪಯೋಗಿಸುವ ಪ್ರದೇಶಗಳಲ್ಲಿ ಈ ಮಣ್ಣು ಇದೆ. ಇಲ್ಲಿ ಎಳ್ಳು, ರೇಷ್ಮೆ, ಕಬ್ಬು, ಹೆಸರು, ಬಾಳೆ, ಭತ್ತ, ಜೋಳ, ಹತ್ತಿ, ದ್ವಿದಳ ಧಾನ್ಯಗಳನ್ನು ಬೆಳೆಯಬಹುದು[೧].

ಕಪ್ಪು ಮಣ್ಣಿನ ಮಾದರಿಯನ್ನು ತಿಳಿಯುವುದಾದರೆ ಇದು ಕಡಿಮೆ ಆಳದಿಂದ ಮಧ್ಯಮವಾಗಿರುತ್ತದೆ. ಈ ಮಣ್ಣು ಎತ್ತರದ ಪ್ರದೇಶಗಳಲ್ಲಿ ಹಾಗೂ ಮರಳು ಮಿಶ್ರಿತ ಮಣ್ಣಿನ ಮಾದರಿ ಕಂಡುಬಂದರೆ ಕಣಿವೆ ಹಾಗು ಮೈದಾನದ ಪ್ರದೇಶದಲ್ಲಿ ಹೆಚ್ಚು ಆಳದವರೆಗಿನ ಕಪ್ಪು ಮಣ್ಣಿನ ಮಾದರಿಯನ್ನು ಕಾಣಬಹುದು.

- **ಬೆಳೆಯುವ ಪದ್ಧತಿಗಳು**

ನಿಶ್ಚಿತ ಬೆಳೆ ಪದ್ಧತಿಗಳನ್ನು ಅನುಸರಿಸದೇ ಹವಾಮಾನಕ್ಕೆ ತಕ್ಕಂತೆ ಬೆಳೆತಳಿಗಳನ್ನು ಬದಲಿಸುವುದು ಅವಶ್ಯಕ, ಈ ಜಿಲ್ಲೆಗೆ ಸೀಮಿತವಾದಂತೆ ಮಣ್ಣಿನ ಮಾದರಿ ಮತ್ತು ಬಿತ್ತನೆ ಕಾಲಕ್ಕೆ

ಅನುಗುಣವಾಗಿ ಬೆಳೆಗಳನ್ನು ಬೆಳೆಯುವರು. ಉದಾಹರಣೆಗೆ ಕೃಷಿಯಲ್ಲಿ ಗುಲ್ಬರ್ಗಾ ಜಿಲ್ಲೆಯ ಯಾದಗಿರಿ ತಾಲ್ಲೂಕಿನಲ್ಲಿ ಹೆಡಗಿ ಮುದ್ರದಲ್ಲಿನ ರೇಷ್ಮೆ ಕೃಷಿ ಕ್ಷೇತ್ರಗಳು ಹಿಪ್ಪೇನೇರಳೆ ಸಸಿಗಳನ್ನು ಬೆಳೆದು ರೈತರಿಗೆ ಪೂರೈಸುತ್ತಿವೆ. ಸುರಪುರ ತಾಲ್ಲೂಕು ಕವಡಿಮಟ್ಟಿಯ ರೇಷ್ಮೆ ಕೃಷಿ ಕ್ಷೇತ್ರವನ್ನು ಮಹಿಳಾ ಪ್ರತ್ಯೇಕಿಸಿ ಕ್ಷೇತ್ರವೆಂದು ಪರಿಗಣಿಸಿ ವಸತಿಗೃಹ ಕಟ್ಟಿಸಿ ಕೊಡುವಕ್ರಮ ಕೈಗೊಳ್ಳಲಾಗಿದೆ[೨].

- **ಕೈಗಾರಿಕೆಗಳು (ಖನಿಜಗಳ ಸಂಪತ್ತು)**

ಈ ಜಿಲ್ಲೆಗಳಲ್ಲಿ ಸಾಮಾನ್ಯವಾಗಿ ಬೆಟ್ಟಗಳು ಪ್ರಾಕೃತಿಕವಾಗಿ ರೂಪಾಂತರ ಹೊಂದಿದ ಪ್ರಾಚೀನ ಶಿಲಾಯುಗಕ್ಕೆ ಸೇರಿದವು. ಅಲ್ಲಲ್ಲಿ ಗ್ರಾನೈಟ್ ಕಲ್ಲಿನ ಬೆಟ್ಟಗಳು ಕಾಣುತ್ತವೆ; ಉಳಿದಂತೆ ಸಮತಟ್ಟಾದ ಬಯಲು ಪ್ರದೇಶಗಳು ಇವೆ. ಈ ಶಿಲಾ ಪದರಗಳಲ್ಲಿ ನೈಸ್ ಶಿಲೆಗಳು, ಪದರಗಳ ಶಿಲೆಗಳು, ಬೆಣಚುಕಲ್ಲುಗಳು ಇವೆ. ಗ್ಯಾ೨೭೦ ಯಾದಗಿರಿ ಮತ್ತು ಸುರಪುರದಲ್ಲಿ ದೊರೆಯುವ ಉತ್ತಮ ದರ್ಜೆಯ ಬೆಣಚುಕಲ್ಲು (ಕ್ವಾರ್ಟ್ಸ್) ಕಲ್ಲು ಈ ಜಿಲ್ಲೆಯಲ್ಲಿ ಉಪಯೋಗಿಸಿ ಗಾಜು ತಾಯಾರಿಸುವುದರಿಂದ ಸ್ಥಳೀಯರಿಗೆ ಉದ್ಯೋಗವಕಾಶ ದೊರಕುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಕಬ್ಬಿಣ ಮ್ಯಾಂಗನೀಸ್, ತಾಮ್ರ ಮತ್ತು ಸೀಸ ಗಣಿಗಳು ಸಾಕಷ್ಟಿವೆ. ಇದರಿಂದ ಈ ಬೃಹತ್ ಪ್ರದೇಶ ಕೈಗಾರಿಕಾ ಉದ್ಯಮವಾಗಿದೆ, ಸ್ಥಳೀಯರಿಗೆ ಉದ್ಯೋಗ ಲಭಿಸಿದೆ. ಕೊಪ್ಪಳ ಜಿಲ್ಲೆಯಲ್ಲಿ ಕಬ್ಬಿಣ, ತಾಮ್ರ, ಸೀಸದ ಅದಿರು, ಅಭ್ರಕ, ಸ್ಪಟಿಕ ಶಿಲೆ ಮುಂತಾದ ಖನಿಜಗಳಿವೆ[೩].

ರಾಯಚೂರು ಜಿಲ್ಲೆಯ ಶಕ್ತಿನಗರದಲ್ಲಿ ಇರುವ ಶಾಖೋತ್ಪನ್ನ ವಿದ್ಯುತ್‌ಸ್ಥಾವರ ಕರ್ನಾಟಕದಲ್ಲಿ ಬಳಸಲ್ಪಡುವ ವಿದ್ಯುಚ್ಛಕ್ತಿಯ ಪ್ರಮುಖ ಕೇಂದ್ರಗಳಲ್ಲಿ ಒಂದಾಗಿದೆ. ಹಾಗೂ ಲಿಂಗಸೂಗೂರು ತಾಲ್ಲೂಕಿನ ಹಟ್ಟಿ ಚಿನ್ನದ ಗಣಿಯು ದೇಶದಲ್ಲಿಯೇ ಅತಿ ಹೆಚ್ಚು ಚಿನ್ನ ಅದಿರು ಹೊಂದಿರುವ ಗಣಿಯಾಗಿದೆ.

- **ನದಿಗಳು**

ಕರ್ನಾಟಕದ ಬಯಲು ಪ್ರದೇಶದ ಉತ್ತರ ಭಾಗವು ಭಾರತದ ಎರಡನೆಯ ಅತಿ ದೊಡ್ಡ ಶುಷ್ಕ ಪ್ರದೇಶವಾಗಿದೆ. ಕರ್ನಾಟಕದ ಎತ್ತರದ ತುದಿಯು ಚಿಕ್ಕಮಗಳೂರು ಜಿಲ್ಲೆಯಾಗಿದೆ. ಕರ್ನಾಟಕದಲ್ಲಿ ಏಳು ಜಲಾಶಯದ ಪ್ರದೇಶಗಳಿವೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕು ಹೊಸಪೇಟೆಯಲ್ಲಿ ತುಂಗಭದ್ರಾ ನದಿಯ ಹಾಗೂ ತುಂಗಭದ್ರಾ ಅಣೆಕಟ್ಟು ಕಟ್ಟಲಾಗಿದೆ. ರಾಯಚೂರು ಜಿಲ್ಲೆಯಲ್ಲಿ ಕೃಷ್ಣಾ ನದಿ ಇದೆ. ಕೊಪ್ಪಳ ಜಿಲ್ಲೆಯಲ್ಲಿ ಮಳೆ ಕಡಿಮೆ ಬಿದ್ದರೂ ತುಂಗಭದ್ರಾ ಮತ್ತು ಕೃಷ್ಣಾ ನದಿಗಳು ಎರಡೂ ಪಾರ್ಶ್ವಗಳಲ್ಲಿ ಹರಿಯುವುದರಿಂದ ಜಲಸಂಪನ್ಮೂಲ ಉತ್ತಮವಾಗಿದೆ. ತುಂಗಭದ್ರಾ ನದಿ ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳ ಸರಹದ್ದಾಗಿ ಕ್ರಮಿಸುತ್ತದೆ.

- **ಅರಣ್ಯಗಳು**

ಕರ್ನಾಟಕದ ಅರಣ್ಯ ಪ್ರದೇಶದ ಶೇಕಡಾವಾರು ಸಮಸ್ತ ಭಾರತದ ಸರಾಸರಿಯಾದ ೨೩% ಗಿಂತ ಸ್ವಲ್ಪ ಕಡಿಮೆಯಿದೆ ಹಾಗು ರಾಷ್ಟ್ರೀಯ ಅರಣ್ಯ ನೀತಿಯಲ್ಲಿ ವಿಧಿಸಲಾದ ೩೩% ಗಿಂತ

ಗಮನಾರ್ಹವಾಗಿ ಕಡಿಮೆಯಿದೆ. ಕೊಪ್ಪಳ ಜಿಲ್ಲೆಯ ಅರಣ್ಯ ಪ್ರದೇಶದ ವಿಸ್ತೀರ್ಣ ೨೯೪೪೫೧ ಹೆಕ್ಟೇರುಗಳು ಇದೆ. ಕಾಡುಗಳಲ್ಲಿ ದೊರಕುವ ಮರಗಳು ಜಾಲಿ, ಹುಣಸೆ, ಹುರಗಲು, ಹೊನ್ನೆ, ಕಮ್ಮಾರ, ನಲ್ಲಮಡ್ಡಿ, ಬಿಲ್ವ, ಬಾಗೆ, ಕಕ್ಕೆ, ಸೀತಾಫಲ ಮುಂತಾದ ಗಿಡಗಳು ಮರಗಳುಕಾಡುಗಳ ಕೊರತೆಯಿಂದ ಪ್ರಾಣಿಪಕ್ಷಿಗಳ ಸಂಖ್ಯೆಯೂ ಕಡಿಮೆಯಾಗುತ್ತಿದೆ. ಚಿರತೆ, ತೋಳ, ಕತ್ತೆಕಿರುಬ, ನರಿ, ಕಪಿ ಮತ್ತು ಜಿಂಕೆಗಳು ಅಲ್ಲಲ್ಲಿ ಕಂಡುಬರುತ್ತವೆ. ಹಾವುಗಳ ಸಂತತಿ ಹೆಚ್ಚು ಇವೆ. ಚೇಳು, ಹಲ್ಲಿ, ನೀರಹಾವು, ಮುಣ್ಣುಮುಕ್ಕ, ನಾಗರ ಹಾವು ಎಲ್ಲೆಡೆಯೂ ಇವೆ. ಬಾತು, ನೀರಕೋಳಿ, ಕಾಗೆ, ಗಾಜುಗ, ಮುಖ್ಯವಾದ ಪಕ್ಷಿಗಳು, ಹಸು, ಎಮ್ಮೆ, ಕುರಿ, ಮೇಕೆ, ಕುದುರೆ ಮತ್ತು ಕೋಳಿ ಮುಖ್ಯ ಸಾಕುಪ್ರಾಣಿಗಳು.

- **ಭೂ ಸಾರಿಗೆ**

ಜಿಲ್ಲೆಯಿಂದ ಬೇರೆ ಬೇರೆ ಜಿಲ್ಲೆಗಳಿಗೆ ಹೋಗಲು ಬಸ್ಸುಗಳ ವ್ಯವಸ್ಥೆ ಇದೆ. ಕೆಲವು ಜಿಲ್ಲೆಗಳು ರೈಲ್ವೆ ವ್ಯವಸ್ಥೆಯ ಭಾರತೀಯ ರೈಲ್ವೆಯ ದಕ್ಷಿಣ ಮಧ್ಯ ರೈಲ್ವೆ ಅಡಿಯಲ್ಲಿ ಬರುತ್ತದೆ. ರೈಲು ನಿರ್ಮಾರ್ಗ, ಹಾಗೂ ರೈಲು ನಿಲ್ದಾಣದ ಮೂಲಕ ಭಾರತೀಯ ರೈಲ್ವೆಯಿಂದ ಉಳಿದ ಭಾಗಗಳ ಜೊತೆ ಸಂಪರ್ಕ ಹೊಂದಿರುವವು. ಜಿಲ್ಲೆಯ ಒಳಗೆ ಜಿಲ್ಲಾ ಕೇಂದ್ರದಿಂದ ಎಲ್ಲಾ ತಾಲ್ಲೂಕುಗಳನ್ನು ಕೂಡಿಸುವ ರಾಜ್ಯ ಹೆದ್ದಾರಿಗಳಿವೆ. ಕೊಪ್ಪಳದಿಂದ ರಾಯಚೂರು, ಗದಗ, ಶೋರಾಪುರ, ಬಳ್ಳಾರಿ, ಮೊದಲಾದ ಜಿಲ್ಲೆಯ ಹೊರ ಸ್ಥಳಗಳಿಗೆ ರಸ್ತೆ ಸಂಪರ್ಕವಿದೆ[೪].

- **ಸಣ್ಣ ಮತ್ತು ಗುಡಿ ಕೈಗಾರಿಕೆಗಳು**

ಪ್ರತಿಯೊಂದು ಜಿಲ್ಲೆಯಲ್ಲಿ ಕಂಡುಬರುವ ಗುಡಿಕೈಗಾರಿಕೆಗಳು ಕುಟುಂಬಗಳ ಆಧಾರವಾಗಿದೆ. ಊದಬತ್ತಿ, ಚಾಪೆ, ಕಂಬಳಿ, ಈಚಲು ಪೊರಕೆ, ಸೀರೆನೇಯ್ಗೆ, ಮಡಿಕೆ-ಕುಡಿಕೆ, ರೇಷ್ಮೆ, ವಿಭೂತಿ, ಸುಣ್ಣಕಲ್ಲು ತಯಾರಿಸುವ ಗುಡಿ ಕೈಗಾರಿಕೆಗಳಿದ್ದು, ಅವು ಕಾಲ ಕಳೆದಂತೆ ಅಮೂರ್ತಗೊಂಡು ಇಂದುಅಲ್ಪಸ್ವಲ್ಪ ಪ್ರಮಾಣದಲ್ಲಿ ಕಂಡಬರುತ್ತಿವೆ. ಇಲ್ಲಿ ಅತಿ ಹೆಚ್ಚಾಗಿ ಕುರಿ, ಕೋಳಿ, ಹಂದಿ, ಹಸು ಮುಂತಾದವುಗಳ ಸಾಕುಪ್ರಾಣಿಗಳ ಸಾಕಾಣಿಕೆ ಕೂಡ ಕಂಡುಬರುತ್ತದೆ.

ಈ ಜಿಲ್ಲೆಗಳಲ್ಲಿ ಸ್ಮಾರಕಗಳು, ಧಾರ್ಮಿಕ ಪುಣ್ಯಕ್ಷೇತ್ರಗಳು ಹಾಗೂ ಐತಿಹಾಸಿಕ ಕೋಟೆ ಪ್ರವಾಸಿಗರನ್ನು ಸೆಳೆಯುತ್ತಿವೆ. ಅಂತೆಯೇ ನೈಸರ್ಗಿಕ, ವೈದ್ಯಕೀಯ, ಕ್ರೀಡೆ, ಸಾಹಸ, ಶೈಕ್ಷಣಿಕ ತೊಡುಗೆ, ಸಂಪ್ರದಾಯ, ಹಬ್ಬ ಹರಿದಿನ, ಆಚಾರ ವಿಚಾರ, ಕರಕುಶಲ ಹೀಗೆ ಶ್ರೀಮಂತ ಸಾಂಸ್ಕೃತಿಕ ಪರಂಪರೆಯನ್ನು ಕಾಣಬಹುದು. ವಿಫಲವಾದ ಸಸ್ಯಪ್ರಾಣಿ ಸಂಪತ್ತು ಇಲ್ಲಿನ ವಿವಿಧ ಧರ್ಮಗಳ ಐತಿಹಾಸಿಕ ಪರಂಪರೆಯ ನಾಡು. ವೈವಿಧ್ಯಮಯ ಕಲೆ ಮತ್ತು ವಾಸ್ತುಶಿಲ್ಪ ದೇವಾಲಯಗಳ ಬೀಡು. ಅಲ್ಲದೆ ಅತಿಥಿ ಸತ್ಕಾರ ಹೃದಯ ವೈಶಾಲ್ಯ, ಭಾಷೆ ಸಾಮರಸ್ಯಗಳು ಈ ಜಿಲ್ಲೆಗಳಲ್ಲಿ ಪ್ರಧಾನ ಅಂಶಗಳೂ ಹೌದು.

"ಆರು ಜಿಲ್ಲೆಗಳು ಸರ್ಕಾರದ ಯೋಜನೆ ಅಡಿಯಲ್ಲಿ ಅಭಿವೃದ್ಧಿ ಕಾರ್ಯಗಳು ಸಮಗ್ರ ಗ್ರಾಮ ಸ್ವಸಹಾಯ ಯೋಜನೆ, ಗ್ರಾಮೀಣ ಇಂಧನ ಕಾರ್ಯಕ್ರಮ, ಮಾನವ ದಿನಗಳ ಕೆಲಸಗಳ ಸೃಷ್ಟಿ ನಿರ್ಮಲ ಗ್ರಾಮಯೋಜನೆ, ಇಂದಿರಾ ಆವಾಸ್ ಯೋಜನೆ, ಪ್ರಧಾನ ಮಂತ್ರಿಗಳ ರಸ್ತೆ ನಿರ್ಮಾಣ ಯೋಜನೆ, ಕೊಳವೆ ನೀರು ಸರಬರಾಜು ಯೋಜನೆ ಮೊದಲಾದವು ಗ್ರಾಮಗಳ ನಾಗರಿಕ ಸೌಲಭ್ಯಗಳನ್ನು ಹೆಚ್ಚಿಸಲು ಪಂಚಾಯಿತಿ ಸಮಿತಿಗಳು ಗ್ರಾಮೀಣ ಪ್ರದೇಶದ ಪ್ರತಿನಿಧಿಗಳಿಂದ ಕೂಡಿದ್ದು, ಈ ಪ್ರದೇಶದ ಅಭಿವೃದ್ಧಿ ಕಾರ್ಯಗಳ ಮುಖ್ಯ ಜವಾಬ್ದಾರಿ ಹೊತ್ತಿವೆ. ದೇಶದ ಅಭಿವೃದ್ಧಿಯು ಮೂಲ ಗ್ರಾಮಗಳು ಅವುಗಳ ಅಭಿವೃದ್ಧಿ ಜನರ ಅಭಿವೃದ್ಧಿ, ನಗರದ ಅಭಿವೃದ್ದಿ, ಜಿಲ್ಲೆಯ ಅಭಿವೃದ್ಧಿ, ರಾಜ್ಯದ ಅಭಿವೃದ್ಧಿ, ಮತ್ತು ದೇಶದ ಅಭಿವೃದ್ಧಿಯಾಗಲು ಸಾಧ್ಯ ಎಂಬುವುದನ್ನು ಈ ನಿಟ್ಟಿನಲ್ಲಿ ತಿಳಿಯಬಹುದು.

**೨.೨. ಕಲ್ಯಾಣ ಕರ್ನಾಟಕದ ನಾಯಕ ಸಂಸ್ಥಾನಗಳ ಐತಿಹಾಸಿಕ ಹಿನ್ನೆಲೆ**

ಕರ್ನಾಟಕ ಚರಿತ್ರೆಯಲ್ಲಿ ಸಂಸ್ಥಾನಕ್ಕೆ ಒಂದು ವಿಶಿಷ್ಠ ಸ್ಥಾನವಿದೆ. ವಿಜಯನಗರ ಆಡಳಿತದ ಕಾಲದಲ್ಲಿ ಮತ್ತು ವಿಜಯನಗರದ ನಂತರದ ಕಾಲದಲ್ಲಿ ತಮ್ಮ ತಮ್ಮ ಪಾಳೆಯ ಪಟ್ಟಿಯನ್ನು ತಮ್ಮ ಮುಖ್ಯ ನಿವಾಸಸ್ಥಾನವಾದ ಪಟ್ಟಣಗಳಿಗೆ ವೈರಿ ಅಭೇದಕವಾದ ಕೋಟೆಕೊತ್ತಲುಗಳನ್ನು ಕಟ್ಟಿಸಿ, ಕಟ್ಟಿಮನೆಗಳನ್ನು ಸ್ಥಾಪಿಸಿ, ಗಡಿಗಳನ್ನು ನಿರ್ಣಯಿಸಿಕೊಂಡು ಪ್ರತಿಕಟ್ಟಿಮನೆಗೂ ಗಡಿ ಪ್ರದೇಶಗಳಿಗೂ ಒಬ್ಬೊಬ್ಬ ನಾಯಕನನ್ನು ನೇಮಕ ಮಾಡಿರುವುವನ್ನು ಕಾಣುತ್ತೇವೆ. ನಾಯಕರಿಗೆ ಪಾಳೆಯಾಗರ ಎಂದು ಕರೆಯಲಾಗುತ್ತಿತ್ತು. ಕರ್ನಾಟಕದಲ್ಲಿ ಸುಮಾರು ಹತ್ತನೆ ಶತಮಾನದಲ್ಲಿ ಪಾಳೆಯಾಪಟ್ಟು ಸ್ಥಾಪನೆಯಲ್ಲಿ ಈ ಪಾಳೇಗಾರರು ಪ್ರಖ್ಯಾತಿಹೊಂದಿದರು. ೭೧ ನಾಯಕ ಸಂಸ್ಥಾನಗಳು ಈ ಪಾಳೆಯ ಪಟ್ಟುಗಳಲ್ಲಿ ಹಿಂದಿಗೂ ಜೀವಂತ ಮನೆತನಗಳು ಇರುವುದನ್ನು ಕಾಣಬಹುದಾಗಿದೆ ಈ ನಾಯಕ ವಂಶಸ್ಥರು ಕರ್ನಾಟಕ ಸಿಂಹಾಸನ ಸ್ಥಾಪನೆಯಾಗುವ ಮೊದಲು ನೆಲೆಸಿದ್ದು ಇವರು ಧೈರ್ಯ ಸಾಹಸಗಳಿಗೆ ಅಸಾಮಾನ್ಯರು ಎನಿಸಿಕೊಂಡಿದ್ದಾರೆ. ದಕ್ಷಿಣ ಒಂದುಸ್ಥಾನದಲ್ಲಿ, ಆಕ್ರಮಣ ಮಾಡಿದ ಮುಸಲ್ಮಾನರ ದಾಳಿಯನ್ನು ತಡೆಗಟ್ಟಿ ಒಂದು ಸಂಸ್ಕೃತಿಯನ್ನು ಕಾಪಾಡಿಕೊಂಡು ಜನಸೇವೆಯಲ್ಲಿ ನಿರತರಾಗಿದ್ದರು. ಇವರ ಶೌರ್ಯ ಪರಾಕ್ರಮಗಳನ್ನು ಮುಸಲ್ಮಾನರು ಈ ಜನಾಂಗದವರಿಗೆ ಅಂಜಿಕೆಯ ಇಲ್ಲದವರು 'ಬೇಡ' ಎಂದು ಕರೆದರು. ಉದಾ: ಏಕೈಕ ವೀರ ಪುರುಷನಾಗಿದ್ದಾನೆ. ಬೇಡ ಬುಡಕಟ್ಟಿನವನು ಕಣ್ವ ಋಷಿಯ ವಂಶಜರೆಂದು ನಂಬಿಕೆಯುಳ್ಳವರಾಗಿದ್ದಾರೆ.

ಬ್ರಿಟಿಷರ ಆಳ್ವಿಕೆಯಿಂದ ಕರ್ನಾಟಕವನ್ನು ಮುಂಬೈ ಕರ್ನಾಟಕ, ಮದ್ರಾಸ್ ಕರ್ನಾಟಕ, ಮೈಸೂರು ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕ, ಈ ರೀತಿ ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿತ್ತು. ಸ್ವತಂತ್ರ ನಂತರ ಕರಾವಳಿ ಕರ್ನಾಟಕ, ಕಿತ್ತೂರು ಕರ್ನಾಟಕ, ಮಲೆನಾಡ

ಕರ್ನಾಟಕ ಮಧ್ಯಕರ್ನಾಟಕ, ಉತ್ತರ ಕರ್ನಾಟಕ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೈದರಾಬಾದ್ ಕರ್ನಾಟಕದ ಭೌಗೋಳಿಕ ಪರಿಸರದ ಬಗ್ಗೆ ಅಧ್ಯಯನ ಮಾಡಲಾಗುತ್ತದೆ. ಹೈದರಾಬಾದ್ ಕರ್ನಾಟಕಕ್ಕೆ ಸಂವಾದಿಯಾಗಿ ಕಲ್ಯಾಣ ಕರ್ನಾಟಕ ಎಂಬ ಪದವನ್ನು ಬಳಸಲಾಗಿದೆ. 'ಕಲ್ಯಾಣ' ಎನ್ನುವ ಪದ ಪ್ರಾಚೀನ ಹಾಗೂ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದೆ ಕನ್ನಡ ಸಾಹಿತ್ಯಕ್ಕೆ ಹೊರತಿರುವು ಕೊಟ್ಟ ವಚನ ಸಾಹಿತ್ಯದ ಕೇಂದ್ರವಾಗಿದ್ದು, ಸಾಮಾಜಿಕ ಮತ್ತು ಧಾರ್ಮಿಕವಾಗಿ ಹೊಸ ಹಾದಿ ಮಾಡಿಕೊಡುವಲ್ಲಿ ಮಹತ್ವ ಪೂರ್ಣವಾಗಿದೆ. 'ಹೈದರಾಬಾದ್ ನಿಜಾಮನ ಆಡಳಿತದಲ್ಲಿ ಹೈದರಾಬಾದ್ ಪ್ರದೇಶಕ್ಕೆ 'ಭಾಗ್ಯನಗರ' ಎಂದು ಕರೆಯುತ್ತಿದ್ದರು. ಈ ಹೈದರಾಬಾದ್ ಕರ್ನಾಟಕ ಅಥವಾ ಕಲ್ಯಾಣ ಕರ್ನಾಟಕದ ನಾಯಕರ ಸಂಸ್ಥಾನಗಳಾದ ಸುರಪುರ, ದೇವದುರ್ಗ, ಗುಡೆಗುಂಟೆ, ಗುಂತ್‌ಗೊಳ, ಆನೆಗೊಂದಿ, ಕನಕಗಿರಿ, ಗುಡೇಕೋಟಿ, ಜರಿಮಲೆ, ಎಂಬ ಎಂಟು ಸಂಸ್ಥಾನಗಳ ನಾಯಕರ ಭೌಗೋಳಿಕ ಐತಿಹಾಸಿಕ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

- **ಸುರಪುರ ಸಂಸ್ಥಾನದ ನಾಯಕರ ಐತಿಹಾಸಿಕ ಹಿನ್ನೆಲೆ**

ಯಾದಗಿರಿ ಕರ್ನಾಟಕ ರಾಜ್ಯದ ಒಂದು ಜಿಲ್ಲೆಯಾಗಿದೆ. ೨೦ನೇ ಜಿಲ್ಲೆ 'ಯಾದಗಿರಿ' ಏಪ್ರಿಲ್ ೧೦ ೨೦೧೦ರಂದು ಅಸ್ತಿತ್ವಕ್ಕೆ ಬಂತು. ಇಲ್ಲಿ ಶಹಾಪುರ ತಾಲ್ಲೂಕು ಮತ್ತು ಸುರಪುರ ತಾಲ್ಲೂಕುಗಳನ್ನು ಸೇರಿಸಿ ಹೊಸ ಜಿಲ್ಲೆ ರಚನೆ ಮಾಡಲಾಗಿದೆ. ಯಾದಗಿರಿಯು ೫.೬ ಕಿ.ಮೀ ವಿಸ್ತಾರವಿದೆ. ಜನಸಂಖ್ಯೆ ಯಲ್ಲಿ ೨೦೦೧ರಲ್ಲಿ ೫೮೮೦೨ ರಷ್ಟು ಇದೆ. ಯಾದಗಿರಿಯು ಮೊದಲು ಗುಲ್ಬರ್ಗ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿತ್ತು. ಯಾದಗಿರಿ ತಾಲ್ಲೂಕಿನ ಉತ್ತರದಲ್ಲಿ ಸೇಡಂ, ವಾಯುವ್ಯದಲ್ಲಿ ಚಿತ್ತಾಪುರ, ಪಶ್ಚಿಮದಲ್ಲಿ ಶಹಾಪುರ ಮತ್ತು ಪೂರ್ವದಲ್ಲಿ ಆಂಧ್ರಪ್ರದೇಶದ ಮಹಬೂಬ್‌ನಗರದ ಮುಖ್ತಲ್ ತಾಲ್ಲೂಕುಗಳಿವೆ. ಯಾದಗಿರಿ ಜಿಲ್ಲೆಯ ತಾಲ್ಲೂಕುಗಳಾದ 'ಶಹಾಪುರ, ಸುರಪುರ, ವಡಗೇರಾ, ಗುರುಮಠಕಲ್, ಈ ತಾಲ್ಲೂಕುಗಳಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಸುರಪುರ ಸಂಸ್ಥಾನದ ಭೌಗೋಳಿಕ ಹಿನ್ನೆಲೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ಸುರಪುರ ಸಂಸ್ಥಾನದಲ್ಲಿ 'ಗೋಸಲವಂಶ'ದವರು ಕ್ರಿ.ಶ.೧೬೩೬ ರಿಂದ ೧೮೫೮ ರವರೆಗೆ ಹನ್ನೆರಡು ಜನ ನಾಯಕ ಅರಸರು ಸುರಪುರ ಸಂಸ್ಥಾನದಲ್ಲಿ ಆಳ್ವಿಕೆ ಮಾಡಿದ್ದಾರೆ. ಅರಸ ನರಸಿಂಹನಾಯಕ ಸುರಪುರ ಸಂಸ್ಥಾನದ ಆರಂಭಿಕ ಪಾಳೆಯಗಾರನಾಗಿದ್ದು, ಈ ಅರಸನ ಮೂಲ ಆಂಧ್ರಪ್ರದೇಶದ ರತ್ನಗಿರಿ ಭಾಗದಲ್ಲಿ ತಲೆಯೆತ್ತಿದನು. ನಂತರ ನರಸಿಂಹನಾಯಕ ತನ್ನ ಮಗ ವೀರಬೊಮ್ಮನಾಯಕನೆಂಬ ಅರಸ ಮೂಲಕ ಸಾರಂಗಕೊಳ್ಳವನ್ನು ವಶಪಡಿಸಿಕೊಂಡನು. ಒಡೇಯರನಾಯಕ ಮತ್ತು ಸಿಂಗಪ್ಪನಾಯಕ ಮಗನು ಸೇರಿ ಶಕ್ತಿ ಸಾಮರ್ಥ್ಯದಿಂದ

ಸಾರಂಗಕೊಳ್ಳದೇಶಗತಿಯನ್ನು ಗಳಿಸಿದರು. ನಂತರ ಇವರದೇ ಸಾಮರ್ಥ್ಯ ಇರುವ ಒಡೇರನಾಯಕನ ಮಗ ಕಲ್ಲಪ್ಪನಾಯಕನು 'ಕದನ ಕಡುಗಲಿ' ಎಂದೇ ಹೆಸರಾಗಿದ್ದನು. ಈ ಅರಸನು ಆರ್ಥಿಕವಾಗಿ ರಾಜಕೀಯವಾಗಿ ಈ ಸಂಸ್ಥಾನವನ್ನು ಬಲಗೊಳಸಿದ ಕೀರ್ತಿ ಕಲ್ಲಪ್ಪನಾಯಕನಿಗೆ ಸಲ್ಲುತ್ತದೆ.

ಕಲ್ಲಪ್ಪನಾಯಕ ತಾನು ವಿಜಯನಗರದ ಹುಟ್ಟುಗಳೆರಡನ್ನು ಕಂಡುಕೊಂಡಿದ್ದನು ಅದೇರೀತಿ ಸಾರಂಗಕೊಳ್ಳದಿಂದ ಬಿಟ್ಟುಬಂದ ತುಂಬಳಕ್ಕೆ ಬರುತ್ತಾನೆ. ಅದೇ ಸಂದರ್ಭದಲ್ಲಿ ಮುದಗಲ್ಲಿನಲ್ಲಿ ರಿಲ್ಲೆದಾರ ಮುಸ್ತಫಖಾನ್‌ನ ಸ್ನೇಹದ ಕರೆಗೆ ಓಗೊಟ್ಟು ಕಲ್ಲಪ್ಪನಾಯಕ ತನ್ನ ಏಳು ಮಕ್ಕಳೊಂದಿಗೆ ಮುದಗಲ್‌ಗೆ ಹೋಗುತ್ತಾನೆ. ಅಲ್ಲಿಯೆ ತಳವೂರಿದ್ದ ಆತನ ಏಳು ಜನ ಮಕ್ಕಳು ಬೇರೆ ಬೇರೆ ಕಡೆ ಚದುರಿಹೋಗಿ ಸ್ವತಂತ್ರ ಪ್ರದೇಶಳಿಗೆ ದೊರೆಗಳಾದರು.

ಈ ಏಳು ಮಕ್ಕಳಲ್ಲಿ ಏಳನೆಯ ಚೆನ್ನಹಣಮನಾಯಕನು ತನ್ನ ಸಹೋದರ ಹಿರೇಹಣಮನಾಯಕನ ರಕ್ಷಣೆಯಲ್ಲಿ ಸಗರನಾಡಿನ ಕಕ್ಕೇರಿ ಭಾಗದಲ್ಲಿ ನಾಯಕನಾಗಿ ಹೊರಹೊಮ್ಮಿದನು, ಈತನ ತರುವಾಯ ಹಾವಿನಾಯಕ, ಪೆದ್ದಕೋಮನಾಯಕ, ಉಗ್ರಸಿಂಗನಾಯಕ, ಮದರಿನಾಯಕ, ವೀರಝುಂಪನಾಯಕ ಬಲಸೋಮನಾಯಕರು ಈ ಅರಸರು ಆಡಳಿತ ನಡೆಸಿದರೆ ವಂಶಾವಳಿಯಿಂದ ತಿಳಿಯಬಹುದು. ಅದೇ ಘಟನೆ, ಸಾಧನೆ, ಆಡಳಿತ ಸಂದರ್ಭಗಳು ಅರಸನನ್ನು ಗುರುತಿಸಲು ಸಾಧ್ಯವಾಗುತ್ತದೆ. ಈ ಅರಸರಲ್ಲಿ ಬಲಸೋಮನಾಯಕರು ಕಕ್ಕೇರಿ ಬಿಟ್ಟು ಐದುಭಾವಿ ಹಾಗೂ ಕೃಷ್ಣಾ ನದಿಯ ಗಡಿಪ್ರದೇಶದಲ್ಲಿ ಆಶ್ರಯ ಪಡೆದರು. ಐದಾರು ತಲೆಮಾರುಗಳ ದೀರ್ಘ ಸೋತು ಬೇರೆ ಸ್ಥಳದಲ್ಲಿ ತನ್ನ ಜೀವನಕಳೆದ ಬಗ್ಗೆ ಗುರುತಿಸಲಾಗಿದೆ. ನಂತರ ಈತನ ಮಗ ೪ ಸುರಪುರ ಹಿರೇಪಾಮನಾಯಕನು ಕಕ್ಕೇರಿಯನ್ನು ಕಸಿದುಕೊಂಡಿದ್ದ ಗೌಡ ದೇಸಾಯಿಯರನ್ನು ಕೊಂದು ತನ್ನ ಪೂರ್ವಜರ ಜಮೀನು ಜಹಗೀರುಗಳನ್ನೆಲ್ಲ ಮರಳಿ ಸಂಪಾದಿಸಿದ.

ಹಿರೇಪಾಮನಾಯಕನ ನಂತರ ಅವನ ಮಗ ಕಕ್ಕೇರಿ ಪ್ರದೇಶವನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ಪ್ರಾರಂಭಿಸುತ್ತಾನೆ. ಈತನಿಗೆ ಇಬ್ಬರು ಮಕ್ಕಳಿದ್ದರು. ಅವರು ಗಡ್ಡಿಲಿಂಗನಾಯಕ ಮತ್ತು ಗಡ್ಡಿಪಿಡ್ಡನಾಯಕರು ಆಗಿದ್ದರು. ಅವರು ಕಕ್ಕೇರಿಯ ಗಡ್ಡಿಯಲ್ಲಿ ವಾಸವಾಗಿದ್ದರಿಂದ 'ಗಡ್ಡಿ' ಎಂಬ ಹೆಸರು ಬಂದಿತು. "ಗಡ್ಡಿಪಿಡ್ಡನಾಯಕನು ಬಿಜಾಪುರ ಮಹ್ಮದ್ ಆದಿಲ್‌ಶಾಹನಿಂದ ಕ್ರಿ.ಶ.೧೬೩೯ ರಲ್ಲಿ ತಾಳಿಕೋಟೆ ಮತ್ತು ಕೊಡೇಕಲ್ ಸರದೇಶಗತಿ ಸಂಪಾದಿಸುವುದರೊಂದಿಗೆ ಸುರಪುರ ಸಂಸ್ಥಾನವನ್ನು ಸ್ಥಾಪಿಸಿದನು"[೫]. ಪಿಡ್ಡನಾಯಕ ಕ್ರಿ.ಶ. ೧೬೩೫ರಲ್ಲಿ ಮೊಗಲ್ ಸರದಾರರು ಬಿಜಾಪುರದ ಮೇಲೆ ದಂಡೆತ್ತಿ ಬಂದು ಡೋಣಿ ಎಂಬ ಪ್ರದೇಶವನ್ನು ಲೂಟಿ ಮಾಡುತ್ತಿದ್ದಾಗಲೇ ಪಿಡ್ಡನಾಯಕ ಮೊಗಲ್ ಸರದಾರರನ್ನು ಹಿಮ್ಮೆಟ್ಟಿಸುತ್ತಾನೆ. ಇದರಿಂದ ಬಿಜಾಪುರದ ಆದಿಲ್‌ಶಾಹಿಗಳಿಗೆ ಸಂತೋಷವಾಯಿತು. ಈತನ ಧೈರ್ಯವನ್ನು ಮೆಚ್ಚಿ ಕ್ರಿ.ಶ. ೧೬೩೮-೯ರಲ್ಲಿ ಪಿಡ್ಡ ನಾಯಕನಿಗೆ ತಾಳಿಕೋಟೆಯ ಕೆಲವು

ಪ್ರದೇಶಗಳನ್ನು ನೀಡಿದನು. ಪಿಡ್ಡನಾಯಕನ ಶಕ್ತಿ-ಸಾಮರ್ಥ್ಯ ನೋಡಿ, ಪಿಡ್ಡನಾಯಕನು ನನ್ನ ಮೇಲೆ ತಿರುಗಿ ಬೀಳುವನು ಎಂಬ ಭ್ರಮೆಯಲ್ಲಿ ಆಲೋಚನೆ ಮಾಡುತ್ತಿದ್ದನು. ಬಾದಷಹನು ಪಿಡ್ಡನಾಯಕ ಅರಸನನ್ನು ಕೊಲ್ಲಲು 'ಮದ್ದಾನೆಯ ಕಾಳಗ' ಏರ್ಪಡಿಸಿದನು. ಪಿಡ್ಡನಾಯಕ ಮದಗಜವನ್ನು ಸೊಕ್ಕು (ಪಳಗಿಸಿ) ಮುರಿದ ಎಂಬ ಐತಿಹ್ಯವೂ ಇದೆ. ಇವನನ್ನು 'ಮದಗಜಮಲ್ಲ'ನೆಂಬ ಬಿರುದನ್ನಿತ್ತು ನಗರ ನಾಡಿನ ದೇಸಾಯಿತನವನ್ನು ವಹಿಸಿಕೊಟ್ಟ ಸ್ನೇಹಪರನಾಗಿ ಉಳಿದನು.

ಪಿಡ್ಡನಾಯಕ ನಂತರ ಅಧಿಕಾರಕ್ಕೆ ಪಾಮನಾಯಕನು ಬಂದನು ಆ ಸಮಯದಲ್ಲಿ ಔರಂಗಜೇಬನ ಆಕ್ರಮಣ ಹಾಗೂ ಶಿವಾಜಿಯ ಲೂಟಿಯಿಂದ ಬಿಜಾಪುರ ತತ್ತರಿಸಿ ಹೋದಾಗ ನೆರವಿಗೆ ನಿಂತವರು ಪಿಡ್ಡನಾಯಕ ಮತ್ತು ಈತನ ಮಗನಾದ ಪಾಮನಾಯಕರು ಇವರು ಇಬ್ಬರು ಅವರ ಇಬ್ಬರ ಮೇಲೆ ಯುದ್ದ ಮಾಡಿ ಆ ಪ್ರದೇಶವನ್ನು ದಕ್ಕಿಸಿಕೊಟ್ಟದ್ದಕ್ಕಾಗಿ ಬಿಜಾಪುರದ ಸುಲ್ತಾನ ಪಿಡ್ಡನಾಯಕನಿಗೆ ಕ್ರಿ.ಶ. ೧೬೬೦ರಲ್ಲಿ ತಾಳಿಕೋಟೆ ಪರಗಣಿ, ನಾಲತ್ವಾಡದ ಪರದೇಶಗತಿ ಹಾಗೂ ಕೊಡೇಕಲ್ ಸಮತಿ ಸರದೇಶಗತಿಯನ್ನು ವಂಶಪಾರಂಪರ್ಯವಾಗಿ ಆದಿಲ್‌ಷಾಹಿಗಳು ನೀಡಿದರು.

ನಂತರ ಬಂದ ಪಾಮನಾಯಕನ ದತ್ತು ಪುತ್ರ ಹಸರಂಗಿ ಪಾಮನಾಯಕ (ಕ್ರಿ.ಶ.೧೬೬೬-೧೬೮೭)ನು ಅಧಿಕಾರಕ್ಕೆ ಬಂದನು. ಹಸರಂಗಿ ಪಾಮನಾಯಕನು ಗಡ್ಡಿಲಿಂಗ ತನ್ನ ತಂದೆಯ ಪಾಲಿನ ಸರದೇಶಗತಿಗಳನ್ನು ಸಂರಕ್ಷಿಸುತ್ತಾ ತಂದೆಯ ಜಹಂಗೀರುಗಳೆಲ್ಲ ತನ್ನ ಹೆಸರಿಗೆ ವರ್ಗಾಯಿಸಿಕೊಳ್ಳುತ್ತಾನೆ. ಹಸರಂಗಿ ಪಾಮನಾಯಕನು ಬಿಜಾಪುರ ಬಾದಷಾಹನಲ್ಲಿ ಮನವಿಯೊಂದು ಮಾಡಿಕೊಂಡನು "ದೇವದುರ್ಗ ಜಿಲ್ಲೆಯ ಪೂರ್ವಕ್ಕಿರುವ ಮಹತ್ವಪೂರ್ಣ ಪ್ರದೇಶವಾಗಿದ್ದ ಕೆಳಗಿನ ಹಳ್ಳಿಗಳನ್ನು ಕನಕಗಿರಿಯ ಉಡಜನಾಯಕ ಕಸಿದುಕೊಂಡು ಇಲ್ಲಿಯ ಜನರಿಗೆ ಬಹುವಾಗಿ ಕಟ್ಟಿಕೊಟ್ಟಿದ್ದಾನೆ, ಕಾರಣ ತಮ್ಮ ದೌಲತ್ತಿನ ಹಿತಚಿಂತಕನು ಸಾಮಂತನು ಆದ ನನಗೆ ಅಹಸನಾಬಾದನ ಸರಲೌಬಾದ್, ದೇವದುರ್ಗ ಕೆಳಗಿನ ಎಲ್ಲಾ ಹಳ್ಳಿಗಳನ್ನು ದಯಪಾಲಿಸಬೇಕೆಂದು ಕೇಳಿಕೊಂಡನು, ಅದಕ್ಕೆ ಪ್ರತಿಯಾಗಿ ವಾರ್ಷಿಕ ಐದುಸಾವಿರ ಹೊನ್ನು ನಜರಾಣಿ ನೀಡುವೆ"[೬] ನೆಂದು ವಿನಂತಿಸಿದನು. ಪಾಮನಾ ಮನವಿಯ ಮೇರೆಗೆ ಬಾದಶಹನ ೧೦೮೫ನೇ ಹಿಜರಿ ಶಬಾನಸನ್ ೩ನೇ ತಾರೀಖರಂದು ಫರ್ಮಾನು ಹೊರಡಿಸಿ ವಂಶ ಪಾರಂಪರ್ಯವಾಗಿ ಮೇಲ್ಕಾಣಿಸಿದ ಇನಾಮು ನೀಡಿ ಮನ್ನಿಸಿದನು.

ಶಹಾಪುರವು ಪಾಮನಾಯಕನ ಅಧೀನದಲ್ಲಿತ್ತು. ಕ್ರಿ.ಶ.೧೬೮೦ರ ಫೆಬ್ರವರಿ ೨೦, ೨೧ರಂದು ಈ ಜಿಲ್ಲೆಯ ಮೇಲೆ ಔರಂಗಜೇಬನ ಸರದಾರ ದಿಲೇಖಖಾನ್ ಭೀಕರವಾಗಿ ಆಕ್ರಮಣ ಮಾಡಿದರೂ ಪ್ರಯೋಜನವಾಗಲಿಲ್ಲ. ಪಾಮನಾಯಕನ ಸೈನ್ಯದ ಭಾರೀ ಹೊಡೆತ ತಾಳದೆ ಮೊದಲನೆ ದಿನ ಹಿಂದಿರುಗಿದ ಆತ ಮತ್ತೆ ಮರುದಿನ ಜಿಲ್ಲೆಯನ್ನು ಮುತ್ತಿದಾಗ ಪಾಮನಾಯಕನು ಹನ್ನೆರಡು ಸಾವಿರ ನುರಿತ ಬೇಡರ ಪಡೆಯೊಂದಿಗೆ ಆಧುನಿಕ ಶಸ್ತ್ರಗಳು

ಗುರಿತಪ್ಪದೆ ಗುಂಡಿನ ಸುರಿಮಳೆಗೈದರು. ಆ ಆಕ್ರಮಣದಿಂದ ಮೊಗಲ್ ಸೈನ್ಯ ತತ್ತರಿಸಿ ಹೋಯಿತು. ದಿಲೇರಖಾನ್ ಪಾಮನಾಯಕನಿಂದ ಜೀವಭಿಕ್ಷೆ ಪಡೆದು ಪಾರಾಗುತ್ತಾನೆ. ಇದೆ ಸಮಯದಲ್ಲಿ ಅನೇಕ ಸಣ್ಣ ಪುಟ್ಟ ಪಾಳೆಯಗಾರರು ಸ್ವಾತಂತ್ರ್ಯ ಘೋಷಿಸಿಕೊಂಡು ಸ್ವಂತ ಅಸ್ತಿತ್ವ ಸ್ಥಾಪಿಸಿದರು. ಇನ್ನುಳಿದ ಅರಸ ಸಂಸ್ಥಾನ ಮೊಗಲ್‌ರ ಸಾಮಂತಿಕೆ ಒಪ್ಪಿಕೊಂಡರು. ಅದರಲ್ಲಿ ಪಾಮನಾಯಕನು ಒಬ್ಬ. ಇಲ್ಲಿ ಎಷ್ಟೆ ಪ್ರಭಾವಿ ಶಾಲಿಯಾಗಿದ್ದರು ಮೊಗಲ್‌ರ ಸಾಮಂತಿಕೆ ಒಪ್ಪಿಕೊಳ್ಳುತ್ತಾನೆ"[೭]. ಒಪ್ಪಿಕೊಂಡ ಐದನೆಯ ದಿನದಲ್ಲಿ ಪಾಮನಾಯಕನು ಅನಿರೀಕ್ಷಿತ ಸಾವಿಗೆ ಗುರಿಯಾದನು. ಬಿಜಾಪುರದ ಸುಲ್ತಾನರ ಕೈವಾಡ ಇರಬಹುದು. ವಿಜಯನಗರ ಸಾಮ್ರಾಜ್ಯದ ಅರಸ ಶ್ರೀ ಕೃಷ್ಣದೇವರಾಯನ ಮಗನ ಸಾವು, ಹಾಗೂ ಅತನ ಪತನಕ್ಕೆ ಮಾಡಿದ ಸಜ್ಜುಗಳು ಹಾಗೆಯೇಪಾಮನಾಯಕನ ಮೇಲೆ ಅದೇ ರೀತಿ ಮಾಡಲಾಗಿದೆಯೇ ಆತನ ಆಸ್ಥಾನರ ಆಪ್ತರಿಂದ ಸಂಶಯಗಳ ಅಡಗಿವೆ. ಒಬ್ಬ ವೀರನಿಗೆ ವೀರಮರಣ ಹೊಂದಲು ಇಚ್ಚಿಸುವರು ಈ ರೀತಿಯಾಗಿ ಒಬ್ಬ ವೀರ ಯೋಧ ಅರಸನ ಅನಿರೀಕ್ಷಿತ ಮರಣ ಹೊಂದಿದನು. ಇವನ ಉತ್ತರ ಅಧಿಕಾರಿಯಾಗಿ ಗುಡಗುಂಟೆಯ ಅನ್ನದಾನಿ ಸೋಮಪ್ಪನಾಯಕನ ಮಗ ಪಿಡ್ಡನಾಯಕನನ್ನು ದತ್ತಕೆ ತೆಗೆದುಕೊಳ್ಳಲಾಯಿತು.

ಪೀತಾಂಬರಿ ಬಹರಿ ಪಿಡ್ಡನಾಯಕ (ಕ್ರಿ.ಶ.೧೬೮೭–೧೮೭೬) ನು ಅಧಿಕಾರಕ್ಕೆ ಬಂದಾಗ, ಇದೇ ಸಂದರ್ಭದಲ್ಲಿ ಕ್ರಿ.ಶ.೧೬೮೯ರಲ್ಲಿ ಮರಾಠರ ಸಂಬಾಜಿ ಮೊಗಲರ ಖೈದಿಯಾದನು. ಆಗ ಮರಾಠರ ಸರದಾರರೆಲ್ಲ ಮೊಗಲ್‌ರ ವಿರುದ್ಧ ಸಿಡಿದೆದ್ದರು. ಇವರ ಮಧ್ಯ ಭೀಕರ ಯುದ್ದಗಳು ನಡೆದು ನಂತರದಲ್ಲಿ ಮರಾಠ ಸರದಾರರು ಸೈನ್ಯಶಕ್ತಿಯಿಲ್ಲದೆ ವಾಗಿನಗೇರಿಯ ಪೀತಾಂಬರ ಪಿಡ್ಡನಾಯಕನಿಗೆ ಮೊರೆಹೋದಾಗ ಆತನ ಮರಾಠರಿಗೆ ಸಹಾಯ ಮಾಡಿದನು. ಪಿಡ್ಡನಾಯಕನು ಯುದ್ಧದಲ್ಲಿ ಭಾಗವಹಿಸಿ ಮೊಗಲ್‌ರ ರುಸ್ತುಂಖಾನನ್ನು ಸೋಲಿಸಿದನು. ಯುದ್ಧದಲ್ಲಿ ಜಯಗಳಿಸಿ ಪಿಡ್ಡನಾಯಕನು ಔರಂಗಜೇಬನ ಅಧಿಪತ್ಯವನ್ನು ಧಿಕ್ಕರಿಸಿ, ಸ್ವಾತಂತ್ರ್ಯವನ್ನು ಸಾರಿದನು. ಸ್ವಾತಂತ್ರ್ಯವನ್ನು ಸಾರಿದಕ್ಕೆ ಔರಂಗಜೇಬನು ತನ್ನ ಮಗ ಕಾನ್‌ಭಕ್ಷನನ್ನುಯುದ್ದಕ್ಕೆ ಕಳುಹಿಸುತ್ತಾನೆ. ಪಿಡ್ಡನಾಯಕನು ಈ ಯುದ್ದದಲ್ಲಿ ಗೆಲ್ಲುತ್ತಾನೆ. ಹೀಗೆ ಔರಂಗಜೇಬನ ಮಗ ಸೈನಿಕರು ಪಿಡ್ಡನಾಯಕನ ಮೇಲೆ ಎರಡು ಬಾರಿ ಯುದ್ದ ಮಾಡಿ ಸೋಲುವನು.ನಂತರದಲ್ಲಿ ಔರಂಗಜೇಬನ ಇನ್ನೊಬ್ಬ ಮಗ 'ಅಜಮ'ನನ್ನು ಕಳುಹಿಸಿದನು. ಈತನಿಂದ ಒಂದು ವರ್ಷದವರೆಗೆ ವಾಗಿನಗೇರಿ ಸುತ್ತಮುತ್ತಲಿನ ಪ್ರದೇಶ ಧ್ವಂಸಗೊಂಡಿತು. ಆಗ ಪಿಡ್ಡನಾಯಕ ಸಂಧಾನ ಬಯಸಿದನು. ಎರಡು ಲಕ್ಷ ನಾಣ್ಯ ಕಾಣಿಕೆ ಕೊಡಲು ಒಪ್ಪಿಕೊಂಡನು.

"ಈ ಪೂರ್ವದಲ್ಲಿ ಆದಿಲ್‌ಶಾಹಿಗಳಿಗೆ ಸಲ್ಲಿಸಿದಂತೆ ಕಂದಾಯದ ಎಲ್ಲ ಬಾಬತ್ತು ತೆರಿಗೆಗಳನ್ನು ತಮಗೂ ನೀಡಬೇಕೆಂದು ಔರಂಗಜೇಬನು ಫರ್ಮಾನು ಹೊರಡಿಸಿದನು. ಇದನ್ನು ದಿಕ್ಕರಿಸಿದ ಹಾಗೂ ಪಿಡ್ಡನಾಯಕ ಸ್ವಾತಂತ್ರ್ಯ ಘೋಷಿಸಿಕೊಂಡನು. ಇದನ್ನು ತಿಳಿದು ಔರಂಗಜೇಬನು ಸತಾರೆಯಿಂದ ಪ್ರದೇಶಗಳನ್ನು ತನ್ನ ವಶಮಾಡಿಕೊಳ್ಳುತ್ತ ಕ್ರಿ.ಶ.೧೭೦೫ರಲ್ಲಿ

ಸಗರನಾಡು ಪ್ರವೇಶಿಸಿದನು"[೮]. ನಗರದಲ್ಲಿ ಔರಂಗಜೇಬನ ಸೈನ್ಯವು ಕೋಟೆಯನ್ನು ಸುತ್ತುವರಿಯಿತು. ಪಿಡ್ಡನಾಯಕ ಬೇಡರ ಪಡೆಯಿಂದ ತುಬಾಕಿಗಳ ಗುಂಡುಗಳು ರಭಸವಾಗಿ ಸಿಡಿದವು. ಬಾಣ, ಕವಣಿಕಲ್ಲುಗಳು ತೂರಿಬಂದವು, ಆದರು ಯುದ್ಧದಲ್ಲಿ ಔರಂಗಜೇಬನ ಸೈನ್ಯ ಮುಂದುವರೆದರು ಇದರಿಂದ ಪಿಡ್ಡನಾಯಕನಿಗೆ ಸಹಾಯಕ್ಕೆ ನಿಂತಿದ್ದ ಮರಾಠರ ಸೈನ್ಯ ಯುದ್ಧದಿಂದ ಹಿಂದೆ ಸರಿಯಿತು. "ಯುದ್ಧದಲ್ಲಿ ಪಿಡ್ಡನಾಯಕನು ಪಲಾಯನ ಮಾಡಿ, ಗುಡಗುಂಟಿ ಮಾರ್ಗವಾಗಿ ಕನಕಗಿರಿ ನಾಯಕರ ಅಧೀನದ ಎಮ್ಮಿ ಗುಡ್ಡದಲ್ಲಿ ಒಂದು ವರ್ಷ ಇದ್ದು, ಅಲ್ಲಿಯೇ ಸೈನ್ಯ ಸಂಘಟಿಸಿಕೊಂಡು ಮರಳಿ ವಾಗಿನಗೇರಿಗೆ ನುಗ್ಗಿದನು. ಅಲ್ಲಿದ್ದ ಮೊಗಲ ಸರದಾರರು ಬೇಡರ ಪಡೆಯ ಹೊಡೆತಕ್ಕೆ ದಿಕ್ಕೆಟ್ಟು ಓಡಿದರು. ಆರು ವರ್ಷಗಳವರೆಗೆ ಕೈಬಿಟ್ಟು ಹೋಗಿದ್ದ ವಾಗಿನಗೇರಿ ಕಿಲ್ಲೆ ಮರಳಿ ಪಡೆಯುವ ಮೂಲಕ ಪಿಡ್ಡನಾಯಕನು ವಿಜಯ ಸಂಕೇತವಾಗಿ ಹನುಮಧ್ವಜ ಹಾರಿಸಿದನು. ಕ್ರಿ.ಶ.೧೭೨೬ರಲ್ಲಿ ಪಿಡ್ಡನಾಯಕನು ಮೃತನಾದನು. ತರುವಾಯ ಈತನ ಹಿರಿಯ ಮಗ ಇಮ್ಮಡಿ ಪಾಮನಾಯಕ ಕ್ರಿ.ಶ.೧೭೨೭ರಲ್ಲಿ ಪಟ್ಟವೇರಿದನು"[೯]. ತಂದೆಯ ತರುವಾಯ ಮಗ ಮುಮ್ಮಡಿ ಪಿಡ್ಡನಾಯಕ ಕ್ರಿ.ಶ.೧೭೪೨ರಲ್ಲಿ ಅಧಿಕಾರಕ್ಕೆ ಬಂದನು, ಸುರಪುರ ಸಂಸ್ಥಾನದಲ್ಲಿಯೇ ಈತ ಅತ್ಯಂತ ಅಸಮರ್ಥ ಅರಸನೆನಿಸಿಕೊಂಡು ೧೯೪೨ರಲ್ಲಿ ಮರಣ ಹೊಂದಿದನು. ಈತ ನಂತರ ತನ್ನ ತಮ್ಮನಾದ ಮೊಂಡಗೈ ವೆಂಕಟಪ್ಪನಾಯಕನು ಸಿಂಹಾಸನವೇರಿದನು. ಮೊಂಡಗೈ ವೆಂಕಟಪ್ಪನಾಯಕನು ಅಧಿಕಾರ ಸ್ವೀಕರಿಸಿದ ಸಮಯದಲ್ಲಿ "ಫ್ರೆಂಚ್ ಗೌವರ್ನರ್ ಡೂಪ್ಲೆ ಹೈದರಾಬಾದ್ ನಿಜಾಮನ ವಿರುದ್ಧ ಚಂದಾ ಸಾಹೇಬನನ್ನು ಎತ್ತಿಕಟ್ಟಿ ಪಾಂಡಿಚೇರಿ ಕಾಳಗಕ್ಕೆ ಕಾರಣವಾದನು. ಆಗ ವೆಂಕಟಪ್ಪನಾಯಕನು ಹೈದರಾಬಾದ್ ನಿಜಾಮನ ಪಕ್ಷವಹಿಸಿ ತನ್ನ ೧೨ ಸಾವಿರ ಮಾರಿ ಬಲಾಢ್ಯ ಬೇಡರಪಡೆ ಅದರಲ್ಲಿ ಬಿಲ್ಲುಗಾರಿಕೆ ಈತನ ದಂಡಿನಲ್ಲಿ ವಿಶೇಷತೆಯಾಗಿತ್ತು".[೧೦]

ಈ ಯುದ್ಧವನ್ನು ಮಾಡಿ ಪಾಂಡಿಚೇರಿ ಕಿಲ್ಲೆಯನ್ನು ಕೈವಶಮಾಡಿಕೊಂಡನು. ಇದರಿಂದ ವೆಂಕಟಪ್ಪನಾಯಕನಿಗೆ ನಿಜಾಮನು 'ಬಲವಂತ ಬಜಂಗ ಮತಹರುದ್ದೌಲಾಬಬರುಲ್ಮುಲಕ' ಎಂಬ ನೂತನ ಬಿರುದಿತ್ತು ಸನ್ಮಾನಿಸಿದನು. ವೆಂಕಟಪ್ಪನಾಯಕನ ತರುವಾಯ ರಮಣಪ್ಪನಾಯಕನ ಮಗ ಇಮ್ಮಡಿ ಪಾಮನಾಯಕನು ಕ್ರಿ.ಶ. ೧೭೫೦ರಲ್ಲಿ ಪಟ್ಟಾಭಿಷೇಕಗೊಂಡನು. ಈ ಸಂದರ್ಭದಲ್ಲಿ ಹೈದರಾಬಾದ್ ಪಟ್ಟದ ಅಧಿಕಾರ ಹಿಡಿದ ನಿಜಾಮ ಅಲಿಖಾನನು ಇಂಗ್ಲಿಷರ ಸಹಾಯದಿಂದ ಆಳ್ವಿಕೆ ಆರಂಭಿಸಿದ್ದ ಪೇಶ್ವೆಗಳನ್ನು ಕ್ರಿ.ಶ. ೧೭೮೦ರಲ್ಲಿ ಉದಯಗಿರಿ ಯುದ್ದದಲ್ಲಿ ಎದುರಿಸಿದನು. ನಂತರ ಉದಯಗಿರಿ ಒಪ್ಪಂದವಾಯಿತು. ಆಗ ಸುರಪುರದವರು ತಮ್ಮ ಪ್ರದೇಶದ ಮೇಲೆ ಹಕ್ಕು ಚಲಾಯಿಸಬೇಕಾದರೆ ಪೇಶ್ವೆಗಳ ಅನುಮತಿ ಪಡೆಯಬೇಕಾಯಿತು. ಮುಮ್ಮಡಿ ವೆಂಕಟಪ್ಪನಾಯಕ ನಂತರ ತನ್ನ ಮಗ ಇಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ.೧೭೭೩–೧೮೦೨) ಅಧಿಕಾರ ರೂಢನಾದ ವರ್ಷವೇ ಅನೇಕ ಸವಾಲುಗಳು ಈತನಿಗೆ ಎದುರಾದವು. ನಿಜಾಮನಿಗೆ ಕೊಡಬೇಕಾದ ಪೇಷಕ ಬಾಕಿ ಇತ್ತು. ಇನ್ನೊಂದೆಡೆಗೆ ಸಂಬಂಧಿಕರಾದ ಸಂಸ್ಥಾನಗಳೂ ಕಲಹಗಳೂ ಪ್ರಾರಂಭವಾಗಿದ್ದವು.

ಇನ್ನೊಂದೆಡೆಗೆ ಪೇಶ್ವೆ-ಇಂಗ್ಲಿಷರ ಅಧಿಕಾರವನ್ನು ಒಪ್ಪಿಕೊಳ್ಳಬೇಕಾದ ಸಂದರ್ಭವೂ ಇತ್ತು. ಇಂಥ ಸಂದರ್ಭದಲ್ಲಿ ಪೇಶ್ವೆಗಳು ರುಸುಮಿನ ಬಾಕಿಯನ್ನು ನೆಪಮಾಡಿಕೊಂಡು ಕ್ರಿ.ಶ.೧೭೭೯ರಲ್ಲಿ ಸೈನ್ಯದೊಂದಿಗೆ ನಗರನಾಡನ್ನು ಪ್ರವೇಶಿಸಿದರು. ಇವರಿಂದ ಹಲವಾರು ಹಳ್ಳಿಗಳು ಲೂಟಿಯಾದವು. ಇಮ್ಮಡಿ ವೆಂಕಟಪ್ಪನಾಯಕ ಸೈನ್ಯದೊಂದಿಗೆ ತೆರಳಿ ಪೇಶ್ವೆಗಳನ್ನು ಹಿಮ್ಮೆಟ್ಟಿಸಿದನು. ಇದನ್ನು ತಿಳಿದ ನಿಜಾಮ ಸುರಪುರದೊಂದಿಗೆ ಸ್ನೇಹ ಬೆಳೆಸಿದನು. ವೆಂಕಟಪ್ಪನಾಯಕ ತೀರದ ಮೇಲೆ ಸಂಸ್ಥಾನದ ಅಧಿಕಾರಕ್ಕಾಗಿ ಕೋಲಾಹಲವೆದ್ದಿತ್ತು. ಇದ್ದೊಬ್ಬ ಮಗನು ಕೈಯಾರೆ ಕೊಂದ ಈತನಿಗೆ ರಾಘಮ್ಮಳ ಮಗಳಿದ್ದಳು. ಈಕೆಯನ್ನು ಪಟ್ಟದರಿಸಿ ಮಾಡಬೇಕೆಂದು ರಾಣಿ ಕಾಟಮ್ಮಳು ಪ್ರಯತ್ನಿಸಿದಳು ಆದರೆ ಸಂಬಂಧಿ ಮದನಗೋಪಾಲನಾಯಕನ ಮಗನಾದ ಮುಮ್ಮಡಿ ಪಿಡ್ಡನಾಯಕ (ಕ್ರಿ.ಶ. ೧೮೦೨-೧೮೧೮)ನನ್ನು ಸುರಪುರದ ಪಟ್ಟಕ್ಕೆ ಕೂಡಿಸಲಾಯಿತು. ಇತನು ರಾಣಿ ಕಾಟಮ್ಮ ಹೇಳಿದಂತೆ ರಾಜ್ಯಕಾರ್ಯಗಳನ್ನು ಮಾಡಬೇಕಿತ್ತು. ಅಧಿಕಾರ ಆಕೆಯ ಕೈಯಲ್ಲಿ ಇಟ್ಟುಕೊಂಡಿದಳು.

ಮುಮ್ಮಡಿ ಪಿಡ್ಡನಾಯಕನು ಆಡಳಿತ ಸಮಯದಲ್ಲಿ ಸಂಸ್ಥಾನದ ಕಂದಾಯ ವಸೂಲಿ ಮಾಡಿ ಪೇಶ್ವೆಗೆ ಕೊಡಬೇಕಾದ ಸಾಲದ ಬಾಬತ್ತು ಸಲ್ಲಿಸಿದನು. "ನಂತರ ನಿಜಾಮನಿಗೆ ಸಲ್ಲಿಸುತ್ತಿರುವ ತೆರಿಗೆಯನ್ನು ಅವರಿಗೆ ಕೊಟ್ಟನು ಅವರಿಗೆ ಖುಷಿ ತಂದಿತು. ಕ್ರಿ.ಶ.೧೮೦೮ರಲ್ಲಿ ಮೇ ೧೦ರಂದು ಬ್ಯಾರಿ ಪೇಶ್ವೆ ಮತ್ತು ಸಂಸ್ಥಾನದ ಆಂತರಿಕ ಸಂಬಂಧಗಳ ಬಗ್ಗೆ ಕಲ್ಕತ್ತ ಸರ್ಕಾರಕ್ಕೆ ವರದಿ ಸಲ್ಲಿಸಿದನು. ಕ್ರಿ.ಶ.೧೮೦೭-೦೮ರಲ್ಲಿ ಬಾಜಿರಾಯನು ಸುರಪುರ ಸಂಸ್ಥಾನ ತನಗೆ ಸಲ್ಲಿಸಬೇಕಾದ ಪೇಪಕಷ ಪಾವತಿ ಮಾಡಲು ಒತ್ತಾಯಿಸಿ ವಸೂಲಿಗಾಗಿ ಬಾಪುಗೋಖಲೆಯನ್ನು ಕಳಿಹಿಸಿದರು"[೧೧]. ಇಲ್ಲಿನ ವಾಸ್ತವ ಒತ್ತಾಯಿಸಿ ತಿಳಿದ ಈ ಸಂಗತಿ ತಿಳಿದ ರೆಸಿಡೆಂಟ್ ಮಹಿಪತಿರಾಮನ ದುರಾಡಳಿತದಿಂದ ಇದ್ದನು ವಿರೋಧಿಸಿ ಕಾನೂನು ಮೂಲಕ ನಿಯಂತ್ರಿಸಿದರು. ಈ ಸಂದರ್ಭದಲ್ಲಿ ಸುರಪುರ ಸಂಸ್ಥಾನದಲ್ಲಿ ಭೀಕರ ಬರಗಾಲ ಕಾಣಿಸಿಕೊಂಡಿತು. ನಿಜಾಮನಿಗೆ ಸಲ್ಲಿಸಬೇಕಾಗಿದ್ದು ೮ ಲಕ್ಷ ರೂ, ಬಾಕಿ ಈಗ ೧೩ ಲಕ್ಷ ರೂ, ಆಗಿತ್ತು. ಆದರು ಪಿಡ್ಡನಾಯಕ ರೈತರ ಅಭಿವೃದ್ಧಿಗಾಗಿ ಶ್ರಮಿಸಿ ಅವರ ಹಿತಾಸಕ್ತಿಯನ್ನು ಕಾಪಾಡಿದನು. ಮುಮ್ಮಡಿ ಪಿಡ್ಡನಾಯಕನ ನಂತರ ಮಗ ಮುಮ್ಮಡಿ ವೆಂಕಟಪ್ಪನಾಯಕ ಅಧಿಕಾರಕ್ಕೆ ಬಂದನು.

ಮುಮ್ಮಡಿ ವೆಂಕಟಪ್ಪ ನಾಯಕನ ಆಡಳಿತದಲ್ಲಿ ಸುರಪುರದಲ್ಲಿ ಬರಗಾಲ ಮುಂದುವರಿಯಿತು. ನಿಜಾಮನಿಗೆ ಸಲ್ಲಿಸಬೇಕಾದ ೧೩ಲಕ್ಷ ರೂ ಸಾಲ ಹಾಗೆಯೇ ಉಳಿಯಿತು. ಪೇಶ್ವೆಯವರ ರುಸುಮು ಬಾಬತ್ತು ಮುಟ್ಟದ್ದಕ್ಕಾಗಿ ಅವರ ರುಸುಮಿನ ಪ್ರಾಂತ್ಯಗಳನ್ನು ಮುಮ್ಮಡಿ ವೆಂಕಟಪ್ಪನಾಯಕನಿಂದ ಬ್ರಿಟಿಷರು ವಶಪಡಿಸಿಕೊಂಡರು. ಸುರಪುರದ ಹಣಕಾಸು ವ್ಯವಹಾರಗಳನ್ನು ಮೊಟಕುಗೊಳಿಸುತ್ತ, ತಮ್ಮ ಅಧಿಕಾರವನ್ನು ವೃದ್ದಿಸಲು ಪ್ರಯತ್ನಿಸುತ್ತಿದ್ದರು. ಇಂಥ ನಿಜಾಮ ಮತ್ತು ಬ್ರಿಟಿಷರ ಕುಟಿಲ ದ್ವಂದ್ವ ಸಂಸ್ಥಾನವನ್ನು ಸಂಕಷ್ಟಕ್ಕೆ ಸಿಲುಕಿಸಿತು. ಇದರ

ಮಧ್ಯೆ ಮುಮ್ಮಡಿ ವೆಂಕಟಪ್ಪನಾಯಕನು ನಿಧನನಾದನು. "ಈತನ ತರುವಾಯ ಮಕ್ಕಳಾದ ಕೃಷ್ಣಪ್ಪನಾಯಕ ಮತ್ತು ಹಣಮಪ್ಪ ನಾಯಕರಲ್ಲಿ ಅಧಿಕಾರಕ್ಕಾಗಿ ಪೈಪೋಟಿ ನಡೆಯಿತು. ಆಗ ಇದನ್ನು ಅರಿತ ನಿಜಾಮನು ಅವರಿಗೆ ೧೫ಲಕ್ಷ ರೂ ಪಟ್ಟದ ನಜರಾಣಿಯನ್ನು ಮತ್ತು ೨.೩೦.೬೦೦ರೂ ವಾರ್ಷಿಕ ಕಂದಾಯವನ್ನು ಕೃಷ್ಣಪ್ಪನಾಯಕ ಕೊಡಲು ಒಪ್ಪಿದನು".[೧೨] ಈ ಇಬ್ಬರ ಜಗಳ ಮೂರನೆ ವ್ಯಕ್ತಿಗೆ ಲಾಭವಾಯಿತು. ಸುರಪುರ ಬರಗಾಲದ ಸಂಕಷ್ಟದಲ್ಲಿಯು ಪ್ರಜೆಗಳ ಬಗ್ಗೆ ಯೋಚಿಸಿದ ತಮ್ಮ ಅಧಿಕಾರಕ್ಕಾಗಿ ಪೈಪೋಟಿ ನಡೆಸಿದರು. ಕೃಷ್ಣಪ್ಪನಾಯಕ ಪಟ್ಟಕ್ಕೆ ಇವನ ಈ ಸಮಯದಲ್ಲಿ ನಿಜಾಮ ಮತ್ತು ಇಂಗ್ಲಿಷ್ ಸರ್ಕಾರದ ವಿರುದ್ಧ ಸಿಡಿದೇಳುವಷ್ಟು ಸಾಮರ್ಥ್ಯ ಈ ಸಂದರ್ಭದಲ್ಲಿ ಸುರಪುರ ಅರಸು ಮನೆತನಕ್ಕೆ ಇಲ್ಲದಾಗಿತ್ತು. ಈ ಎರಡು ಸರ್ಕಾರಕ್ಕೆ ತೆರಿಗೆ ಕಟ್ಟಲು ಹಣವಿಲ್ಲದ ಕಾರಣ ನಿಜಾಮರು ಮತ್ತು ಬ್ರಿಟಿಷರು ಹೈದರಾಬಾದ್ ಲೇವಾದೇವಿ ವ್ಯವಹಾರಸ್ಥ ಮೋತಿಗಾರ ಗೋಸಿಯಾ ಎಂಬುವವನಿಂದ ಸಾಲ ಪಡೆಯುವಂತೆ ಮಾಡಿದರು. ಸಾಲದ ಹೊರೆ ಹೆಚ್ಚಾಗಿ ರಾಜ್ಯವನ್ನು ಹಾಗೂ ತನ್ನ ಮಕ್ಕಳನ್ನೇ ಅಡವು ಇಡುವ ಪ್ರಸಂಗ ಒದಗಿತು.

ಸುರಪುರದ ಸಂಸ್ಥಾನಕ್ಕೆ ರೆಸಿಡೆಂಟ್ ಫ್ರೇಜರನ ಸಲಹೆ ಮೇರೆಗೆ ಸಾಲದ ವ್ಯವಹಾರ ತನಿಖೆ ನಡೆಸಲು ಇಂಗ್ಲಿಷ್ ಅಧಿಕಾರಿಗಳು ಸುರಪುರಕ್ಕೆ ಆಗಮಿಸಿದರು. ಕ್ಯಾ. ಫ್ರಾನಿಸ್ ಗ್ರೀಸ್ಲೆಗೆ ಕ್ರಿ.ಶ.೧೮೪೧ರ ನವಂಬರ್ ೨೯ರಂದು ಸುರಪುರಕ್ಕೆ ಹೋಗಿ ವರದಿ ಮಾಡಿದನು. ಈ ವರದಿ ಸುರಪುರ ಸಂಸ್ಥಾನದ ಆರ್ಥಿಕ ದಿವಾಳಿತನದ ನೋಟವಾಗಿತ್ತು. ಈ ವರದಿಯ ಮೂಲಕ ಗ್ರೀಸ್ಲೆ ರೆಸಿಡೆಂಟನಿಗೆ ಸಂಸ್ಥಾನದ ಆಡಳಿತವನ್ನು ಬ್ರಿಟಿಷ ಸರ್ಕಾರ ನಿಯಂತ್ರಣದಡಿ ತರಲು ಅನುವು ಮಾಡಿಕೊಡುವಂತಿದ್ದವು. ಕೆಲವು ಆಪಾದನೆಗಳನ್ನು ಕೃಷ್ಣನಾಯಕನ ಮೇಲೆ ಬ್ರಿಟಿಷ ಸರ್ಕಾರ ಹೇರಿತು. ಈ ಸಂದರ್ಭದಲ್ಲಿ ಕೃಷ್ಣನಾಯಕ ಮರಣ ಹೊಂದಿದನು. ಈತನ ನಂತರ ಆತನ ಪ್ರತಿನಿಧಿಯಾಗಿ ರಾಣಿ ಈಶ್ವರಮ್ಮ ಪ್ರತಿನಿಧಿಯಾಗಿ ನಿಂತಳು. "ಹಾಗೆಯೇ ಮನವೊಲಿಸಿ ಅವಳಿಂದ ರಾಜ್ಯಸೂತ್ರಗಳನ್ನು ಪಡೆಯಬೇಕೆಂದು ಗ್ರೀಸ್ಲೆಗೆ ಆದೇಶ ಬಂದಿತು. ಆಗ ಗ್ರೀಸ್ಲೆ ಅದನ್ನು ತನ್ನ ಅಪಮಾನವೆಂದು ಬಗೆದು ಈ ಕೆಲಸದಿಂದ ಬಿಡುಗಡೆಯನ್ನು ಪಡೆದನು. ಈ ಪರಿಸ್ಥಿತಿಯಲ್ಲಿ ರೆಸಿಡೆಂಟ್ ಪ್ರೆಸ್ಸನ್ನು ಮೋಡೋಸ್ ಟೇಲರನು ಸುರುಪುರದ ಕೆಲಸಕ್ಕಾಗಿ ಗ್ರೀಸ್ಲೇ ಸ್ಥಾನಕ್ಕೆ ನೇಮಿಸಿದನು"[೧೩].

ರಾಣಿ ಈಶ್ವರಮ್ಮನಿಗೂ ಟೇಲರನಿಗೂ ವೈಮನಸ್ಸುಂಟಾಯಿತು. ಆಗ ರಾಣಿ ಈಶ್ವರಮ್ಮ ತನ್ನ ವಿರುದ್ಧ ಬೇಡರ ಪಡೆಯನ್ನು ರೊಚ್ಚಿಗೆಬ್ಬಿಸಿದ್ದಳೆಂಬ ಸುದ್ದಿಯಿಂದ ಟೇಲರ್‌ನು ರೆಸಿಡೆಂಟನಿಗೆ ಸಲಹೆಕೋರಿ ಪತ್ರ ಬರೆದನು. ರೆಸಿಡೆಂಟ್ ಫ್ರೆಜರ್ ಸ್ವತಃ ಸುರಪುರಕ್ಕೆ ಬಂದು, ಕೆಲ ಅಧಿಕಾರಗಳನ್ನು ರಾಜನಿಗೆ ಒಪ್ಪಿಸಿ ರಾಣಿ ಈಶ್ವರಮ್ಮನನ್ನು ಗಡಿಪಾರು ಮಾಡಿದರು.

"ನಾಲ್ವಡಿ ವೆಂಕಟಪ್ಪನಾಯಕ ಟೇಲರನ ಅಧೀನದಲ್ಲಿ ಬೆಳೆದನು. ನಂತರ ನಾಲ್ವಡಿ ವೆಂಕಟಪ್ಪ ನಾಯಕನಿಗೆ ೧೮ ವರ್ಷಗಳು ತುಂಬಿದ ಮೇಲೆ ಗೌವರ್ನರ್ ಜನರಲ್ ಆದ

ಲಾರ್ಡ್ ಡಾಲಹೌಸಿ ಅವರ ಅನುಮತಿ ಮೇರೆಗೆ ಸುರಪುರ ಅಧಿಕಾರ ಸ್ವೀಕರಿಸಿದನು"[೧೪]. ಕೆಲವು ದಿನಗಳ ನಂತರ ನಾಲ್ವಡಿ ವೆಂಕಟಪ್ಪನಾಯಕ ಮೆಡೋಸ್ ಟೇಲರನನ್ನು ರಾಜಕೀಯ ಪ್ರತಿನಿಧಿಯೆಂದು ಸುರಪುರದಲ್ಲಿ ಇಟ್ಟುಕೊಳ್ಳಲು ಇಷ್ಟಪಡಲಿಲ್ಲ. ಅಲ್ಲದೆ ೧೫೦೦ರೂ ಸಂಬಳ ನೀಡಲು ಸಾಧ್ಯವಿಲ್ಲವೆಂದನು. ಕಾರಣ ಒಂದು ಕಡೆ ನಿಜಾಮ ಇನ್ನೊಂದು ಕಡೆ ಬ್ರಿಟಿಷರೂ ಅವರಿಗೆ ಕೊಡುತ್ತಿದ್ದ ತೆರಿಗೆಯಿಂದ ಖಜಾನೆಯೆಲ್ಲ ಬರಿದಾಗಿತ್ತು.

"ಇಷ್ಟೊಂದು ರಕಮ್‌ನ ಭಾರವನ್ನು ವಹಿಸಿಕೊಳ್ಳುವ ಸ್ಥಿತಿಯು ಸಂಸ್ಥಾನಕ್ಕೆ ಮೀರಿದ್ದೆಂದು ರಾಜನುಡಿದನು. ಟೇಲರನ ಅಭಿಪ್ರಾಯವಾಗಿತ್ತು ಮೇ ತಿಂಗಳಲ್ಲಿ ೧ನೇ ತಾ॥ಗೆ ವೆಂಕಟಪ್ಪನಾಯಕನು ಇಷ್ಟೊಂದು ಭಾರವನ್ನು ಸಹಿಸಿಕೊಳ್ಳಲಾಗುವುದಿಲ್ಲೆಂದು ನುಡಿದುದನ್ನು ಟೇಲರನು ರೆಸಿಡೆಂಟನಿಗೆ ಬರೆದು ತಿಳಿಸಿದನು"[೧೫]. ರಾಣಿ ಈಶ್ವರಮ್ಮನ ಬೇನೆಯು ಟೇಲರನು ಬಿಟ್ಟು ಹೋಗುವ ಸುದ್ದಿಯನ್ನು ಕೇಳಿ ಅವಳೂ ವ್ಯಸನಪಟ್ಟಳು. ವೆಂಕಟಪ್ಪನಾಯಕನು ಕೀಳು ಜನರ ಸಹವಾಸದಿಂದ ಎಲ್ಲವನ್ನು ಹಾಳು ಮಾಡಿಕೊಳ್ಳುವನೆಂದು ಅವಳ ಭಾವನೆಯಾಗಿತ್ತು. ನಾಲ್ವಡಿ ವೆಂಕಟಪ್ಪನಾಯಕನ ಚಿಕ್ಕಪ್ಪ ಪಿಡ್ಡನಾಯಕನ ಮಕ್ಕಳೆಲ್ಲ, ಸಂಸ್ಥಾನ ಪದವಿಯಿಂದ ಪದಚ್ಯುತಿಗೊಂಡ ಮುದ್ದೋಭೀಮರಾಯನ ಜೊತೆಗೂಡಿ ಅರಸರ ವಿರುದ್ಧ ಪಿತೂರಿ ನಡೆಸಿದರು. ಇವೆಲ್ಲದರ ಮಧ್ಯೆಯೇ ನಾಲ್ವಡಿ ವೆಂಕಟಪ್ಪನಾಯಕನಲ್ಲಿ ಬ್ರಿಟಿಷರಿಂದ ವಿರುದ್ಧದ ಸ್ವಾತಂತ್ರ್ಯದ ಕಿಡಿ ಹೊರಹೊಮ್ಮಿತು. ದೇಶದ ನಾನಾ ಕಡೆ ಬ್ರಿಟಿಷರ ವಿರುದ್ಧ ಬಂಡಾಯಗಳು ನಡೆದವು. ಕರ್ನಾಟಕದಲ್ಲಿ ಕಿತ್ತೂರು, ಹಡಗಲಿ, ಮುಂಡರಗಿ, ನರಗುಂದ, ಕೊಪ್ಪಳ ಮುಂತಾದ ಕಡೆ ಬ್ರಿಟಿಷ್ ಸರ್ಕಾರದಕ್ರೂರನೀತಿ ವಿರುದ್ಧ ರಣಕಿಡಿಯನ್ನು ಸಿಡಿಸಲು ಸಜ್ಜಾಗಿದ್ದರು.

ದೇಶದ ಭವ್ಯ ಇತಿಹಾಸದ ರಾಷ್ಟ್ರಭಕ್ತರ ಸಾಲಿನಲ್ಲಿ ಸೇರಿ ಸುರಪುರಕ್ಕೆ ರಾಷ್ಟ್ರೀಯ ಮಹತ್ವ ತಂದುಕೊಟ್ಟನು. ಈತನ ನಂತರ ಸುರಪುರ ಸಂಸ್ಥಾನ ಇನ್ನೊಬ್ಬರ ವಶವಾಯಿತು. ದೇಶಕ್ಕಾಗಿಹೋರಾಡಿದ ಅನೇಕರು ಬ್ರಿಟಿಷರ ಕೈಯಲ್ಲಿ ನೇಣಿಗೇರಬೇಕಾಯಿತು. ರಾಜ ನಾಲ್ವಡಿ ವೆಂಕಟಪ್ಪನಾಯಕನನ್ನು ಬ್ರಿಟಿಷರು ಮೋಸದಿಂದ ಕೊಲೆ ಮಾಡಿದ ಮೇಲೆ ಸುರಪುರ ಸಂಸ್ಥಾನ ಬ್ರಿಟಿಷರ ಅಧೀನಕ್ಕೊಳಪಟ್ಟಿತು.

"ನಾಲ್ವಡಿ ವೆಂಕಟಪ್ಪನಾಯಕನ ಇವನ ತರುವಾಯಿ ಉತ್ತರಾಧಿಕಾರಿಯನ್ನು ಮಾಡಲು ವೆಂಕಟಪ್ಪನೊಂದಿಗೆ ಕ್ರಿ.ಶ.೧೮೯೦ರಲ್ಲಿ ಲಂಡನ್ನಿನ ಹೌಸ್ ಆಪ್ ಕಾಮನ್ಸ್‌ನಲ್ಲಿ ಸಂಸ್ಥಾನವನ್ನು ಮರಳಿ ಪಡೆಯಲು ಕಳುಹಿಸಿದ್ದಳು. ಆದರೆ ಅವಳ ಸಂಸ್ಥಾನವು ಬೇರೆ ತಿರಸ್ಕೃತಗೊಂಡಿತು. ಸುರಪುರ ಸಂಸ್ಥಾನ ಮರಳಿ ಪಡೆಯಲು ರಾಣಿ ರಂಗಮ್ಮ ವೆಂಕಟಪ್ಪನಾಯಕರ ಹಿರಿಯ ಪುತ್ರ ಕೃಷ್ಣಪ್ಪನಾಯಕನನ್ನು ದತ್ತು ತೆಗೆದುಕೊಂಡು ಪೂರ್ವಜರ ಜಹಂಗೀರು ಗ್ರಾಮಗಳನ್ನು ಆತನಿಗೆ ನೀಡಿದಳು. ಕ್ರಿ.ಶ.೧೯೦೯ರಲ್ಲಿ ಮರಣ ಹೊಂದಿದಳು"[೧೬].

ಕೃಷ್ಣಪ್ಪನಾಯಕನು ಹೈದರಾಬಾದ್ ವಿಮೋಚನೆಯಲ್ಲಿ ಪಾಲ್ಗೊಂಡಿದ್ದನು. ಈ ಸಂಸ್ಥಾನ ಕ್ರಿ.ಶ.೧೯೪೮ ಸೆಪ್ಟೆಂಬರ್ ೧ರಂದು ಭಾರತ ಒಕ್ಕೂಟವನ್ನು ಸೇರಿತು. ರಾಜಾ ಕೃಷ್ಣಪ್ಪನಾಯಕನು

ಕ್ರಿ.ಶ. ೧೯೫೨ರಲ್ಲಿ ನಿಧನವಾದನು. "ಈತನಿಗೆ ಪಿಡ್ಡನಾಯಕ ಮತ್ತು ಬ್ಯಾರಿಸ್ಟಲ್ ರಾಜಾ ವೆಂಕಟಪ್ಪನಾಯಕರೆಂದು ಇಬ್ಬರು ಮಕ್ಕಳಿದ್ದರು"[೧೭] ರಾಜಾಪಿಡ್ಡನಾಯಕರು ಸುರಪುರ ವಿಧಾನ ಸಭಾಕ್ಷೇತ್ರದಿಂದ ಆಯ್ಕೆಯಾಗಿ, ಅವರು ನಾಲ್ಕು ಬಾರಿ ವಿಧಾನಸಭಾ ಕ್ಷೇತ್ರಕ್ಕೆ ಆಯ್ಕೆಯಾಗಿ ಅನೇಕ ಜನಪರ ಕೆಲಸಗಳನ್ನು ಮಾಡಿ ೧೯೯೨ರಲ್ಲಿ ನಿಧನರಾದರು.

ರಾಜಾ ವೆಂಕಟಪ್ಪನಾಯಕರು ಹೈದರಾಬಾದ್‌ನಲ್ಲಿ ಪದವಿಯನ್ನು ಪಡೆದು ಉಚ್ಚ ವ್ಯಾಸಂಗಕ್ಕೆ ಲಂಡನ್‌ಗೆ ಹೋಗಿ ಬ್ಯಾರಿಸ್ಟರ್ ಪದವಿಯನ್ನು ಪಡೆದುಕೊಂಡರು. ನಂತರ ಹೈದರಾಬಾದ್ ನಿಜಾಮರ ಶ್ರೇಷ್ಠ ನ್ಯಾಯಾಲಯದಲ್ಲಿ ವಕೀಲರಾಗಿದ್ದರು. ಹಿಂದೂ ಜನರಿಗೆ ಕಿರುಕುಳ ನೀಡುತ್ತಿದ್ದ ಕಾಶಿಯ ರಜದಿಯ ವಿರುದ್ದ ಕೃತ್ಯಗಳನ್ನು ಖಚಿತಪಡಿಸಿದರು. ತಾಳಿಕೋಟೆಯಲ್ಲಿ ತರುಣರ ಕ್ಯಾಂಪನ್ನು ಪ್ರಾರಂಭಿಸಿ ಹೈದರಾಬಾದ್ ವಿಮೋಚನೆಗೆ ಹೋರಾಡಿದರು, ಆಗಿನ ಕೇಂದ್ರ ಗೃಹಮಂತ್ರಿ ಸರ್ದಾರ ವಲ್ಲಭಾಯಿ ಪಟೇಲ್ ವಿಮೋಚನೆಗೆ ಉತ್ತಮ ಸಂಬಂಧ ಹೊಂದಿದ್ದು ಇವರು ಹೈದರಾಬಾದ್ ವಿಮೋಚನೆಗಾಗಿ ಮಿಲಿಟರಿ ಕಾರ್ಯಚರಣೆಯನ್ನು ನಡೆಸುವಲ್ಲಿ ಯಶಸ್ವಿಯಾದರು. ಬ್ಯಾರಿಸ್ಟರ್ ವೆಂಕಟಪ್ಪನಾಯಕರು ೧೯೬೦ರಲ್ಲಿ ನಡೆದ ರಾಯಚೂರು ಲೋಕಸಭೆ ಮತ್ತು ಶಹಾಪುರ ರಾಜ್ಯ ವಿಧಾನಸಭೆಯ ಚುನಾವಣೆಗಳೆರಡರಲ್ಲೂ ಸ್ಪರ್ಧಿಸಿ ಎರಡರಲ್ಲೂ ಆಯ್ಕೆಯಾದರು. ಇವರು ಸುರಪುರ ಅರಸರಿಗಾಗಿ ನಿರ್ಮಿಸಲಾಗಿದ್ದ ಅರಮನೆಯಲ್ಲಿ ವಾಸವಾಗಿದ್ದರು. ೨೦೦೨ರಲ್ಲಿ ಇವರು ನಿಧನರಾದರು. ಇವರಿಗೆ ಮೂರು ಜನ ಮಕ್ಕಳಿದ್ದಾರೆ. ಹಿರಿಯ ಮಗ ರಾಜಾಸೀತಾರಾಮನಾಯಕರು ಇಂಜಿನಿಯರ್ ಪದವೀಧರರಾಗಿದ್ದು, ಸುರಪುರದಲ್ಲಿರುವರು ದ್ವಿತೀಯ ಪುತ್ರರಾದ ರಾಜಾಕೃಷ್ಣಪ್ಪನಾಯಕರು ಹೈದರಾಬಾದ್‌ನಲ್ಲಿ ವಾಸವಾಗಿದ್ದಾರೆ. ತೃತೀಯ ಪುತ್ರ ರಾಜಾ ಶ್ರೀನಿವಾಸನಾಯಕರು ರಾಜಕೀಯ ಪ್ರವೇಶಿಸಿ ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದರು. ಒಂದಲ್ಲ ಒಂದು ರೀತಿಯಲ್ಲಿ ರಾಜಕೀಯದೊಂದಿಗೆ ಜನರ ಸೇವೆ ಮಾಡುತ್ತಿದ್ದಾರೆ. ಇದು ಅರಸರ ವಂಶಪರಂಪರಿಯಾಗಿ ಬಂದಿರುವ ಗುಣ ಎಂದು ಹೇಳಬಹುದು.

- **ದೇವದುರ್ಗ ಸಂಸ್ಥಾನದ ನಾಯಕರು**

ದೇವದುರ್ಗ ತಾಲ್ಲೂಕು ರಾಯಚೂರು ಜಿಲ್ಲೆಯ ಪಶ್ಚಿಮ ಭಾಗದಲ್ಲಿದೆ. ಉತ್ತರದಲ್ಲಿ ಕೃಷ್ಣಾನದಿ ಹರಿಯುತ್ತಿದ್ದು, ಅದರಾಚೆಗೆ ಗುಲ್ಬರ್ಗ ಜಿಲ್ಲೆಯ ಸುರಪುರ, ಶಹಪುರ ತಾಲ್ಲೂಕುಗಳಿಂದ ಬೇರ್ಪಡಿಸುವ ಸೀಮಾ ರೇಖೆಯೂ ಆಗಿದೆ. ದೇವದುರ್ಗ ತಾಲ್ಲೂಕು ಪ್ರದೇಶಕ್ಕೆ ಮೇರೆಯಾಗಿ ಪೂರ್ವಕ್ಕೆ ರಾಯಚೂರು, ದಕ್ಷಿಣಕ್ಕೆ ಮನವಿ ಮತ್ತು ಪಶ್ಚಿಮದಲ್ಲಿ ಲಿಂಗಸೂಗೂರು ತಾಲ್ಲೂಕುಗಳಿವೆ.

"ದೇವದುರ್ಗ ತಾಲ್ಲೂಕು ಸಮುದ್ರಮಟ್ಟದಿಂದ ೩೮೯.೪ ಮೀಟರ್ ಎತ್ತರದಲ್ಲಿದೆ. ೧೬೦.೨೫ ಅಕ್ಷಾಂಶ ಹಾಗೂ ೭೬೦.೫೬ ರೇಖಾಂಶಗಳ ನಡುವೆ ಈ ತಾಲ್ಲೂಕು ವಿಸ್ತರಿಸಿವೆ. ಆಡಳಿತದ ಅನುಕೂಲಕ್ಕಾಗಿ ಈ ತಾಲ್ಲೂಕನ್ನು ದೇವದುರ್ಗ, ಗಬ್ಬುರು, ಜಾಲಹಳ್ಳಿ ಮತ್ತು ಅರಕೇರ ಎಂಬ ನಾಲ್ಕು ಹೋಬಳಿಗಳಾಗಿ ವಿಂಗಡಿಸಲಾಗಿದೆ. ದೇವದುರ್ಗ ತಾಲ್ಲೂಕಿನಲ್ಲಿ ಒಟ್ಟು ೧೮೮ ಹಳ್ಳಿಗಳಿವೆ. ಇವುಗಳಲ್ಲಿ ೧೭೩ ಗ್ರಾಮಗಳಲ್ಲಿ ಜನವಸತಿ ಇರುತ್ತದೆ. ೧೫ ಗ್ರಾಮಗಳಲ್ಲಿ ಜನವಸತಿ ಇರುವುದಿಲ್ಲ. ದೇವದುರ್ಗವೇ ಈ ತಾಲ್ಲೂಕಿನ ಆಡಳಿತ ಕೇಂದ್ರ ಮತ್ತು ದೊಡ್ಡ ಪಟ್ಟಣ"[೧೮].

ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕು ನಾಯಕ ಅರಸರ ಸಂಸ್ಥಾನವಾಗಿತ್ತು. ಇವರ ಮೂಲಪುರುಷರು ಸವಣೂರು ಬಂಕಾಪುರದಲ್ಲಿ ಮೊದಲ ವಾಸವಾಗಿದ್ದರಂತೆ. ನಂತರ ಇವರ ಮೂಲಪುರುಷ ಸೋಮಜಂಪಲ ಭೂಮಿಪತಿರಂಗಪ್ಪನಾಯಕರು ಚಂದನಕೇರಿ ದೇವದುರ್ಗದಿಂದ ಒಂದು ಕಿ.ಮೀ. ದೂರದಲ್ಲಿದೆ. ಈತನು ಚಂದಕೇರಿಯಲ್ಲಿ ಅರಸು ಮನೆತನದ ಸಂಸ್ಥಾಪಕ. ಈತನಿಗೆ ಐದು ಜನ ಮಕ್ಕಳು ಕಿಲಚನಾಯಕ, ಸಣ್ಣಕಿಲಚನಾಯಕ, ವೆಂಕಟಪ್ಪನಾಯಕ, ವಾಸುದೇವನಾಯಕ, ಕೃಷ್ಣಪ್ಪನಾಯಕ. ಆತನ ಮಕ್ಕಳು ಸೋಮಜಂಪಲ ಭೂಮಿಪತಿರಂಗಪ್ಪನಾಯಕರನ್ನು ವಾಸುದೇವನಾಯಕ ದೊರೆಯೆಂದು ಕರೆಯಲಾಗುತ್ತದೆ.

ವಾಸುದೇವನಾಯಕ ಚಂದನಕೇರಿ ಮತ್ತು ದೇವದುರ್ಗದಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿದನು. "ಆದರೆ ಚಂದನಕೇರಿಯೆ ಇವರ ಮೊದಲ ರಾಜಧಾನಿಯಾಗಿತ್ತು. ಅದನ್ನು ಚಂದ್ರಗಿರಿ ಎಂತಲೂ ಕರೆಯುತ್ತಿದ್ದರು. ನಂತರದಲ್ಲಿ ಚಂದ್ರಗಿರಿಯಿಂದ ತನ್ನ ರಾಜಧಾನಿಯನ್ನು ದೇವದುರ್ಗಕ್ಕೆ ವರ್ಗಾಯಿಸಿದನು. ಆಗ ದೇವದುರ್ಗದ ಅಧೀನದ ಏಳು ಪ್ರಮುಖ ಗ್ರಾಮಗಳಿಗೆ ತನ್ನ ಐದು ಜನ ಮಕ್ಕಳನ್ನು ನೇಮಿಸುತ್ತಾನೆ"[೧೯].ದೇವದುರ್ಗವನ್ನು ತನ್ನ ಅಧೀನದಲ್ಲಿದ್ದ ಏಳು ಪ್ರಮುಖ ಗ್ರಾಮಗಳಿಗೆ ತನ್ನ ಐದು ಜನ ಮಕ್ಕಳನ್ನು ನೇಮಿಸಿದನು. ಆಡಳಿತ ಸುರಕ್ಷತೆ ದೃಷ್ಟಿಯಿಂದ ರಾಜಧಾನಿ ದೇವದುರ್ಗವನ್ನು ಅರಸ ವಾಸುದೇವನಾಯಕ ತನ್ನ ಅಧೀನದಲ್ಲಿ ಇಟ್ಟುಕೊಳ್ಳುತ್ತಾನೆ ಹಾಗೂ ತನ್ನ ನಂತರ ಆಡಳಿತ ಅಧಿಕಾರಕ್ಕೆ ಬಂದ ಹಿರಿಯ ಮಗನಾದ ಕಾರಣ ಹಿರಿಯ ಮಗ ಕಿಲಚನಾಯಕನನ್ನು ಉಳಿಸಿಕೊಂಡನು. ಉಳಿದ ಪ್ರದೇಶದಲ್ಲಿ ಸಣ್ಣ ಕಿಲಚನಾಯಕನನ್ನು ಅರಕೇರಿಗೆ, ವೆಂಕಟಪ್ಪನಾಯಕನನ್ನು ಮುಂಡರಗಿಗೆ, ವಾಸುದೇವನಾಯಕನನ್ನು ಜಾಲಹಳ್ಳಿಗೆ, ಕೃಷ್ಣನಾಯಕನನ್ನು ರಾಮದುರ್ಗಕ್ಕೆ, ರಂಗಪ್ಪನಾಯಕನನ್ನು ಕ್ಯಾದಿಗೇರಿಗೆ, ತಿಮ್ಮಪ್ಪನಾಯಕನನ್ನು ಗಲಗಿಗೆ ಕಳುಹಿಸುತ್ತಾನೆ. ತಮ್ಮ ಮಕ್ಕಳಿಗೆ ಆಯಾಯ ಪ್ರದೇಶಗಳು ಆಡಳಿತ ಮಾಡಲು ನೀಡುತ್ತಾನೆ.

ವಾಸುದೇವನಾಯಕನು ಔರಂಗಜೇಬನ ಜೊತೆಗೆ ಸೇರುವನು. ಇದರಿಂದ ತನ್ನ ಸ್ಥಾನ ಭದ್ರಪಡಿಸಿಕೊಳ್ಳಲು ಮಾಡಿದ ಆಲೋಚನೆಯಿಂದ ಮೊಗಲರ ಸಂಗಡ ಸೇರಿ ಸುರಪುರದ ವಾಗಿನಗೇರಿ ಮುತ್ತಿಗೆ ಕ್ರಿ.ಶ. ೧೭೦೫ರಲ್ಲಿ ಹಾಕಿದರು. ಔರಂಗಜೇಬನ ವಶವಾದಾಗ, ಪೀತಾಂಬರ

ಬಹರಿ ಪಿಡ್ಡನಾಯಕ (ಕ್ರಿ.ಶ.೧೬೮೭-೧೭೨೬) ನು ಅಲ್ಲಿಂದ ತಪ್ಪಿಕೊಂಡು ಪಲಾಯನಗೈದು ತನ್ನ ಜನರೊಡನೆ ಕೃಷ್ಣ ನದಿಯನ್ನು ದಾಟಿ ಗುಡುಗುಂಟೆಯನ್ನು ತಲುಪುತ್ತಾನೆ.ಅಲ್ಲಿಂದ ಗುಡಗುಂಟಿ ಅತನ ಹುಚ್ಚು ಸೋಮಪ್ಪನಾಯಕರನ್ನು ಕರೆದುಕೊಂಡು ಹೋಗುವಾಗ ದೇವದುರ್ಗದ ವಾಸುದೇವನಾಯಕನು ಬೌಲಹಳ್ಳಿ ಮಾರ್ಗದಿಂದ ಮೊಘಲ್ ಸಹಾಯವನ್ನು ಪಡೆದು ಅವರನ್ನು ಬೆನ್ನಟ್ಟಿದನು. ಪಿಡ್ಡನಾಯಕನ ತಮ್ಮ ಭೂಪತಿನಾಯಕನ ಹೆಂಡರು ಮಕ್ಕಳು ವಾಸುದೇವನಾಯಕನ ಕೈಗೆ ಸಿಗುತ್ತಾರೆ. ಈ ಸುದ್ದಿಯನ್ನು ಕೇಳಿದ ಕೂಡಲೇ ಸುರಪುರದ ಅರಸ ಪೀತಾಂಬರಿ ಬಹಿರಿಪಿಡ್ಡನಾಯಕನು ಹಿಂದಿರುಗಿ ವಾಸುದೇವನಾಯಕನನ್ನು ಸೋಲಿಸುತ್ತಾನೆ. ವಾಸುದೇವನಾಯಕ ಮರಳುತ್ತಾನೆ. ಮೊಘಲರ ಸಂಗಡ ಕೂಡಿ ಅವರಿಗೆ ಸಹಾಯ ಮಾಡಿದ ಕಾರಣದಿಂದ ಔರಂಗಜೇಬನ ಪರವಾಗಿ ವಾಸುದೇವನಾಯಕನಿಗೆ 'ಶಾಹಆಲಮ'ನು ವಾಸುದೇವನಾಯಕನಿಗೆ ರಾಯಚೂರು ಪ್ರಾಂತ್ಯದ ಜಮೀನುದಾರಿಕೆಯನ್ನು ತಾನು ಪಟ್ಟವೇರಿದಮೂರನೇ ವರ್ಷದಲ್ಲಿ ನೀಡುತ್ತಾನೆ. ಇದರಿಂದ ಆಡಳಿತ ವಿಸ್ತರಣೆ ಹಾಗೂ ತಮ್ಮ ಸಂಸ್ಥಾನಕ್ಕೆ ಮೊಘಲರ ಬೆಂಬಲವನ್ನು ಪಡೆಯುತ್ತಾನೆ.

ಆನಂತರದ ಕಾಲದಲ್ಲಿ ಆಡಳಿತ ಸುರಕ್ಷತೆಯಿಂದ ಹಾಗೂ ಶಾಂತಿ ಉದ್ದೇಶದಿಂದ ದೇವದುರ್ಗದ ಅರಸರು ಮತ್ತು ಸುರಪುರದ ಅರಸರು ವೈವಾಹಿಕ ಸಂಬಂಧವನ್ನು ಬೆಳೆಸುತ್ತಾರೆ. ಸುರಪುರದ ಇಮ್ಮಡಿ ಪಾಮನಾಯಕನಿಗೆ ದೇವದುರ್ಗದ ಸಂಸ್ಥಾನದ ರುಕ್ಕಮ್ಮಳನ್ನು ಕೊಟ್ಟು ವಿವಾಹ ಮಾಡಲಾಗಿತ್ತು.

"ಪುರುಷಕಾರಿ ಲೋಕಯ್ಯನ ಗ್ರಂಥದಲ್ಲಿ ಇನ್ನೊಂದು ಘಟನೆ ಜರುಗುತ್ತದೆ. ನಿಜಾಮ ಆಸಿಫಿಜಾಹನು ಪಾಮನಾಯಕನನ್ನು ತನ್ನ ಬೇಟೆಗಾಗಿ ಕಲ್ಬುರ್ಗಿಯ ಸಮೀಪದ ಸುಲ್ತಾನ ಪುರಕ್ಕೆ ಬರಲು ಹೇಳುತ್ತಾನೆ. ಆಗ ಪಾಮನಾಯಕ ಸುಲ್ತಾನಪುರಕ್ಕೆ ಹೋದಾಗ, ಆಸಫಿಜಾಹನಿಗೆ ಆರೋಗ್ಯ ಸರಿ ಇರದ ಕಾರಣ ಬರದೆ ತನ್ನ ಸೇನಾಧಿಕಾರಿಯಾದ ಚಂದ್ರಸೇನನನ್ನು ಕಳುಹಿಸುತ್ತಾನೆ. ಚಂದ್ರಸೇನ ಪಾಮನಾಯಕನಿಗೆ ಮುಜುರೆ ಮಾಡುವಾಗ ಅವಮಾನಗೊಳಿಸುತ್ತಾರೆ"[೨೦]. ನಾಯಕನು ಖೇದಕ್ಕೊಳಗಾದನು. ಕೊನೆಗೆ ಪಾಮನಾಯಕ ತೀರಿಕೊಳ್ಳುವಾಗ ಚಂದ್ರಸೇನನು ಅಪಮಾನಗೊಳಿಸಿದುದ್ದನ್ನು ದೇವದುರ್ಗದ ವಾಸುದೇವನಾಯಕನಿಗೆ ತಿಳಿಸುತ್ತಾನೆ. ಮುಂದೆ ದೇವದುರ್ಗದ ವಾಸುದೇವನಾಯಕನು ಸೇಡು ತೀರಿಸಿಕೊಳ್ಳನೆಂದು ವಚನ ಕೊಡುತ್ತಾನೆ. ಈತನ ನಂತರ ಹಿರಿಯ ಮಗ ಕಿಲಚನಾಯಕನು ದೇವದುರ್ಗ ಸಂಸ್ಥಾನದ ಅಧಿಕಾರಿ (ಅರಸನ ಪಟ್ಟ) ಸ್ವೀಕರಿಸುತ್ತಾನೆ. ಕಿಲಚನಾಯಕ ತಮ್ಮ ಸುತ್ತಮುತ್ತಲಿನ ಸಂಸ್ಥಾನಗಳ ಮೇಲೆ ದಂಡೆತ್ತಿ ಹೋಗುತ್ತಾನೆ.

ಸುರಪುರದ ಅರಸ ಮೊಡಗೈ ವೆಂಕಟಪ್ಪನಾಯಕನಿಗೆ ಸಹಾಯ ಮಾಡುವುದು "ವೆಂಕಟಪ್ಪನಾಯಕ (ಕ್ರಿ.ಶ.೧೭೪೭-೧೭೫೨) ನು ತನ್ನ ರಾಜ್ಯ ವಿಸ್ತಾರಕ್ಕೆ ತೆರಳಿದಾಗ ಸ್ಥಳೀಯ ಆಸ್ಥಾನಿಕರಲ್ಲಿ ಕೆಲವರು ಮೂರುಕೇರಿಯ ತಮ್ಮ ಕೈಕೆಳಗಿನ ಬೇಡರ ದಂಡನ್ನು ಹುರಿದುಂಬಿಸಿ,

ಗುಡಗುಂಟೆಯ ಅರಸ ಸೋಮಸರ್ಜನನ್ನು ಕರೆತಂದು ಸುರಪುರದ ಅರಸನನ್ನಾಗಿ ಮಾಡುತ್ತಾರೆ"[೨೧]. ಆತ ಒಂಬತ್ತು ತಿಂಗಳುಗಳ ಕಾಲ ಸುರಪುರವನ್ನು ಆಳುತ್ತಾನೆ. ಮರಳಿ ಮೊಡಗೈ ವೆಂಕಟಪ್ಪ ನಾಯಕ ಬಂದಾಗ, ಸುರಪುರದ ಬಂಡುಗಾರರು ಈತನನ್ನು ಸೇರೆಯಲ್ಲಿ ಇಡುತ್ತಾರೆ. ದೇವದುರ್ಗದ ಕಿಲಚನಾಯಕನು ಬಂದು ಮೂರುಕೇರಿಯ ಬೇಡರನ್ನು ಒಟ್ಟುಗೂಡಿಸಿ ಅರಸನನ್ನು ಬಿಡುಗಡೆ ಮಾಡಿಸುತ್ತಾನೆ. ಆಗ ಸೋಮಸರ್ಜನಾಯಕ ಗುಡುಗಂಟಿಗೆ ಪಲಾಯನಗೈಯುತ್ತಾನೆ.

ಕೆಲವು ದಿನಗಳ ನಂತರ ದೇವದುರ್ಗದ ಅರಸ ಕಿಲಚನಾಯಕ ತನ್ನ ಸಂಸ್ಥಾನವನ್ನು ವಿಸ್ತರಿಸಲು ಕ್ಯಾದಿಗೇರಿಯ ಮೇಲೆ ದಾಳಿ ಮಾಡುತ್ತಾನೆ. ಈ ಯುದ್ಧ ಮಾಡುವುದು ತನ್ನ ಸಂಸ್ಥಾನ ಸೈನ್ಯದ ಬಲಿಷ್ಟತೆ ಪ್ರದರ್ಶನ ಹಾಗೂ ಶೌರ್ಯದ ನಿದರ್ಶನ ಅರಸರ ಲಕ್ಷಣವಾಗಿದೆ. ಆ ಕಾಲಘಟ್ಟದಲ್ಲಿ ಯುದ್ಧಗಳಿಗೆ ಪ್ರಾಮುಖ್ಯತೆ ನೀಡುತ್ತಿದ್ದರು. ಅರಸರ ಕಿಲಚನಾಯಕನ ಕೆಲವು ದಿನಗಳ ನಂತರ ಕ್ಯಾದಿಗೇರಿಯ ಪಾಳೆಯಗಾರರ ಮೇಲೆ ದಾಳಿ ಮಾಡುತ್ತಾನೆ. ಹಾಗೂ ಕ್ಯಾದಿಗೇರಿಯ ಪಾಳೆಯಗಾರನು ಸುರಪುರದ ಮುಮ್ಮಡಿ ಪಾಮನಾಯಕ (ಕ್ರಿ.ಶ.೧೭೫೦–೭೩)ನ ಮೊರೆ ಹೋಗುತ್ತಾನೆ. ಕೂಡಲೇ ಪಾಮನಾಯಕ ತನ್ನ ದಂಡಿನೊಡನೆ ಕ್ಯಾದಿಗೇರಿಗೆ ಹೋಗಿ ದೇವದುರ್ಗದ ಕಿಲಚನಾಯಕನನ್ನು ಬೆನ್ನಟ್ಟುತ್ತಾನೆ. ಕ್ಯಾದಿಗೇರಿಯ ಅರಸನನ್ನು ರಕ್ಷಿಸುತ್ತಾನೆ. ಇಲ್ಲಿ ಕ್ಷತ್ರಿಯರು ಅಥವಾ ಯೋಧರು ದೇಹಿ ಎಂದು ಬಂದವರನ್ನು ರಕ್ಷಿಸುವುದು ಧರ್ಮ ಎಂಬುವುದು ಸುರಪುರದ ಅರಸರ ಪಾಲಿಸಿರುವುದರಿಂದ ದೇವದುರ್ಗದ ಅರಸರು ಮತ್ತು ಸುರಪುರದ ಅರಸರು ವೈವಾಹಿಕ ಸಂಬಂಧ ಇದ್ದರು ಯುದ್ಧ ಮಾಡಲು ಯೋಧರಿಗೆ ಅದು ಆಲೋಚನೆ ಮಾಡುವುದಿಲ್ಲ ಎಂಬುವುದು ತಿಳಿಯುತ್ತದೆ.

ಕಿಲಚನಾಯಕನ ನಂತರ ಅವನ ಮಗ ವೆಂಕಟಪ್ಪನಾಯಕ ಈತನ ನಂತರ ಕೃಷ್ಣನಾಯಕ ಆಡಳಿತ ಮಾಡಿದನಂತರ ಈತನ ಮಕ್ಕಳು ರಾಜಾ ರಂಗಪ್ಪನಾಯಕ, ರಾಜಾ ವಾಸುದೇವನಾಯಕ, ಹಿರಿಯ ಮಗ ರಾಜಾರಂಗಪ್ಪನಾಯಕ, ಚಂದನಕೇರಿಯ ಮುಖ್ಯಸ್ಥನಾಗಿದ್ದ. ಇವನ ತಂದೆಯ ನಂತರ ಚಂದನ ಕೇರಿಯ ಪಾಳೆಯಗಾರನಾದ ಇಲ್ಲಿ ಕಿಲಚನಾಯಕನ ನಂತರ ಉತ್ತಮ ಆಡಳಿತ ಮಾಡಿರುವ ಬಗ್ಗೆ ಅರಸರ ರಂಗಪ್ಪನಾಯಕ ಇಲ್ಲವಾಗಿದೆ. ಕಾರನ "ಇಲ್ಲಿ ಬಿಜಾಪುರದ ಎರಡನೇ ಅಲಿ ಆದಿಲ್‌ಷಾಹನ ಮರಣದ (ಕ್ರಿ.ಶ.೧೬೭೨) ನಂತರ ಈ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶವನ್ನು ರಕ್ಷಿಸಲು ಸುರಪುರದ ದೊರೆ ಹಸರಂಗಿ ಪಾಮನಾಯಕನಿಗೆ ಕೊಡಲ್ಪಟ್ಟತ್ತು"[೨೨]. ನಾಮ ಮಾತ್ರ (ಹೆಸರಿಗೆ) ರಾಜರಂಗಪ್ಪನಾಯಕ ಅರಸನು, ಸಂಪೂರ್ಣ ಅಧಿಕಾರ ಸುರಪುರದ ಅರಸರದಾಗಿತ್ತು. ಸುರಪುರದ ಅರಸರು ಆಡಳಿತ ಹಾಗೂ ಆಡಳಿತ ವೈಖರಿಯು ಇವರದೇ ಸಂಪೂರ್ಣವಾಗಿರುವುದರಿಂದ ಸುರಪುರದ ಅರಸನಿಗೆ ದೇವದುರ್ಗದ ಅರಸರು ತೆರಿಗೆಗಳನ್ನು ಕೊಡಬೇಕಾಗಿತ್ತು.

ಈತನ ನಂತರ ಚಿಕ್ಕ ಕೇಶವನಾಯಕ ದೇವದುರ್ಗದ ದೊರೆಯಾದ ಈತನ ಅಧಿಕಾರವಧಿಯಲ್ಲಿ ಈ ಸಂಸ್ಥಾನದ ವಾರ್ಷಿಕ ಆದಾಯ ಮೂರು ಲಕ್ಷರೂಪಾಯಿಗಳಷ್ಟಿದ್ದಿತು. ಈತನು ಇಲ್ಲಿ ವಾರಕ್ಕೊಮ್ಮೆ ಸಂತೆ ನಡೆಯುವಂತೆ ಕ್ರಿ.ಶ. ೧೭೬೯ರಲ್ಲಿ ಹೈದರಾಲಿಯ ಮೇಲೆ ದಂಡಯಾತ್ರೆ ಹೊರಟ ಪೇಶ್ವೆ ಮತ್ತು ನಿಜಾಮರ ಉಭಯ ಪಡೆಗಳು ದೇವದುರ್ಗದಲ್ಲಿ ಬೀಡುಬಿಟ್ಟವು. ಚಿಕ್ಕ ಕೇಶವನಾಯಕ ಕಾಲದಲ್ಲಿ ಪೇಶ್ವೆ ಮತ್ತು ನಿಜಾಮರು ಬೀಡುಬಿಟ್ಟಿದರು ಎಂಬುವುದು ಇವರಿಗೆ ವಿಧೇಯರಾಗಿ(ಸಹಾಯಕ) ಇದ್ದರು ಎಂಬುವುದು ತಿಳಿಸುತ್ತದೆ ಹಾಗೂ ಚಿಕ್ಕ ಕೇಶವನಾಯಕ "ನಿಜಾಮಪೇಟೆ, ಸತ್ಯಂಪೇಟೆ, ಕೋಟೆಪೇಟೆಗಳನ್ನು ಕಟ್ಟಿಸಿದನು. ವ್ಯಾಪಾರ ವಹಿವಾಟಿಗೆ ಉತ್ತಮ ಉದ್ಯಮ ಮಾಡುವುದು ಸರಿಯಾದ ಮಾರ್ಗವಾಗಿದೆ. ಅದರಿಂದ ಈತನ ಕಾಲದಲ್ಲಿ ಆದಾಯ ಹೆಚ್ಚು ಬರುತ್ತಿತ್ತು. ಈತನ ನಂತರ ಕೊಳ್ಳಿರಂಗಪ್ಪನಾಯಕ ಅಧಿಕಾರ ಸ್ವೀಕರಿಸಿದ"[೨೩]

ಅರಸ "ರಂಗಪ್ಪನಾಯಕನನ್ನು ಕೊಳ್ಳಿರಂಗಪ್ಪನಾಯಕ ಎಂಬ ಹೆಸರಿನಿಂದ ಕರೆಯುವರು ಆತನ ಮರಣ ನಂತರ ಸುರಪುರದ ಇಮ್ಮಡಿ ವೆಂಕಟಪ್ಪನಾಯಕನ ದತ್ತು ಮಗ ಶ್ರೀನಿವಾಸ ನಾಯಕನ ಜವಳ ಕಾರ್ಯಕ್ರಮಕ್ಕೆ ಸೋದರ ಮಾವನಾದ ರಂಗಪ್ಪ ಮತ್ತು ಬಂಧುಬಳಗ ಹೋಗದ ಕಾರಣ ವೆಂಕಟಪ್ಪನಾಯಕ ಸಾಸಿವಿಗೇರಿ, ಚಂದನಗೇರಿ ಹಾಗೂ ದೇವದುರ್ಗದ ಪ್ರಮುಖ ಬಂಟರನ್ನು ಕರೆದು ದಂಡಿನ ಮುಖ್ಯಸ್ಥರನ್ನು ನೇಮಕ ಮಾಡಿ ದೇವದುರ್ಗದ ರಂಗಪ್ಪ ನಾಯಕನನ್ನು ಸೆರೆಹಿಡಿದು ತರಬೇಕೆಂದು ಆಜ್ಞೆಮಾಡುತ್ತಾನೆ "[೨೪].

ರಂಗಪ್ಪನಾಯಕ ತಲೆಮರೆಸಿಕೊಂಡನಾದರೂ ಆತನನ್ನು ಶೋಧಿಸಿ ಸುರಪುರ ಸೈನ್ಯವು ಬೆನ್ನತ್ತಿತ್ತು. ತಪ್ಪಿಸಿಕೊಳ್ಳುವ ಯತ್ನದಲ್ಲಿ ಈತ ಉಳಿದ ಪರಿವಾರದವರನ್ನು ಕರೆದುಕೊಂಡು ದೇವದುರ್ಗ ಬೆಟ್ಟದ ಪೂರ್ವಕ್ಕಿದ್ದು, ಮುದ್ದಿನ ಮನೆಗೆ ಹೋಗಿ ತನ್ನ ಕೈಯಲ್ಲಿದ್ದ ಕೊಳ್ಳಿಯಿಂದ ಸಿಡಿಮದ್ದಿಗೆ ಬೆಂಕಿ ಹಚ್ಚಿದಾಗ ತಾನೂ ತನ್ನ ಪರಿವಾರವು ಹಾಗೂ ಈತನನ್ನು ಬೆನ್ನಟ್ಟಿದ್ದ ಸುರಪುರದ ಸೈನ್ಯವೂ ಸಿಡಿಮದ್ದಿಗೆ ಆಹುತಿಯಾಯಿತು. ಈ ಘಟನೆಯಿಂದ ಈತನಿಗೆ ಕೊಳ್ಳಿರಂಗಪ್ಪನೆಂಬ ಹೆಸರು ಪ್ರಾಪ್ತವಾಯಿತು. ಇವರ ವಂಶದಲ್ಲಿ ಉಳಿದವರು ಈತನ ಪತ್ನಿ ಹೆರಿಗೆಗೆ ಹೋಗಿದ್ದ ಕಾರಣ ಉಳಿಯುತ್ತಾಳೆ ಈಕೆಗೆ ಜನಿಸಿದ ಮಗ ಕೃಷ್ಣಪ್ಪನಾಯಕ ಮುಂದೆ ದೇವದುರ್ಗದ ಅರಸನಾದನು. ಆದರೆ ದೇವದುರ್ಗ ಅರಸನಾದನು. ಐದುಭಾವಿ ಈ ಪರಗಣಗಳಾದ ದೇವದುರ್ಗ, ಅಂಕೇರಿ, ಕ್ಯಾದಿಗೇರಿ, ಜಾಲಿಬೆಂಚಿ, ಗೋನವಾಟ್ಲ ವೆಂಕಟಪ್ಪನಾಯಕನ ಅಧೀನಕೊಳ್ಳಪಟ್ಟವು. ಆಗ ನಿಜಾಮನು ಈ ಪರಗಣಗಳನ್ನು ವೆಂಕಟಪ್ಪನಾಯಕನಿಗೆ ಕೊಟ್ಟುಸನ್ನದಾ ಬರೆದುಕೊಟ್ಟನು.

ನಂತರ ಸುರಪುರದ ಮುಮ್ಮಡಿ ಪಿಡ್ಡನಾಯಕ (ಕ್ರಿ.ಶ ೧೮೦೨-೧೮೨೭)ಯ ದೇವದುರ್ಗದ ಇಚೇರಿ ಕಿಲ್ಲೆಗಳನ್ನು ಕ್ರಿ.ಶ ೧೮೧೧ರಲ್ಲಿ ಪುನಃ ಜೀರ್ಣೋದ್ದಾರ ಮಾಡಿದನು. ನಂತರ ಕ್ರಿ.ಶ. ೧೮೫೩ ಮೇ ೨೧ರಂದು ನಿಜಾಮನು ಬೀರಾರ್ ಒಪ್ಪಂದಕ್ಕೆ ಸಹಿ ಹಾಕಿದನು. ಆ

ಪ್ರಕಾರ ಬೀರಾರ್ ಪ್ರಾಂತ್ಯವನ್ನು ಈಸ್ಟ್ ಇಂಡಿಯಾ ಕಂಪನಿಗೆ ಬಿಟ್ಟುಕೊಡಲಾಯಿತು. ಆಗಿನಿಂದ ಈ ಸಂಸ್ಥಾನವು ಬ್ರಿಟಿಷರ ಅಧೀನಕ್ಕೆ ಒಳಪಟ್ಟಿತ್ತು. ಇಲ್ಲಿ ಬ್ರಿಟಿಷರ ಪ್ರತಿನಿಧಿಗಳು ಇರುತ್ತಿದ್ದರು. ಹೀಗಾಗಿ ೬೦ ಸೈನಿಕರೊಂದಿಗೆ ಸುರಪುರದ ಶಿಬಿರದಲ್ಲಿದ್ದ ಕ್ಯಾಂಬೆಲ್‌ನಿಗೆ ಅಲ್ಲಿ ಜೀವಭಯ ಶುರುವಾಗಿ ತಮ್ಮ ಆಳ್ವಿಕೆ ಇರುವ ದೇವದುರ್ಗಕ್ಕೆ ತೆರಳಲು ಆಪೇಕ್ಷೆ ಪಟ್ಟಿದ್ದುದು ಕಂಡುಬರುತ್ತದೆ.

ನಂತರ "ಈ ಮನೆತನದವರು ಬ್ರಿಟಿಷರ ಆಡಳಿತದಲ್ಲಿ ಮೌನವಾಗಿ ಕಾಲ ನೂಕಿದರು ಇವರ ಉಪಜೀವನಕ್ಕಾಗಿ ಬ್ರಿಟಿಷರು ಕೆಲವು ಭೂಮಿಗಳನ್ನು ಬಿಟ್ಟಿದ್ದರು. ಈಗ ಈ ಮನೆತನದ ವಂಶಸ್ಥರು ದೇವದುರ್ಗದಲ್ಲಿಯೇ ನೆಲೆಸಿದ್ದಾರೆ. ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಉತ್ತಮ ಸ್ಥಾನದಲ್ಲಿದ್ದಾರೆ. ಈ ಮನೆತನದ ಹಿರಿಯ ವಕೀಲರಾಗಿದ್ದ ರಾಜಾ ದಿವಂಗತ ಕಿಲಚನಾಯಕರು ೧೯೬೨ರಲ್ಲಿ ಲಿಂಗಸೂಗೂರು ಕ್ಷೇತ್ರದಿಂದ ವಿಧಾನಸಭೆಗೆ ಸ್ಪರ್ಧಿಸಿದ್ದರು. ಗೆಲುವು ಆಗಲಿಲ್ಲ"[೨೫].

ಕಾರಣ ಇವರು ದೇವದುರ್ಗದ ಕ್ಷೇತ್ರದವರಾಗಿದ್ದರು. ಈ ಮನೆತನದವರಾದ ರಾಜಾ ವೆಂಕಟಪ್ಪನಾಯಕರು. ರಾಜಾ ಚಂದ್ರಹಾಸ ನಾಯಕರು, ರಾಜ್ಯದ ರಾಜಕಾರಣಿಗಳೊಂದಿಗೆ ಉತ್ತಮ ಬಾಂಧವ್ಯ ಹೊಂದಿದ್ದಾರೆ. ಹಾಗೂ ಆ ಭಾಗದ ಎಲ್ಲಾ ಜನಾಂಗದ ಪ್ರಜೆಗಳ ಮನದಲ್ಲಿದ್ದಾರೆ. ಈಗಲೂ ಸಮಾಜ ಇವರನ್ನು ಗೌರವದಿಂದ ಗುರುತಿಸುತ್ತದೆ. ಆ ಭಾಗದ ಹಬ್ಬ ಹರಿದಿನಗಳಲ್ಲಿ ಜಾತ್ರೆ ಉತ್ಸವಗಳಲ್ಲಿ ಭಾಗವಹಿಸುತ್ತಾರೆ. ಈ ಮನೆತನ ಜೀವಂತವಾಗಿ ಈ ಸಂಸ್ಥಾನವನ್ನು ಹೆಸರು ಗೌರವ ಹಾಗೆಯೇ ಉಳಿಸಿ ಬೆಳಸಿಕೊಂಡು ಬಂದಿದ್ದಾರೆ.

- **ಗುಂತಗೋಳದ ಸಂಸ್ಥಾನದ ನಾಯಕರು**

ಗುಂತಗೋಳದ ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನಿಂದ ಸುಮಾರು ೩೦ಕಿ.ಮೀ. ದೂರದಲ್ಲಿದೆ. ಇಲ್ಲಿ ನಾಯಕ ಜನಾಂಗದ ಅರಸರು ಆಳ್ವಿಕೆ ಮಾಡಿದ್ದಾರೆ. ಈ ಮನೆತನದ ಕುರಿತಾಗಿ ಆಕರಗಳು ಲಭ್ಯವಿಲ್ಲ. ಹೀಗಾಗಿ ಸ್ಥಳೀಯ ಸ್ಮಾರಕಗಳನ್ನು, ಜನಪದ ಹಾಡುಗಳನ್ನು ಅವಲೋಕಿಸಿದಾಗ ವ್ಯಕ್ತಗೊಳ್ಳುವ ಅಭಿಪ್ರಾಯಗಳನ್ನು ಆಧರಿಸಿ ಈ ಮನೆತನದ ವಂಶಸ್ಥನನ್ನು ಗುರುತಿಸಲಾಗಿದೆ. ಹಾಗೂ ಗುಂತಗೋಳ ಪರಿಸರದಲ್ಲಿರುವ ಅನೇಕ ಹಿರಿಯ ತಲೆಮಾರಿನವರನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

'ಗುಂತ' ಎಂದರೆ ತಗ್ಗಾದ ಪ್ರದೇಶ. 'ಗುಳೆ' ಎಂದರೆವಿಪ್ಲವ ಕಾಲದಲ್ಲಿ ಹೋಗಿ ನೆಲೆಸಿರುವುದು. ತಗ್ಗ ಪ್ರದೇಶದಲ್ಲಿ ಯಾವುದೇ ವಿಪ್ಲವ ಕಾಲದಲ್ಲಿ ಹೋಗಿ ಅಲ್ಲಿ ನೆಲೆಯೂರಿರುವುದರಿಂದ ಈ ಹೆಸರು ಬಂದಿದೆ. ಮೊದಮೊದಲು ಇದನ್ನು ಗುಂತಗುಳೆ ಎಂದು ಕರೆಯುತ್ತಿದ್ದರು. ಗುಂತಗೋಳನಾಯಕರು ಕ್ರಿ.ಶ. ೧೮೯೧ ರಿಂದ ೧೯೪೮ ರವರೆಗೆ ಆಳ್ವಿಕೆ ಮಾಡಿದ್ದಾರೆ. ಇವರು ಮೂಲತಃ ಕಂಚಿಯಿಂದ ಬಂದರು. ಬರುವಾಗ ತಮ್ಮೊಂದಿಗೆ ಅನೇಕ

ಜನರನ್ನು ಕರೆದುಕೊಂಡು ಬಂದಿದ್ದಾರೆ. ಇವರೊಂದಿಗೆ ಬಂದ ಮನೆತನದವರಿಗೆ ಕಂಚಿಯವರು ಎಂದು ಕರೆಯುತ್ತಾರೆ. ಇವರ ಕುಟುಂಬಗಳು ಇಂದಿಗೂ ಗುಂತಗೋಳದಲ್ಲಿವೆ.

ಗುಂತಗೋಳದ ಮೂಲಪುರುಷ ರಾಜಾ ಕಾಳಭೈರವ ನಾಯಕ ನಂತರ ಈತನ ಮಗ ರಾಜ ಕಾಲಾರಲಿಂಗರಾಜ ನಾಯಕ ಈತನಿಗೆ ಇಬ್ಬರೂ ಗಂಡು ಮಕ್ಕಳು ರಾಜಾ ರಾಯಪ್ಪನಾಯಕ. ರಾಜಾ ಕೃಷ್ಣಪ್ಪನಾಯಕ ಈತನಿಗೆ ಮಕ್ಕಳಿಲ್ಲ. ಹಿರಿಯಮಗ ರಾಜಾ ರಾಯಪ್ಪ ನಾಯಕ ಅಧಿಕಾರ ಸ್ವೀಕರಿಸಿದನು. ಈತನು ನಂತರ ಮಗ ರಾಜಾ ಭೈರನಾಯಕ ಅಧಿಕಾರಕ್ಕೆ ಬಂದನು. ಈತನಿಗೆ ಇಬ್ಬರು ಮಕ್ಕಳು ರಾಜಾ ದೊಡ್ಡ ಅಮರಪ್ಪನಾಯಕ, ರಾಜಾ ಸಣ್ಣ ಅಮರಪ್ಪನಾಯಕ ಈತನ ಮಗ ರಾಜಾತೀರ್ಥಪ್ಪನಾಯಕ ಈತನ ಮಗ ರಾಜಾ ರಾಯಪ್ಪನಾಯಕ ನಂತರ ರಾಣಿ ರಂಗಮ್ಮ ಇವರು ಅಧಿಕಾರ ಸ್ವೀಕರಿಸಿಲ್ಲ ಆದರೆ ಈ ಸಂಸ್ಥಾನದ ವಂಶಸ್ಥರು. ಹಿರಿಯಮಗ ರಾಜಾದೊಡ್ಡ ಅಮರಪ್ಪನಾಯಕ ಉತ್ತರಾಧಿಕಾರಿಯಾಗುತ್ತಾನೆ. ಈತನಿಗೆ ಇಬ್ಬರು ಮಕ್ಕಳು ರಾಜಾ ಅಮರಪ್ಪನಾಯಕ ರಾಜಾ ಓಬಳನಾಯಕ ಇವರಲ್ಲಿ ರಾಜಾ ಅಮರಪ್ಪನಾಯಕ ಅಧಿಕಾರ ಸ್ವೀಕರಿಸಿ ಆಡಳಿತ ನಡೆಸಿದನು. ಈತನಿಗೆ ಇಬ್ಬರು ಮಕ್ಕಳು ರಾಜಾ ರಾಯಪ್ಪನಾಯಕ, ರಾಜಾ ತುಕ್ಕಪ್ಪನಾಯಕ ಇವರಲ್ಲಿ ರಾಜ ರಾಯಪ್ಪನಾಯಕ ಅಧಿಕಾರ ಸ್ವೀಕರಿಸಿ ಆಡಳಿತ ನಡೆಸಿದನು. ಈತನಿಗೆ ನಾಲ್ಕು ಜನ ಮಕ್ಕಳು ರಾಜ ಅಮರಪ್ಪನಾಯಕ, ರಾಜಾ ರಾಯಪ್ಪನಾಯಕ ಈತನಿಗೆ ಇಬ್ಬರು ಮಕ್ಕಳು ರಾಜಾ ರಾಯಪ್ಪನಾಯಕ, ರಾಜಾ ಬೈರನಾಯಕ, ರಾಜಾಲಿಂಗನಾಯಕ, ರಾಜಾಭೈರನಾಯಕ, ಇವರಲ್ಲಿ ಹಿರಿಯ ಮಗನಾದ ರಾಜಾ ಅಮರಪ್ಪನಾಯಕ ಅಧಿಕಾರ ಸ್ವಿಕರಿಸಿದನು. ಇತನಿಗೆ ಇಬ್ಬರು ಮಕ್ಕಳು ರಾಜಾ ರಾಯಪ್ಪನಾಯಕ, ರಾಜಾ ಓಬಳನಾಯಕ, ಇವರಲ್ಲಿ ರಾಜಾರಾಯಪ್ಪ ನಾಯಕ ಗದ್ದುಗೆ ಏರಿದನು ಇತನಿಗೆ ರಾಜಾ ನರಸಿಂಹನಾಯಕ, ರಾಜಾ ವೆಂಕಟಪ್ಪನಾಯಕ ಎಂಬ ಇಬ್ಬರು ಮಕ್ಕಳು ಹಿರೆಮಗನಿಗೆ ಪಟ್ಟಕಟ್ಟಲಾಗಿದೆ. ಈತನಿಗೆ ಮೂರುಜನ ಮಕ್ಕಳು ರಾಜಾ ರಾಯಪ್ಪನಾಯಕ, ರಾಜಾ ಅಮರೇಶ್ವರನಾಯಕ, ರಾಜಾ ಶ್ರೀನಿವಾಸನಾಯಕ.

"ಗುಂತಗೋಳದ ನಾಯಕರು ಬಿಜಾಪುರದ ಆದಿಲ್‌ಶಾಹಿಗಳ ಆಡಳಿತಾವಧಿಯಲ್ಲಿ (ಕ್ರಿ.ಶ.೧೪೮೫–೧೬೮೬) ನಿರ್ಲಕ್ಷಿಸಲ್ಪಟ್ಟ ಪ್ರದೇಶದಲ್ಲಿ ಒಂದು ಸಂಸ್ಥಾನವನ್ನು ಸ್ಥಾಪಿಸಿದರು. ಬ್ರಿಟಿಷ್ ಮತ್ತು ಹೈದರಾಬಾದ್ ನಿಜಾಮ (ಕ್ರಿ.ಶ.೧೭೨೪–೧೯೪೮) ದಬ್ಬಾಳಿಕೆ ಮಧ್ಯೆ ಸಮರ್ಥವಾಗಿ ಆಳ್ವಿಕೆ ನಡೆಸಿದುದು ವಿಶೇಷವಾಗಿದೆ"[೨೬]. ಗುಂತಗೋಳದ ನಾಯಕರು ಮೊದಲಿಗೆ ಬಿಜಾಪುರದ ಆದಿಲ್‌ಶಾಹಿಗಳ ಅಧೀನರಾಗಿದ್ದರು. ಬಿಜಾಪುರದ ಆದಿಲ್‌ಶಾಹಿಗಳಿಗೆ ನಾಯಕ ಸಂಸ್ಥಾನಗಳು ಅವರ ಅಧೀನದಲ್ಲಿಯೇ ಆಡಳಿತ ನಡೆಸಿದರು. ಹಾಗೆಯೇ ಗುಂತಗೋಳದ ಸುರಪುರ ಆದಿಲ್‌ಶಾಹಿಗಳು ಅಧೀನದಲ್ಲಿಯೇ ಜಹಂಗೀರು ಹಾಕಿಕೊಡುತ್ತಿದ್ದರು. ಹೀಗಾಗಿ ಇವರು ಮೊದಲು ಜಹಂಗೀರುದಾರರಾಗಿದ್ದರು. ನಂತರ ಔರಂಗಜೇಬನು ಬಿಜಾಪುರವನ್ನು ಮುತ್ತಿ ಸಿಕಂದರನನ್ನು ಸೆರೆಹಿಡಿದು ಆದಿಲ್‌ಶಾಹಿಗಳ ಆಳ್ವಿಕೆಯನ್ನು

ಸಮಾಪ್ತಿಗೊಳಿಸಿದ ಮೇಲೆ ಇವರು ಸ್ವತಂತ್ರವಾಗಿ ಆಳ್ವಿಕೆ ಮಾಡಿದರು ಇವರು ಮೊದಲ ಕೃಷ್ಣಾನದಿಯ ನಡುಗಡ್ಡೆಯಾದ ಜಲದುರ್ಗದಲ್ಲಿ ಆಳ್ವಿಕೆ ಪ್ರಾರಂಭಿಸಿದರು. ಜಲದುರ್ಗವೇ ಇವರ ಮೊದಲ ರಾಜಧಾನಿ ಗುಂತಗೋಳ ಆದಿಲ್‌ಶಾಹಿಗಳ ಕಾಲದಲ್ಲಿ ಖೈದಿಗಳಿಗೆ ಶಿಕ್ಷೆ ನೀಡುವ ಸ್ಥಳವಾಗಿ ಪರಿವರ್ತನೆಯಾದ ತರುವಾಯಿ ಇವರು ಗುಂತಗೋಳಕ್ಕೆ ಬಂದು ನೆಲೆಸಬೇಕಾಯಿತು.

ಗುಂತಗೋಳ ಸಂಸ್ಥಾನದ ಮೂಲಪುರುಷ ಕಾಳಭೈರವನಾಯಕನ ಗಚ್ಚಿನಕಟ್ಟಿ ಎಂದು ಕರೆಯುತ್ತಾರೆ. ಗುಂತಗೋಳದ ನಾಯಕ ಅರಸರಲ್ಲಿ ರಾಜಾ ಅಮರಪ್ಪನಾಯಕ, ರಾಜಾಬಸಪ್ಪನಾಯಕ, ರಾಜಾ ಇಮ್ಮಡಿ ಅಮರಪ್ಪನಾಯಕ, ರಾಜಾ ಶ್ರೀನಿವಾಸನಾಯಕ, ರಾಜಾ ಇಮ್ಮಡಿಬಸಪ್ಪನಾಯಕ, ರಾಜಾ ರಾಯಪ್ಪನಾಯಕ, ರಾಜಾ ಮುಮ್ಮಡಿ ಅಮರಪ್ಪನಾಯಕ, ರಾಜಾ ಇಮ್ಮಡಿ ರಾಮಪ್ಪನಾಯಕ, ರಾಜಾ ನರಸಿಂಹನಾಯಕ ಇವರುಗಳು ಪ್ರಮುಖರಾಗಿದ್ದಾರೆ.

"ಈ ಸಂಸ್ಥಾನದ ಅರಸರಿಗೆ 'ಬಹರಿ ಬಹದ್ದೂರ್', 'ನಾಯಕಾಚಾರ್ಯ', 'ಮಹಾನಾಯಕ' ಎಂಬ ಬಿರುದುಗಳಿವೆ. ಇವರಿಗೆ ಆದಿಲ್‌ಶಾಹಿಗಳು 'ಬಹರಿ ಬಹದ್ದೂರ್' ಎಂಬ ಬಿರುದನ್ನು ನೀಡಿ ಗೌರವಿಸಿದ್ದಾರೆ. ಈ ಭಾಗದ ನಾಯಕ ಜನಾಂಗಕ್ಕೆ ಗುರುಗಳಾದ ಇವರನ್ನು 'ನಾಯಕಾಚಾರ್ಯರು' ಎಂದು ಕರೆಯುವರು. ಇವರ ಬಿರುದಿನ ದ್ಯೋತಕವಾಗಿ ಮಹಾನಾಯಕನ ದೊಡ್ಡಿ ಎನ್ನುವುದು ಗುಂತಗೋಳದ ಒಂದು ಭಾಗವಾಗಿತ್ತು. ಈಗಲೂ ಮನೆತನವನ್ನು ಗುರು ಮತ್ತು ದೊರೆ ಮನೆತನ ಎಂದು ಕರೆಯುತ್ತಾರೆ"[೨೭].

ಈ ಸಂಸ್ಥಾನಿಕರ ರಾಜಲಾಂಛನ ಆನೆಯಾಗಿದ್ದು, ಹಸಿರು ಬಣ್ಣದ ಧ್ವಜಕ್ಕೆ ಬೆಳ್ಳಿಯ ಮೊಹರಿದೆ. ಶೈವಪಂಥದವರಾದ ಇವರು ಭಾರದ್ವಜ ಗೋತ್ರದವರು, ಇವರ ಆಡಳಿತಕ್ಕೆ ಸುಮಾರು ೧೩೦ ಹಳ್ಳಿಗಳು ಸೇರಿದ್ದು ಇವರ ಗಡಿಯನ್ನು ಸೂಚಿಸಲು ಜನಪದ ನುಡಿಯೊಂದು ಇಂತಿವೆ.

"ಮಾಮಲೆ ಯುದಗಲ್, ರೆಲ್ಲೆ ಜಲದುರ್ಗ
ಸಮತ್ ಗೋನಸವಾಟ್ಲ ಸಂಸ್ಥಾನ ಗುಂತಗೋಳ
ನಮ್ಮ ರಾಜರದು"[೨೮]

ಆಡಳಿತ ವ್ಯವಸ್ಥೆಯಲ್ಲಿ ಪಾಟೀಲ, ಕುಲಕರ್ಣಿ, ನಾಡಗೌಡ, ಮಾಲೀಗೌಡ ದೇಸಾಯಿ, ಪೋಲೀಸ್ ಪಾಟೀಲ್, ಎಂಬ ಅಧಿಕಾರಿಗಳಿದ್ದರು. ಇವರಲ್ಲಿ ಕಾಳಾಪುರದ ಧಣಿಗಳು, ನೀರಲಕೇರಿಯ ನಾಡಗೌಡರು, ಬೆಲ್ಲದ ಮರಡಿಯ ದೇಸಾಯಿಗಳು ಪ್ರಮುಖರಾದವರು. ಇವರು ತಮ್ಮ ಭಾಗದ ಕಂದಾಯವನ್ನು ವಸೂಲಿ ಮಾಡಿ ಗುಂತಗೋಳದ ಅರಸರಿಗೆ ಸಲ್ಲಿಸುತ್ತಿದ್ದರು. ಗುಂತಗೋಳದ ಅರಸರು ಹೈದರಾಬಾದ್ ನಿಜಾಮನಿಗೆ ವಾರ್ಷಿಕ ಕಪ್ಪುಕಾಣಿಕೆಯನ್ನು ಸಲ್ಲಿಸುತ್ತಿದ್ದರು.

ಈ ಸಂಸ್ಥಾನದ ಕಾವಲುಗಾರನ ಹೆಂಡತಿ ಮಾಳಗುಂಡಮ್ಮಳೆಂಬ ಮಹಿಳೆ ಸಂಸ್ಥಾನದ ರಕ್ಷಣೆಗಾಗಿ ಹೋರಾಡಿ ಮಡಿದ ಕತೆ ಜನಜನಿತವಾಗಿದೆ. ಈಕೆಯನ್ನು ಚಿತ್ರದುರ್ಗದ ಒನಕೆ

ಓಬವ್ವನಿಗೆ ಹೋಲಿಸುತ್ತಾರೆ. "ಒಂದು ಸಲ ೨೦ಜನ ವೈರಿ ಸೈನಿಕರು (ಆದಿಲ್‌ಶಾಹಿಗಳೋ ಸುರಪುರದ ನಾಯಕರೋ) ಗುಂತುಗೋಳಕ್ಕೆ ರಾತ್ರೋರಾತ್ರಿ ಮುತ್ತಿಗೆ ಹಾಕಲು ಪ್ರಯತ್ನಿಸಿ ಕಾವಲುಗಾರನನ್ನು ಕೊಲೆಗೈದರು. ಮಡದಿ ಮಾಳಗುಂಡಮ್ಮ ಸುದ್ದಿ ತಿಳಿದು ವೀರಾವೇಶದಿಂದ ಕೈಯಲ್ಲಿ ಖಡ್ಗ ಹಿಡಿದು ಅವರನ್ನು ಕೊಚ್ಚಿ ಹಾಕುವುದರೊಂದಿಗೆ ವೀರಮರಣವನ್ನಪ್ಪುತ್ತಾನೆ"[೨೯]. ಹೀಗಾಗಿ ಊರನ್ನು ರಕ್ಷಿಸಿದ ಈಕೆಯ ಹೆಸರಿನಲ್ಲಿ ಜನ ದೇವಾಲಯವನ್ನು ಕಟ್ಟಿಸಿ ಪೂಜಿಸುತ್ತಿದ್ದಾರೆ. ಈ ಮನೆತನದವರಿಗೆ ಅರಸರು ಇನಾಮುಗಳನ್ನು ನೀಡಿದ್ದರು. ಈಗ ಈ ಸಂತತಿಯವರು ಇಲ್ಲಿ ನೆಲೆಸಿರುವುದಿಲ್ಲ.

ಈ ಸಂಸ್ಥಾನದ ಅರಸ ರಾಜಾರಾಯಪ್ಪನಾಯಕನು ಆಧ್ಯಾತ್ಮಿಕ ಒಲವಿನ ಪುರುಷರಾಗಿದ್ದರು. ದರಬಾರಿನಲ್ಲಿ ಪ್ರತಿವರ್ಷ ನಡೆಯುವ ನವರಾತ್ರಿಯ ಸಮಯದಲ್ಲಿ ದೇವಿ ಪುರಾಣವನ್ನು ಸ್ವತಃ ತಾವೇ ಪಾರಾಯಣ ಮಾಡುತ್ತಿದ್ದರು. ಕಲಾ ಪ್ರೇಮಿಗಳು ಹಾಗೂ ಕಲಾಕಾರರಾಗಿದ್ದರು. ನಾಟಕ ಕಂಪನಿಯೊಂದನ್ನು ಹುಟ್ಟುಹಾಕಿ ಕಲಾಕಾರರಿಗೆ ತರಬೇತಿಯನ್ನು ನೀಡುವ ವ್ಯವಸ್ಥೆ ಮಾಡಿದ್ದರು. ಈ ಸಂಸ್ಥಾನಿಕರು ಸುರಪುರ, ದೇವದುರ್ಗ, ಗುಡಗುಂಟಿ, ಕನಕಗಿರಿ, ಗುಡೇಕೋಟೆ, ರತ್ನಗಿರಿ ಮನೆತನಗಳೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದ್ದಾರೆ.

ಇಂದು ಈ ಮನೆತನದ ವಂಶಸ್ಥರು ಗುಡಗುಂಟಿಯಲ್ಲಿ ವಾಸವಾಗಿದ್ದಾರೆ. ಗುಂತಗೋಳದಲ್ಲಿ ಸುಸಜ್ಜಿತ ಅರಮನೆ ಇದೆ. ಅಲ್ಲಿಗೆ ವಾರಕ್ಕೊಂದು ದಿನ ಹೋಗಿ ಬರುತ್ತಾರೆ. ಹಬ್ಬ ಹರಿದಿನಗಳಲ್ಲಿ ಭಾಗವಹಿಸುತ್ತಾರೆ. ಈ ಮನೆತನದವರು ಪ್ರಸ್ತುತ ರಾಜಕೀಯದೊಂದಿಗೆ ಉತ್ತಮ ಸಂಬಂಧ ಹೊಂದಿದ್ದಾರೆ."ರಾಜಾ ಅಮರಪ್ಪನಾಯಕ ೧೯೮೯ರಲ್ಲಿ ಲಿಂಗಸುಗೂರು ವಿಧಾನಸಭಾ ಕ್ಷೇತ್ರದಿಂದ ಸ್ಪರ್ಧಿಸಿ, ಆಯ್ಕೆಯಾಗಿ, ರಾಜ್ಯ ತೋಟಗಾರಿಕೆ ಸಚಿವರಾಗಿಯೂ ನಂತರ ಬಂಧಿಖಾನೆ, ಗೃಹರಕ್ಷಕರದಳ ಮತ್ತುಮಾಪನ ಸಚಿವರಾಗಿ ಸೇವೆ ಸಲ್ಲಿಸಿದ್ದಾರೆ"[೩೦]. ಕಳೆದ ೨೦೦೪ರ ಚುನಾವಣೆಯಲ್ಲಿ ಕಲ್ಮಲಾ ವಿಧಾನಸಭೆಗೆ ಸ್ಪರ್ಧಿಸಿ ಕೆಲವೇ ಮತಗಳಿಂದ ಪರಾಭವಗೊಂಡರು. ಇವರ ಹಿರಿಯ ಸಹೋದರರಾದ ರಾಜಾ ರಾಯಪ್ಪನಾಯಕರು ರಾಯಚೂರು ಜಿಲ್ಲಾ ಪಂಚಾಯಿತಿಯ ಸದಸ್ಯರಾಗಿದ್ದರು. ಇಂದು ರಾಜಕೀಯದಲ್ಲಿ ಗುರುತಿಸಿಕೊಂಡಿದ್ದಾರೆ. ಇವರ ಕಿರಿಯ ಸಹೋದರರಾದ ರಾಜಾ ರಾಯಪ್ಪನಾಯಕರು ರಾಯಚೂರು ಜಿಲ್ಲಾ ಪಂಚಾಯಿತಿಯ ಸದಸ್ಯರಾಗಿದ್ದರು. ಇಂದು ರಾಜಕೀಯದಲ್ಲಿ ಗುರುತಿಸಿಕೊಂಡಿದ್ದಾರೆ. ಇವರ ಕಿರಿಯ ಸಹೋದರ ರಾಜಾ ಶ್ರೀನಿವಾಸನಾಯಕ ಅವರು ದೇವರಭೂಪುರದ ಮಂಡಲ ಪ್ರಧಾನರಾಗಿ, ಗುಂತಗೋಳ ಶ್ರೀನಿವಾಸನಾಯಕ ಅವರು ದೇವರಭೂಪೂರದ ಮಂಡಲ ಪ್ರಧಾನರಾಗಿ, ಗುಂತಗೋಳ ಗ್ರಾಮಪಂಚಾಯಿತಿಯ ಅಧ್ಯಕ್ಷರಾಗಿಯೂ ಜಿಲ್ಲಾ ಯುವ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಗಳಾಗಿ ಹಾಗೂ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಈಗಲೂ ರಾಜಕೀಯದಲ್ಲಿ ಮುಂಚೂಣಿಯಲ್ಲಿದ್ದಾರೆ. ಹೀಗೆ ಈ ಮನೆತನದ ವಂಶಸ್ಥರು, ರಾಜಕೀಯವಾಗಿ ಆರ್ಥಿಕವಾಗಿ ಸಾಮಾಜಿಕವಾಗಿ ಈ ಭಾಗದಲ್ಲಿ

ಗುರುತಿಸಿಕೊಂಡಿದ್ದಾರೆ. ಅನೇಕ ಜನೋಪಯೋಗಿ ಕೆಲಸಗಳಲ್ಲಿ ಇಂದಿಗೂ ಕೂಡ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

- **ಗುಡಗುಂಟಿ ಸಂಸ್ಥಾನದ ನಾಯಕರು**

ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನಿಂದ ೧೯ಕಿ.ಮೀ ದೂರದಲ್ಲಿರುವ ಗುಡಗುಂಟಿಯು ನಾಯಕ ಅರಸುಮನೆತನವಾಗಿತ್ತು. ಸುರಪುರ ಹಾಗೂ ಗುಡಗುಂಟಿ ಅರಸರು ಒಂದೇ ಮೂಲಕ್ಕೆ ಸೇರಿದವರು ಇವರು ಗೋಸಲ ವಂಶದವರು, ಪ್ರಾಚೀನ ಕೈಫಿಯತ್ತುಗಳ ಪ್ರಕಾರ ಇವರ ಪೂರ್ವಜರು ದಕ್ಷಿಣದಿಂದ ಬಂದವರೆಂದು ಇವರ ಮೂಲಪುರುಷ ನರಸಿಂಹನಾಯಕರೆಂದು ಹೇಳುತ್ತದೆ.

'ಸ್ವತಂತ್ರ್ಯದ ಪೂರ್ವದಲ್ಲಿ ಗುಡಗುಂಟಿ ನಾಯಕ ಅರಸರು ೧೪ಜನ ಅರಸರು ಆಡಳಿತ ಮಾಡಿರುವರು'

"ಅರಸ ಚಿಕ್ಕಪ್ಪದೇಸಾಯಿ ಇಬ್ಬರು ಮಕ್ಕಳು ಗಡ್ಡಿಲಿಂಗನಾಯಕ ಮತ್ತು ಗಡ್ಡಿಪಿಡ್ಡನಾಯಕ ಈ ಇಬ್ಬರು ಅರಸರು ಕಕ್ಕೇರಿಯ ಹತ್ತಿರ ಕೃಷ್ಣಾನದಿಯನ್ನು ಹರಿಗಡದು ಮಾಡಿದ ಸಣ್ಣ ನಡುಗಡ್ಡೆಗಳಲ್ಲಿರುತ್ತಿದ್ದರು. ಇಲ್ಲಿ ಆರು ನಡುಗಡ್ಡೆಗಳಿದ್ದವು. ಅವುಗಳ ಭೂವಿಸ್ತಾರ ಎರಡು ಮೂರು ಮೈಲುಗಷ್ಟಿದ್ದಿತು. ಈ ಗಡ್ಡಿಗೆಯಲ್ಲಿ ಇವರು ವಾಸಮಾಡುತ್ತಿರುವುದರಿಂದ ಇವರಿಗೆ ಗಡ್ಡಿ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ"[೩೧].

ಗುಡಗುಂಟಿಯ ಸಂಸ್ಥಾನವನ್ನು ಬುನಾದಿ ಹಾಕಿದ್ದ ಅರಸ ಗಡ್ಡಿಲಿಂಗನಾಯಕ, ಗುಡಗುಂಟಿ ಸಂಸ್ಥಾನದ ಸ್ಥಾಪಕ, ಒಂದೆ ನೆಲೆಯಲ್ಲಿ ಇರುವ ಹಾಗೆಯೇ ಮಾಡಿದ ಅರಸ. ಈತನ ತಂದೆಯ ಕಾಲಕ್ಕೆ ಬಿಜಾಪುರ ಆದಿಲ್‌ಶಾಹಿಗಳ ಅಧೀನಕ್ಕೆ ಒಳಪಟ್ಟಿದ್ದರಿಂದ ಲಿಂಗನಾಯಕ ಗುಡಗುಂಟಿಯ ಪರಗಣಿಯ ಸರದೇಸಾಯಿಯಾಗಿ ೪೪ ಹಳ್ಳಿಗಳ ಬಡ್ತಿ ಹೊಂದಿ ಇಲ್ಲಿ ಆಳ್ವಿಕೆ ಪ್ರಾರಂಭಿಸಿದ. ರಾಜ್ಯ ವಿಸ್ತರಿಸಬೇಕು ಎಂದು ಬಿಜಾಪುರದ ಆದಿಲ್‌ಶಾಹಿಗಳ ಹತ್ತಿರ ಹೋದಾಗ ಈತನನ್ನು ಮೋಸದಿಂದ ಷೇಖ್‌ಮಿನ್ ಹಾಜಸರದಾರನಿಂದ ಕೊಲ್ಲಲ್ಪಟ್ಟನು. "(೧೪೪೪ಕಲ್ಯಾಣ) ಈತನಿಗೆ ಏಳು ಜನ ಮಕ್ಕಳಿದ್ದರು. ಆಗ ಸುರಪುರದ ಗಡ್ಡಿ ಪಿಡ್ಡನಾಯಕನಿಗೆ ಮಕ್ಕಳಾಗದ ಕಾರಣ ಗುಡಗುಂಟಿಯ ತನ್ನ ಅಣ್ಣ ಲಿಂಗೇಯನಾಯಕನ ಮಗನಾದ ಪಾಮನಾಯಕನನ್ನು ದತ್ತು ತೆಗೆದುಕೊಂಡನು. ಈತನೇ ಸುರಪುರದ ಹಸರಂಗಿ ಪಾಪನಾಯಕ"[೩೨].

"ಗಡ್ಡಿ ಲಿಂಗನಾಯಕ ಮರಣವನ್ನಪ್ಪಿದ ತರುವಾಯಿ ಆತನ ಮಗ ಜಡಿಸೋಮಪ್ಪನಾಯಕ ತನ್ನ ತಂದೆಯ ಮೋಸದಿಂದ ಕೂಡ ಅರಸರ ವಿರುದ್ಧ ತಿರುಗಿಬೀಳದೆ ತನ್ನ ತಂದೆಯ ಆಶಯಕ್ಕೆಮಹತ್ವಕೊಟ್ಟಿರಬೇಕು, ಅದಕ್ಕೆ ಜಡಿಸೋಮಪ್ಪನಾಯಕ ಬಿಜಾಪುರದ

ಸುಲ್ತಾನರಲ್ಲಿ ತನ್ನ ಶೌರ್ಯ, ಸಾಹಸಗಳನ್ನು ತೋರಿಸಿದ್ದಕ್ಕಾಗಿ 'ಸರ್ಜಾ ಬಹದ್ದೂರ' ಎಂಬ ಬಿರುದನ್ನು ಪಡೆದಿದ್ದಾನೆ"[೩೩].

ಜೊತೆಗೆ ಕ್ರಿ.ಶ.೧೬೬೯ರಲ್ಲಿ ಇಮ್ಮಡಿ ಆಲಿ ಆದಿಲ್‌ಶಾಹಿನಿಂದ (ಹೊರಸನ್ ಬನಯೀನವ ಅಲಫ ೧೦೭೦) ಒಂದು ಫಾರಸಿ ಸನದು ದೊರಕಿದೆ. ಕೆಲವು ಹಳ್ಳಿಗಳನ್ನು ಇನಾಮು ಕೊಡಲಾಗಿದ್ದು ಜಡಸೋಮನಾಯಕನಿಗೆ ಮಾದರಾಯನ ಕೋಟೆ ದೇಸಾಯಿ ನೀಡಿದರು. ಇವುಗಳನ್ನು ಗಾಳಿಸಿ ತನ್ನ ಸಂಸ್ಥಾನವನ್ನು ವಿಸ್ತರಿಸಿದರು. ಈತನಿಂದ ಸಂಸ್ಥಾನವನ್ನು ಅಭಿವೃದ್ಧಿಪಡಿಸಿದ ಕೀರ್ತಿ ಜಡಸೋಮನಾಯಕನಿಗೆ ಸಲ್ಲುತ್ತದೆ.

ಈತನ ತರುವಾಯ ಇಮ್ಮಡಿ ಲಿಂಗನಾಯಕನು ಅಧಿಕಾರಕ್ಕೆ ಬಂದನು. ಈತನ ಆಳ್ವಿಕೆಯ ಕುರಿತಾಗಿ ಯಾವುದೇ ದಾಖಲೆಗಳು ಲಭ್ಯವಿಲ್ಲ ಸೋಮಪ್ಪನಾಯಕನು ಅಧಿಕಾರಕ್ಕೆ ಬರುತ್ತಾನೆ. ಸುರಪುರದ ಹಸರಂಗಿ ಪಾಮನಾಯಕನಿಗೆ ಮಕ್ಕಳಿಲ್ಲದಕ್ಕಾಗಿ ಗುಡಗುಂಟಿಯ ಪಿಡ್ಡನಾಯಕನೆಂಬುವನನ್ನು ದತ್ತು ಮಗನಾಗಿ ತೆಗೆದುಕೊಂಡನು.

ಗುಡಗುಂಟಿ ಸೋಮಪ್ಪನಾಯಕ ಉದಾರ ಗುಣವುಳ್ಳ ಹಾಗೂ ತಮ್ಮ ಸುತ್ತಮುತ್ತಲಲ್ಲಿ ಸಂಸ್ಥಾನಗಳಿಗೆ ಸ್ನೇಹಭಾವದಿಂದ ಇದ್ದನು ಎನ್ನುವುದಕ್ಕೆ ಈ ಘಟನೆಯಿಂದ ತಿಳಿಯಬಹುದು. ವಾಗಿನಗೇರಿ ಔರಂಗಜೇಬನ ವಶವಾದಾಗ ಪೀತಾಂಬರ ಪಿಡ್ಡನಾಯಕನು ತಪ್ಪಿಸಿಕೊಂಡ ಕೃಷ್ಣಾನದಿಯನ್ನು ದಾಟಿ ಗುಡಗುಂಟಿ ತಲುಪಿದನು. ಸೋಮಪ್ಪನಾಯಕನು ಈತನನ್ನು ರಕ್ಷಿಸಲು ದೇವದುರ್ಗ ವಾಸುದೇವನಾಯಕನೊಂದಿಗೆ ಹೋರಾಡಿ ಸೋಲಿಸಿದನು, ಸೋಮಪ್ಪನಾಯಕನನ್ನು ಪಿಡ್ಡನಾಯಕನನ್ನು ಕರೆದುಕೊಂಡು ಅರಸ ಉಡಚನಾಯಕನ ಬೆಂಬಲದಿಂದ ಗಂಗಾವತಿಯ ಎಮ್ಮಿಗುಡ್ಡವನ್ನು ಸೇರಿದನು. ಒಂದು ವರ್ಷ ಅಲ್ಲಿದ್ದು ಪುನಃ ಪರಿವಾರದೊಡನೆ ಗುಡಗಂಟಿಗೆ ಬಂದನು. ಅಷ್ಟೊತ್ತಿಗೆ ಬಿಜಾಪುರವನ್ನು ಮೊಘಲ್ ಸುಬೇದಾರನಾಗಿದ್ದನು. "ಗುಡಗಂಟಿಯಲ್ಲಿ ಹಿಮ್ಮತಯಾರಖಾನ್ ಎಂಬುವನನ್ನು ನೇಮಿಸಿದ್ದನು. ಪಿಡ್ಡನಾಯಕನು ತನಗೆ ಸಹಾಯ ನೀಡಿದ ಗುಡಗುಂಟಿಯವರಿಗೆ ಸಹಾಯ ಮಾಡಿದನು. ಹಿಮ್ಮತಯಾರಿಖಾನ್‌ನ್ನು ಹೊಡೆದೋಡಿಸಿ ಗುಡಗುಂಟಿಯನ್ನು ಅವನಿಂದ ಕಸಿದುಕೊಂಡು ತನ್ನ ಬಂಧುವಾದ ಸೋಮಸರ್ಜನಾಯಕನಿಗೆ ಕೊಡಿಸಿ ಪೀತಾಂಬರಿ ಬಹಿರಿ ಪಿಡ್ಡನಾಯಕನು ವೀರಗೋಟಕ್ಕೆ ಬಂದುನಿಂತನು"[೩೪]. ಸುರಪುರದಲ್ಲಿ ಮೂರು ಕೇರಿಗಳ ಬೇಡರು ಮೊಂಡಗೈ ವೆಂಕಟಪ್ಪನಾಯಕನ ವಿರುದ್ದ ಬಂಡೆದ್ದರು. ಆತ ಗಡಿ ವಿಸ್ತರಿಸಲು ಹೋದಾಗ ಗುಡಗುಂಟಿಯ ಸೋಮ ಸರ್ಜನನಾಯಕನನ್ನು ಸುರಪುರಕ್ಕೆ ಕರೆದುಕೊಂಡು ಹೋಗಿ ಸುರಪುರದ ಅರಸನೆಂದು ಘೋಷಿಸಿದರು, ಒಂಭತ್ತು ತಿಂಗಳಾದ ತರುವಾಯಿ ರಾಜ್ಯ ವಿಸ್ತರಣೆಯಿಂದ ಮರಳಿಬಂದ ವೆಂಕಟಪ್ಪನಾಯಕನಿಗೆ ಮತ್ತು ಸ್ಥಳೀಯ ಬಂಡುಕೋರರಿಗೆ ಹೋರಾಟವಾಯಿತು. ಇದರಿಂದ ಸೋಮಸರ್ಜನಾಯಕ ಗುಡಗುಂಟಿಗೆ ಪಲಾಯನಗೈದನು. ಅಂದಿನಿಂದ ಸುರಪುರ ಮತ್ತು ದೇವದುರ್ಗದವರು ಗುಡಗುಂಟಿ ಅರಸನನ್ನು ದ್ವೇಷಿಸಲು ಪ್ರಾರಂಭಿಸಿದರು.

ಸುರಪುರದ ಮುಮ್ಮಡಿ ಪಾಮನಾಯಕನ ವಿರುದ್ಧ ಸುರಪುರದ ರಾಜಧಾನಿಯ ಬೇಡರು ರಾಜನ ವಿರುದ್ಧವೇ ಬಂಡೆದ್ದರು. ಇದರಲ್ಲಿ ಅನೇಕ ಸರದಾರರು, ಹವಾಲ್ದಾರರು ಶಾಮೀಲಾಗಿದ್ದರು. ರಾಜನ ವಿರುದ್ಧ ನಿಂತಿರುವರನ್ನು ಕಲ್ಪಲ ಬೆಂಚಿನಲ್ಲಿ ಎಂಬ ಸ್ಥಳದಲ್ಲಿ ಕೊಲ್ಲಿಸಲಾಯಿತು. ಇದರ ಕೆಲವು ಜನರಗುಡಗುಂಟಿಯಲ್ಲಿ ಆಶ್ರಯ ಪಡೆದರು. "ಸುರಪುರದ ಮಂತ್ರಿ ಗುಡಗುಂಟಿ ಅರಸನಿಗೆ ಪತ್ರ ಹೀಗೆ ಬರೆದರು. "ಕೂಡಲೇ ಅವರನ್ನು ತಮ್ಮ ಸ್ವಾಧೀನಕ್ಕೆ ಒಪ್ಪಿಸಿ ಬೇಕೆಂದು ಗುಡಗುಂಟಿಯ ಅರಸನಿಗೆ ಎಂದು ಬರೆದರು.ಇದಕ್ಕೆ ಅರಸ ಮಾನ್ಯತೆ ನೀಡಲಿಲ್ಲ. ಆಗ ಪಾಮನಾಯಕನೇ ಸ್ವತಃ ತಾನೇ ಹುಣಸಗಿ, ಕಕ್ಕೇರಿ ಮಾರ್ಗವಾಗಿ ಗುಡಗುಂಟಿಗೆ ಧಾವಿಸಿ ದಾಳಿ ಮಾಡಿದ. ಆಗ ಹೆದರಿದ ಗುಡಗುಂಟಿ ಅರಸ ಆರೋಪಿಗಳನ್ನೆಲ್ಲಾ ಇವರ ವಶಕ್ಕೆ ಬಿಟ್ಟುಕೊಟ್ಟನು"[೩೫].

ಇವರನ್ನು ಬಿಟ್ಟುಕೊಡುವ ಸಮಯದಲ್ಲಿ ಕೃತ್ಯಗಳನ್ನು ಎಸಗುವುದಿಲ್ಲವೆಂದು ಮಾತುಕೊಟ್ಟ. ಅಂದಿನಿಂದ ಸುರಪುರದೊಂದಿಗೆ ಮಾತುಕೊಟ್ಟನು ಉತ್ತಮ ಸಂಬಂಧ ಬೆಳೆಯಿತು.

ಗುಡಗುಂಟಿಯ ಮೇಲೆ ಗಜೇಂದ್ರಗಡದವರು ಆಕ್ರಮಣ ಮಾಡಿದ್ದರಿಂದ ಅಪಾರ ಹಾನಿಯಾಯಿತು. ಆಗ ಗುಡಗುಂಟಿಯ ಅರಸ ಸುರಪುರದ ಇಮ್ಮಡಿ ವೆಂಕಟಪ್ಪನಾಯಕ ಆರ್ಥಿಕ ಸಹಾಯವನ್ನು ಬೇಡಿದನು. "ವೆಂಕಟಪ್ಪನಾಯಕ ನೂರಕ್ಕೆ ಒಂದು ರೂಪಾಯಿಯ ಬಡ್ಡಿಯಂತೆ ೩೦ಸಾವಿರ ರೂಪಾಯಿಗಳನ್ನು ನೀಡಿದರು. ಹಣದ ಸಲುವಾಗಿ ತಮ್ಮ ಭಾಗದ ಹುಣಸಗಿ ಮತ್ತು ೩೭ ಗ್ರಾಮಗಳನ್ನು ಒತ್ತಿ ಹಾಕಿದನು. ಈ ಹಳ್ಳಿಗಳನ್ನು ಬಿಟ್ಟುಕೊಡಲು ಗುಡಗುಂಟಿ ಅರಸರು ವೆಂಕಟಪ್ಪನಾಯಕನನ್ನು ಕೇಳಿಕೊಂಡಾಗ, ವೆಂಕಟಪ್ಪನಾಯಕನು ತಾನು ನೀಡಿದ ಹಣವನ್ನು ಬಡ್ಡಿ ಸಮೇತ ಮರಳಿಸಿದರೆ ನಿಮ್ಮ ಗ್ರಾಮಗಳನ್ನು ಬಿಡುವೆನೆಂದು ಉತ್ತರ ಕೊಟ್ಟನು"[೩೬]. ಗುಡಗುಂಟಿಯ ಅರಸ ವೆಂಕಟಪ್ಪನಾಯಕನ ಉತ್ತರಕ್ಕೆ ಸಿಟ್ಟಿಗೆದ್ದು, ಅರಕೇರಿಯ ೫ ಗ್ರಾಮಗಳು ಲೂಟಿ ಮಾಡಿದನು. ಇದನ್ನು ಕೇಳಿದ ವೆಂಕಟಪ್ಪನಾಯಕನು ದಖನಿ, ಸದರ ಬಾರಗಾರ ಕೊಟಗಾರರು, ನಾಲ್ಕು ತೋಪುಗಳನ್ನು ೪೦೦ ಸವಾರರು, ೬೦೦೦ ಕಾಲಾಳುಗಳೊಂದಿಗೆ ಕೃಷ್ಣಾನದಿಯನ್ನು ದಾಟಿ ಗುಡಗುಂಟಿಯ ಸಮೀಪಕ್ಕೆ ಬಂದರು. ಇವನ್ನು ಅರಿತ ಗುಡಗುಂಟಿಯ ಅರಸು ಗೆಜ್ಜಲಗಟ್ಟೆ, ನೀರಲಕೇರಿ, ರೋಚಲಬಂಡಿಯ ನಾಡಗೌಡರ ಸಹಾಯವನ್ನು ಪಡೆದು ಸುರಪುರದವರನ್ನು ಎದುರಿಸಿದನು. ಈ ಕಾಳಗದಲ್ಲಿ ಸುರಪುರದವರು ಗೆದ್ದರು. "ಗುಡಗುಂಟಿಗೆ ಆಕ್ರಮಿಸಿ ಕಕ್ಕೇರಿ ಕಡೆಯ ಗುಡಗುಂಟೆ ಅರಸಿ ಬಾಗಿಲನ್ನು ಸುಟ್ಟರು, ಗುಡಗುಂಟಿಯನ್ನು ಲೂಟಿ ಮಾಡಹತ್ತಿದ್ದರು. ಆಗ ಗುಡಗುಂಟೆಯ ಅರಸನನ್ನು ಕರೆಯಿಸಿ, ಅವರ ಸಂಸ್ಥಾನವನ್ನು ಒಪ್ಪಿಸಿದರು. ಮತ್ತೊಂದು ಸಲ ಗುಡಗುಂಟಿಯವರು ಸುರಪುರದ ಅರಸ ಮದುವೆಗೆ ಹೋಗಿದ್ದರು. ತಮಗೆ ಮದುವೆಯಲ್ಲಿ ಮೊದಲನೆ ಮರ್ಯಾದೆ ಸಿಗಲಿಲ್ಲವೆಂಬ ಕಾರಣಕ್ಕೆ ಜಗಳಕ್ಕೆ

ನಿಂತರು? ಹಿಂದಿನ ವೈರ್ಯತ್ವದ ಸೇಡಿನ ಜಗಳ ಸುರಪುರದ ಅರಸ ಸಿಟ್ಟಿಗೆದ್ದು ಗುಡಗುಂಟಿಯನ್ನು ಆಕ್ರಮಿಸಿದರು"[೩೭].

ವೆಂಕಟಪ್ಪನಾಯಕನ ತರುವಾಯ ರಾಜಾಸೋಮಲಿಂಗನಾಯಕ ಅಧಿಕಾರಕ್ಕೆ ಬಂದನು. ಆದರೆ ಮಕ್ಕಳಿರಲಿಲ್ಲ. ಅಷ್ಟೊತ್ತಿಗೆ ನಿಜಾಮ ಸರ್ಕಾರ ಗುಡಗುಂಟಿಯನ್ನು ಆಕ್ರಮಿಸಿಕೊಂಡಿತು. ಆಗ ಅವರ ಆಜ್ಞೆಯ ಪ್ರಕಾರ ರಾಜಾ ಸೋಮಲಿಂಗನಾಯಕನ ಪತ್ನಿ ರಾಣಿ ಕಾಟಮ್ಮ ಅಧಿಕಾರವನ್ನು ನೋಡಿಕೊಂಡು ಹೋದಳು ನಿಜಾಮ ಸರ್ಕಾರಕ್ಕೆ ದತ್ತು ತೆಗೆದುಕೊಳ್ಳುವ ಕುರಿತು ಅಂಕಿ ಮಾಡಿಕೊಂಡಳು ಅವನ ಆಜ್ಞೆಯ ಮೇರೆಗೆ ರಾಣಿ ಕಾಟಮ್ಮ ತನ್ನ ಮೈದುನನ ಮಗನಾದ ರಾಜಾ ಜಡಿಸೋಮಪ್ಪನಾಯಕನನ್ನು ದತ್ತು ತೆಗೆದುಕೊಂಡಳು. ಈತ ಚಿಕ್ಕವನಿದ್ದ ಕಾರಣಕ್ಕೆ ಸಂಸ್ಥಾನದ ಎಲ್ಲ ಕೆಲಸವನ್ನು ರಾಣಿ ನೋಡಿಕೊಂಡು ಹೋಗುತ್ತಿದ್ದಳು. ನಂತರ ಅರಸ ವಯಸ್ಸಿಗೆ ಬಂದ ಮೇಲೆ ಆಡಳಿತವನ್ನು ನೋಡಿಕೊಂಡು ಹೋದನು. ಈತ ತೀರಿಕೊಂಡ ತರುವಾಯ ಈ ಸಂಸ್ಥಾನವನ್ನು ನಿಜಾಂ ಸರ್ಕಾರವನ್ನು ವಶಕ್ಕೆ ತೆಗೆದುಕೊಂಡಿತು.

"ರಾಣಿ ಗೌರಮ್ಮ ನಿಜಾಂ ಸರ್ಕಾರದ ಒಪ್ಪಿಗೆ ಮೇರೆಗೆ ತನ್ನ ಮೊಮ್ಮಗನಾದ ರಾಜಾ ತಿಪ್ಪರಾಜ ಜಡಸೋಮ ನಾಯಕ (ಕ್ರಿ.ಶ.೧೯೦೧ರಿಂದ೧೯೫೭) ನನ್ನು ದತ್ತು ತೆಗೆದುಕೊಂಡು ಈತನೇ ಈ ಸಂಸ್ಥಾನದ ಕೊನೆಯ ದೊರೆ"[೩೮] . ಇವರಿಗೆ ಶ್ರೀ ತಿಪ್ಪರಾಜ ಸರ್ಜಾಬಹದ್ದೂರ್ ಎಂದು ಕರೆಯುತ್ತಿದ್ದರು. ಈತ ತನ್ನ ಅಧಿಕಾರಾವಧಿಯಲ್ಲಿ ೪೪ ಹಳ್ಳಿ ಇದ್ದವು. ಇದರಿಂದ ಸಂಸ್ಥಾನಕ್ಕೆ ಬರುವ ಅಂದಾಜು ೫೦೦೦೦ರೂ ಕಂದಾಯದಲ್ಲಿ ನಿಜಾಂ ಸರ್ಕಾರಕ್ಕೆ ವರ್ಷಕ್ಕೆ ೨೦೦೦ರೂಗಳನ್ನು ಕೊಡಬೇಕಾಗಿತು.

ಈ ದೊರೆಗಳಿಗೆ ತಮ್ಮ ಅಧಿಕಾರಾವಧಿಯಲ್ಲಿ ವಿನೋಬಾಭಾವೆಯವರ ಭೂದಾನ ಚಳುವಳಿಗೆ ಸ್ಪಂದಿಸಿ ೨೦೦ ಎಕರೆ ಭೂಮಿಯನ್ನು ಭೂದಾನ ಮಾಡಿದ್ದಾರೆ. ಹೀಗೆ ತಮ್ಮ ಅಧಿಕಾರವನ್ನು ಇವರು ಮುಂದುವರೆಸಿದರು. ದೇಶ ಸ್ವಾತಂತ್ರ್ಯಗಳಿಸಿದ ನಂತರ ದೇಶದ ಎಲ್ಲಾ ಅರಸೊತ್ತಿಗೆಗಳು ಭಾರತದ ಒಕ್ಕೂಟದಲ್ಲಿ ಲೀನವಾದರೂ ಹೈದರಾಬಾದ್ ಸಂಸ್ಥಾನದ ಸಮಕಾಲೀನ ಸಂಸ್ಥಾನವಾದ ಗುಡಗುಂಟಿ ೧೯೪೮ ಸೆಪ್ಟೆಂಬರ್ ೧೮ರವರೆಗೆ ಅಧಿಕಾರವನ್ನು ಬಿಟ್ಟುಕೊಟ್ಟಿರಲಿಲ್ಲ. ಗುಡಗುಂಟಿ ವಂಶಸ್ಥರು ಇಂದು ಗುಡಗುಂಟಿಯ ಅರಮನೆಯಲ್ಲಿ ವಾಸಿಸುತ್ತಿದ್ದಾರೆ. ರಾಜಾ ಅಮರಪ್ಪ ನಾಯಕರು ೧೯೮೩ರಲ್ಲಿ ಮಾನ್ವಿ ಕ್ಷೇತ್ರದಿಂದ, ೧೯೮೫ರಲ್ಲಿ ಲಿಂಗಸುಗೂರು ಕ್ಷೇತ್ರದಿಂದ ವಿಧಾನಸಭಾ ಸದಸ್ಯರಾಗಿ ಆಯ್ಕೆಯಾದವರು ಅಂದು ರಾಜಕೀಯ ಕ್ಷೇತ್ರದಲ್ಲಿ ಗುರುತಿಸಿಕೊಂಡವರಾಗಿದ್ದರು. ನಂತರ ರಾಯಚೂರು ಲೋಕಸಭಾ ಕ್ಷೇತ್ರಕ್ಕೆ ಸ್ಪರ್ಧಿಸಿ ಕೆಲವೇ ಮತಗಳಿಂದ ಸೋತರು. ಹಟ್ಟಿ ಚಿನ್ನದಗಣಿಯ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಸದ್ಯ ಇವರ ಪುತ್ರ ರಾಜ ಸೋಮನಾಥನಾಯಕರು. "ಗುಡಗುಂಟಿಯ ವಂಶಸ್ಥರು ರಾಜಕೀಯ, ಸಾಮಾಜಿಕವಾಗಿ ಸಬಲರಾಗಿದ್ದಾರೆ. ಈ ಭಾಗದ ಪ್ರಜೆಗಳು, ಮಠಾಧೀಶರು, ಅಧಿಕಾರಿಗಳು, ರಾಜಕಾರಣಿಗಳು ಇವರನ್ನು ರಾಜಮರ್ಯಾದೆಯಿಂದ ಕಾಣುತ್ತಾರೆ"೩೯. ಈ ತಾಲ್ಲೂಕಿನಲ್ಲಿ ಎಲ್ಲರು

ಧಾನಿಗಳೆಂದು ಸಂಬೋಧಿಸುತ್ತಾರೆ ಪ್ರೀತಿಯಿಂದ ಕಾಣುತ್ತಾರೆ. ಈ ಭಾಗದ ನಾಯಕ ಜನಾಂಗಕ್ಕೆ ನಾಯಕ ಗುರುಗಳಾಗಿಯೇ ಗುರುತಿಸಿಕೊಂಡಿದ್ದಾರೆ.

- **ಆನೆಗೊಂದಿ ಸಂಸ್ಥಾನದ ನಾಯಕರು**

**ಆನೆಗೊಂದಿಯ ತ್ರೇತಾಯುಗದ ಐತಿಹ್ಯ** : "ಆನೆಗೊಂದಿಯನ್ನು ಕಿಷ್ಕಿಂದೆ ಎಂದು ಕರೆಯಲಾಗುತ್ತಿತ್ತೆಂದು ಹೇಳಲಾಗುತ್ತದೆ. ಅಂಜನೇಯ ಜನ್ಮಸ್ಥಳವಾದ ಅಂಜನಾದ್ರಿ ಬೆಟ್ಟ ಎಂದು ಹೇಳುವರು. ಹನುಮಂತನ ಗೆಳೆಯ, ಸೇತುವೆ, ವಾಲಿಭಂಡಾರ, ವಾಲಿದಿಬ್ಬ, ವಾಲಿಕಾಷ್ಟ, ಶಬರಿಗುಹೆ ಈ ಐತಿಹ್ಯವನ್ನು ಇಂದಿಗೂ ಕಿಷ್ಕಿಂದಾ ಕ್ಷೇತ್ರವೆಂದು ಸ್ಥಳೀಯರು ಬಲವಾಗಿ ನಂಬುತ್ತಾರೆ"[೪೦].

**ಆನೆಗೊಂದಿಯ ಇತಿಹಾಸ**

ಆನೆಗೊಂದಿಯಲ್ಲಿ ನಾಯಕ ಜನಾಂಗದವರು ವಿಜಯನಗರ ಸಾಮ್ರಾಜ್ಯಕ್ಕಿಂತ ಮೊದಲ ತುಂಗಭದ್ರಾ ನದಿ ದಂಡೆಯ ಮೇಲೆ ಕುಮ್ಮಟದುರ್ಗದ ಅರಸರ ಕಾಲದಲ್ಲಿ ನಾಯಕರು ಆನೆಗೊಂದಿಯಲ್ಲಿ ನೆಲೆಸಿದ್ದು ಅರಸರೇ ಇವರಿಗೆ ದೊರೆಗಳಾಗಿದ್ದರು.

ಮೂಲತಃ ಪಾಳೆಯಗಾರಿಕೆ ಮೊದಲಿನಿಂದ(ಪ್ರಥಮದಿಂದ) ಈ ಆನೆಗೊಂದಿಯನ್ನು ಪಾಳೆಯಗಾರ ವಂಶಸ್ಥರು ತಮ್ಮ ಮೂಲಸ್ಥಳವೆಂದು ಹೇಳಿಕೊಳ್ಳುವುದುಂಟು. "ಆನೆಗೊಂದಿಯ ನಾಯಕ ಅರಸರ ಇತಿಹಾಸವನ್ನು ಮೂರು ಭಾಗವಾಗಿ ಆಡಳಿತ ಕ್ರಮವನ್ನು ನೋಡಬಹುದು. ವಿಜಯನಗರ ಪೂರ್ವದ ಆನೆಗೊಂದಿ ನಾಯಕ ಅರಸರು ವಿಜಯನಗರ ಅವಧಿಯ ಆನೆಗೊಂದಿ ನಾಯಕ ಅರಸರು ಮತ್ತು ವಿಜಯನಗರೋತ್ತರ ಆನೆಗೊಂದಿ ನಾಯಕ ಅರಸರು ಎಂದು ಇತಿಹಾಸಕಾರರು ತಿಳಿಸುವರು"[೪೧].

**ಆನೆಗೊಂದಿ ಸಂಸ್ಥಾನದ ವಂಶಾವಳಿ**

"ಆನೆಗೊಂದಿಯನ್ನು ಆಳಿದವರು ತಿಮ್ಮ ಅರಸರು ನಂತರ ಇವರ ಮಗ ಅರಸ ಈಶ್ವರ ಇವರ ಮಗ ರಾಜನರಸಿಂಹ ಆಳಿದವರು. ರಾಜನರಸಿಂಹರಿಗೆ ನಾಲ್ಕುಜನ ಮಕ್ಕಳು ವೀರನರಸಿಂಹ ರಾಜಕೃಷ್ಣರಾಯಲು, ರಾಜ ತುಂಗ, ರಾಜ ಅಚ್ಯುತ ಈ ಮಕ್ಕಳಲ್ಲಿ ಕೃಷ್ಣರಾಯಲು ಆಡಳಿತ ನಡೆಸಿದರು ಇವರಿಗೆ ಇಬ್ಬರೂ ಹೆಣ್ಣು ಮಕ್ಕಳು ತಿರುಮಲ್ಲಮ್ಮ ಗಂಡ ರಾಮರಾಯಲು, ವೆಂಗಲಮ್ಮ ಗಂಡ ತಿರುಮಲ, ಇವರಲ್ಲಿ ರಾಜ ರಾಮರಾಯಲು ಆಡಳಿತ ನಡೆಸುವರು. ಈತನಿಗೆ ಐದು ಜನ ಮಕ್ಕಳು ರಾಜ ೧ನೇ ರಂಗ ರಾಜ ರಘುನಾಥ್, ರಾಜ ೨ನೇ ರಂಗ, ರಾಜ ೩ನೇ ರಾಮ, ರಾಜವೆಂಕಟ. ಇವರೆಲ್ಲಿ ರಾಜ ೧ನೇ ರಂಗ ಆಡಳಿತ ಸ್ವೀಕರಿಸಿದನು ಈತನಿಗೆ ಇಬ್ಬರು ಮಕ್ಕಳು. ಪೆದ್ದವೆಂಕಟಪತಿರಾಯಲು, ಚಿನ್ನವೆಂಕಟಪತಿರಾಯಲು ೩ನೇ, ಈತನು ಅಧಿಕಾರ ಸ್ವೀಕರಿಸಿದನು. ಈ ಅರಸನಿಗೆ ಮೂರು ಜನ ಮಕ್ಕಳು ರಾಜ ವೀರವೆಂಕಟ, ರಾಜ ೬ನೇರಂಗ,

ರಾಜ ತಿರುಮಲ, ಇವರಲ್ಲಿ ಹಿರಿಮಗ ವೀರವೆಂಕಟ ರಾಜನು ಆಡಳಿತ ನಡೆಸಿದನು. ಇವನ ನಂತರ ಏಕಮಾತ್ರ ಪುತ್ರ ರಾಮ ಅಥವಾ ರಂಗರಾಯಲು ಆಡಳಿತ ನಡೆಸಿದನು. ಇವನ ನಂತರ ರಂಗ ಅಥವಾ ವೆಂಕಟರಾಯಲು ಇವರಿಗೆ ಇಬ್ಬರೂ ಮಕ್ಕಳು ಹಿರಿಯ ಮಗ ರಾಮರಾಯಲು, ಕಿರಿಯ ಮಗ ತಿರುಮಲರಾಯಲು ಈತನಿಗೆ ರಾಜ ರಾಮ, ರಾಜ ಗೋಪಾಲ ಇವನ ಮಗ ವೀರ ವೆಂಕಟ, ಅಧಿಕಾರ ಸ್ವೀಕರಿಸಿದ್ದ ಹಿರಿಯ ಮಗ ರಾಮರಾಯಲು ಅವನಿಗೆ ವೆಂಗಮ್ಮ ಮಗಳು, ಮಗ ಚೆನ್ನರಾಜ, ರಾಜರಾಮ, ಮಗ ಚೆನ್ನರಾಜನಿಗೆ ಪಟ್ಟಕಟ್ಟಲಾಯಿತು. ಈತನ ಮಕ್ಕಳು ಪೆದ್ದದಾಸ, ಚೆನ್ನದಾಸ ರಾಯಲು, ಆಡಳಿತ ಅಧಿಕಾರ ಚೆನ್ನದಾಸನಿಗೆ ನೀಡಲಾಯಿತು. ಚಿನ್ನದಾಸ ಇತನಿಗೆ ಪಟ್ಟಕಟ್ಟಲಾಯಿತು. ನಂತರ ನರಸಿಂಹರಾಜ ಪತ್ನಿ ಕೇಶವಮ್ಮ ಆಡಳಿತ ನಡೆಸಿದನು. ಇವನ ತರುವಾಯ ತಿರುಮಲದೇವರಾಯಲು ಆಡಳಿತ ನಡೆಸಿದರು. ಇಬ್ಬರು ಮಕ್ಕಳು ಮಗ ಕೃಷ್ಣದೇವರಾಯಲು ಅಧಿಕಾರ ಸ್ವೀಕರಿಸಿದ ತದನಂತರ ಶ್ರೀರಂಗದೇವರಾಯಲು (ಪಂಪಾಪತಿರಾಜ) ಇವನಿಗೆ ಇಬ್ಬರು ಹೆಣ್ಣುಮಕ್ಕಳು ಮೂರುಜನ ಗಂಡು ಮಕ್ಕಳು ದರ್ಬಾರ್ ರಾಜ ಕೃಷ್ಣದೇವರಾಯಲು ಆಡಳಿತಸ್ವೀಕರಿಸಿದ ಇವನ ಮಗ ರಾಜ ಅಚ್ಯುತದೇವರಾಜ ಇವನಿಗೆ ಇಬ್ಬರು ಮಕ್ಕಳು ಕೃಷ್ಣಕುಮಾರಿ, ಶ್ರೀಕೃಷ್ಣದೇವರಾಯನಿಗೆ ಪಟ್ಟಕಟ್ಟಲಾಯಿತು. ಇವನ ಮಗ ತಿರುಮಲ ವೆಂಕಟದೇವರಾಯ ಈ ವಂಶಾವಳಿಯು ಆಡಳಿತ ಮಾಡಿದರು ಎಂಬುವುದು ತೋರಿಸುತ್ತದೆ"[೬೨]ಅಥವಾ ವಾರಸುದಾರಿಕೆತೋರಿಸುತ್ತದೆ. ಹೊರತು ಯಾವುದೇ ಆಡಳಿತ ನಡೆಸಿದರೆ ಎನ್ನುವುದಕ್ಕೆ ಆಧಾರಗಳು ಇಲ್ಲ. ಅದರೆ ಕೆಲವು ಅರಸರು ಆಡಳಿತ ಮಾಡಿರುವರು ಎಂಬುವುದು ತಿಳಿದುಬರುತ್ತದೆ.

ಆನೆಗೊಂದಿಯ ನಾಯಕ ಸಂಸ್ಥಾನಿಕರು"ಕ್ರಿ.ಶ.೧೩೫೦ಕ್ಕೂ ಮುಂಚೆ ಆಳ್ವಿಕೆ ನಡೆಸಿದ್ದರು ಎಂದು 'ಫೆರಿಸ್ತಾ' ಹೇಳಿಕೆಯಿಂದ ತಿಳಿದು ಬರುತ್ತದೆ. ಈ ಆನೆಗೊಂದಿಯ ಮೇಲೆ ದಾಳಿ ಮಾಡಿರುವರ ಬಗ್ಗೆ ಐತಿಹಾಸಿಕ ಘಟನೆಯಿಂದ ಆನೆಗೊಂದಿ ರಾಜಕೀಯ ತಿಳಿಯಲು ಸಾಧ್ಯವಾಗುತ್ತದೆ"[೬೩]. ಯಾದವ-ಹೊಯ್ಸಳರ ಕಾಲದಲ್ಲಿ ದೆಹಲಿ ಸುಲ್ತಾನರು ದಾಳಿ ಮಾಡಿದ ಬಗ್ಗೆ ಪೋರ್ಚುಗೀಸ್ ಪ್ರವಾಸಿ ಫರ್ನಾವೊನ್ಯುನಿಜ್ ಹೇಳುವ ಹೇಳಿಕೆಯಿಂದ ಆನೆಗೊಂದಿ ಇತಿಹಾಸ ತಿಳಿಯಬಹುದು. ಯುದ್ಧ ವಿಜಯನಗರ ಸಾಮ್ರಾಜ್ಯದೊಂದಿಗೆ ಯುದ್ಧ ಬೆಳವಣಿಗೆ ನಂತರ ಕಾಲದಲ್ಲಿ ಅವನತಿ ಹೊಂದಿತು. ಈ ಮನೆತನ ಕ್ರಿ.ಶ. ೧೫೬೫ರಲ್ಲಿ ಪತನವಾದ ಮೇಲೆ ಅರವೀಡುವಂಶ ಪೆನುಗೊಂಡ, ಚಂದ್ರಗಿರಿ ಮತ್ತು ವೆಲ್ಲೂರಿನಲ್ಲಿ ನೆಲೆಸಿತು. ಇನ್ನು ಕೆಲವರು ಆನೆಗೊಂದಿಯ ಪಾಳೆಯಗಾರನಲ್ಲಿ ಆಶ್ರಿತರಾದರು. ನಂತರದಲ್ಲಿ ಇಲ್ಲಿಯವರೆಗೆ ವಿಜಯನಗರದವರ ಅಧೀನದಲ್ಲಿದ್ದು ಆನೆಗೊಂದಿ ಸಂಸ್ಥಾನ ಸ್ವತಂತ್ರವಾದ ಸಣ್ಣ ರಾಜ್ಯವಾಗಿ ರೂಪುಗೊಂಡಿತು. ಆನೆಗೊಂದಿಯ ಸುತ್ತ-ಮುತ್ತಲ ಕೆಲವು ಜಿಲ್ಲೆಗಳು ಸೇರಿ ಆನೆಗೊಂದಿಯೆಂಬ ಸ್ವತಂತ್ರ ರಾಜ್ಯ ರೂಪಿತವಾಯಿತು. ಈ ಸಂಸ್ಥಾನವನ್ನು ಆಳ್ವಿಕೆ ಮಾಡಿದ ಅರಸ ಸಂಕ್ಷಿಪ್ತ ಇತಿಹಾಸ ತಿಳಿಸಲಾಗಿದೆ.

**ಆನೆಗೊಂದಿಯ ಅರಸ ತಿರುಮಲರಾಯ**

ಈತನ ಕಾಲದಲ್ಲಿ ಆನೆಗೊಂದಿಯು ಹೈದರಾಬಾದಿನ ನಿಜಾಮನಿಗೆ ಸೇರಿತ್ತು. ಇದು ಔರಂಗಜೇಬನ ತರುವಾಯ ಹೈದರಾಬಾದ್ ನಿಜಾಮನಿಗೆ ಸೇರಿತು. ಈ ಸಂದರ್ಭದಲ್ಲಿ ತಿರುಮಲರಾಯನು ತಮ್ಮ ಸಂಬಂಧಿನಾಯಕ ಅರಸುಮನೆತನಗಳಿಗೆ ಕೆಲವು ಸಣ್ಣಪುಟ್ಟ ದಾಳಿಗಳಲ್ಲಿ ಸಹಾಯ(ಬೆಂಬಲ) ಮಾಡುತ್ತಿದ್ದನು. ಇವರೊಂದಿಗೆ ಮುದಗಲ್ಲಿನ ಸಂಸ್ಥಾನದ ತೊದ್ದಪ್ಪರೆಡ್ಡಿಯ ಮೇಲೆ ದಾಳಿ ಮಾಡಿ ಅವನನ್ನು ಸೋಲಿಸಿ ಸೆರೆಹಿಡಿದನು. ಆದರೆ ತೊದ್ದಪ್ಪರೆಡ್ಡಿ ಸೆರೆಯಿಂದ ಬಿಡಿಸಿಕೊಂಡು ಹೈದರ ನಿಜಾಮನ ಮೊರೆಹೋದನು. "ನಿಜಾಮ ಆನೆಗೊಂದಿಯ ಅರಸನನ್ನು ದಂಡಿಸಲು ಸುರಪುರದ ಪಾಮನಾಯಕ (ಕ್ರಿ.ಶ.೧೭೨೭-೧೭೪೧) ನನ್ನು ಕಳುಹಿಸಿದನು. ಪಾಮನಾಯಕ ಮುದಗಲ್ ಗೆದ್ದು ಅರಸ ತಿರುಮಲರಾಯನನ್ನು ಸೆರೆ ಹಿಡಿದು ಒಂದು ವರ್ಷದವರೆಗೆ ಸೆರೆಯಲ್ಲಿಟ್ಟು ಕೊನೆಗೆ ೩ಲಕ್ಷರೂಗಳನ್ನು ಪಡೆದು ನಂತರ ಅರಸ ತಿರುಮಲರಾಯನನ್ನು ಬಿಡುಗಡೆಮಾಡಿದ್ದರು. ನಂತರ ಈತನಿಗೆ ೧೬ ಗ್ರಾಮಗಳನ್ನು ಪಡೆದು ಕರಾರು ಮಾಡಿಸಿಕೊಂಡು ನಂತರ ಬಿಡಲಾಯಿತು"[೪೪].

"ಅರಸ ತಿರುಮಲರಾಯನು ತನ್ನ ಬಲ ಹೆಚ್ಚಿಸಿಕೊಳ್ಳಲು ಚಿತ್ರದುರ್ಗದ ಹೀರೆ ಮದಕರಿ ನಾಯಕನಿಗೆ (ಕ್ರಿ.ಶ೧೭೨೧-೧೭೪೯)ನಿಗೆ ತನ್ನ ಮಗಳಾದ ಗಂಡೋಬವ್ವಳನ್ನು ಕೊಟ್ಟು ವೈವಾಹಿಕ ಸಂಬಂಧ ಬೆಳೆಸಿದ್ದರು"[೪೫].ಚಿತ್ರದುರ್ಗದ ನಾಯಕರು ಯುದ್ದಗಳ ಮಾಡುವಾಗ ಆನೆಗೊಂದಿ ಸಂಸ್ಥಾನದ ಅರಸ ತಿರುಮಲರಾಯ ಸಹಾಯ ಮಾಡಿದರು. ಚಿತ್ರದುರ್ಗದ ಅರಸರು ಕೆಲವು ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಸಹಾಯ ಮಾಡಿದನು."ಅರಸ ತಿರುಮಲರಾಯ ಕಾಲದಲ್ಲಿ ಕ್ರಿ.ಶ.೧೭೪೯ರಲ್ಲಿ ಆನೆಗೊಂದಿಯ ಭೂಪ್ರದೇಶಗಳು ಮರಾಠರ ದಾಳಿಗೊಳಪಟ್ಟವು. ಸೋತ ಆನೆಗೊಂದಿ ಅರಸನು ವಾರ್ಷಿಕವಾಗಿ ೭೦೦೦ ಸಾವಿರ ಪಗೋಡ ತೆರಿಗೆಯನ್ನು ನೀಡುವಂತೆ ಹೇರಿದರು, ನಂತರ ಕೆಲವು ಕಾಲಗಳ ನಂತರ ಆನೆಗೊಂದಿ ಮೈಸೂರಿನ ಹೈದರ್‌ಆಲಿಯ ಅಧೀನಕ್ಕೊಳಪಟ್ಟಿತು"[೪೬]. ಹೈದರಾಲಿ ೧೨೦೦೦ ಪಗೋಡಗಳನ್ನು ತೆರಿಗೆ ರೂಪದಲ್ಲಿ ಆನೆಗೊಂದಿ ಅರಸರುನೀಡುವಂತೆ ಆದೇಶಿಸಿದನು. ನಂತರ ಹೈದರ್‌ಆಲಿಯ ಮಗ ಟಿಪ್ಪುಸುಲ್ತಾನ್ ಆನೆಗೊಂದಿಯನ್ನು ತನ್ನ ವಶಕ್ಕೆ ತೆಗೆದುಕೊಂಡನು. ಕ್ರಿ.ಶ.೧೭೯೯ರಲ್ಲಿ ಟಿಪ್ಪು ಮರಣ ಹೊಂದಿದನು. "ಇಂತಹ ಸಂದರ್ಭದಲ್ಲಿ ಹೈದರಾಬಾದ್ ನಿಜಾಮ ಮತ್ತು ಬ್ರಿಟಿಷರ ಒಪ್ಪಂದದ ಮೇರೆಗೆ ಆನೆಗೊಂದಿ ಹೈದರಾಬಾದ್ ನಿಜಾಮನ ಆಡಳಿತಕ್ಕೆ ವರ್ಗಾವಣೆಯಾಯಿತು. ನಿಜಾಮರು ಆನೆಗೊಂದಿ ಸಂಸ್ಥಾನದ ಅರಸ ರಾಜತಿರುಮಲರಾಯನಿಗೆ (೧೮೦೧-೧೮೨೪) ಕೊಡುತ್ತಿದ್ದ ಮಾಸಾಶನ ಪದ್ದತಿಯನ್ನು ತೆಗೆದು ಹಾಕಿ ಅದರ ಮೊತ್ತಕ್ಕೆ ಸಮನಾದ ಆದಾಯವುಳ್ಳ ಐದು ಗ್ರಾಮಗಳನ್ನು ರಾಜನಿಗೆ 'ಮದದ್‌ಮಾಷ್' ರೂಪದಲ್ಲಿ ಜಹಗೀರಾಗಿ ಕೊಟ್ಟರು"[೪೭]. ಈ

ಜಹಗೀರಿಯನ್ನು ರಾಜತಿರುಮಲರಾಯನು ಪಡೆದು ಕೊಂಡನು. ನಂತರ ಈತನ ಮರಣ ಹೊಂದಲು ಮಗ ಅರಸ ವೀರವೆಂಕಟಪತಿ ಉತ್ತರಾಧಿಕಾರಿಯಾದನು.

ಆನೆಗೊಂದಿಯನ್ನು ಅರಸ ವೀರವೆಂಕಟಪತಿ ಸ್ವಲ್ಪಕಾಲ ಆಡಳಿತ ಮಾಡಿದನು. ಈ ದೊರೆ ವಿವಾಹವಾಗದೇ ಮರಣ ಹೊಂದಿದನು. ಈತನ ಸಹೋದರಿಯ ಮಗನಾದ ತಿರುಮಲರಾಯರು ಉತ್ತರಾಧಿಕಾರಿಯಾದನು. ಈ ಅರಸನು ರಾಜನಿಷ್ಠೆಯಲ್ಲಿ ಉತ್ತಮವಾಗಿ ನಿಭಾಯಿಸಿರಬೇಕು ಆದ ಕಾರಣ ನಿಜಾಮ ಸರ್ಕಾರದಿಂದ ಕೆಲವು ಗ್ರಾಮಗಳು ಮಂಜೂರಾದವು. ಹಾಗೂ ಇಂಗ್ಲಿಷರಿಂದ ವಿಶ್ರಾಂತಿ ವೇತನದೊಂದಿಗೆ ನದಿ ದಕ್ಷಿಣದ ದಂಡೆಯ ಮೇಲಿರುವ ಭೂಮಿಗಳು ಮಂಜೂರಾದವು. ಅರಸ ತಿರುಮಲರಾಯನಿಗೆ ಇಷ್ಟ ಪಡೆದು ಈತ ಆನೆಗೊಂದಿಯನ್ನು ವಿಜಯನಗರದ 'ಆನೆಯ ಮೂಲೆ' ಎಂದು ಕರೆಯುತ್ತಾನೆ.

ಕ್ರಿ.ಶ. ೧೮೬೬ ರಲ್ಲಿ ತಿರುಮಲರಾಯನ ಮಗ ವೆಂಕಟರಾಮರಾಯಲು ಆನೆಗೊಂದಿ ಸಂಸ್ಥಾನದ ಉತ್ತರಾಧಿಕಾರಿಯಾದನು. ಅರಸ ವೆಂಕಟರಾಮರಾಯಲು ಐದು ವರ್ಷ ಆನೆಗೊಂದಿಯನ್ನು ಆಡಳಿತ ಮಾಡಿದನು. "ಈತನ ನಂತರ ತನ್ನ ಸಹೋದರ ಕೃಷ್ಣದೇವರಾಯ ಕ್ರಿ.ಶ. ೧೮೭೧–೧೮೭೨ರವರೆಗೆ ಆಡಳಿತ ಮಾಡಿದನು. ಅರಸನಿಗೆ ಮಾಸಾಶನ ನೀಡುತ್ತಿದ್ದರು"[೪೮] ಈತನ ಕಾಲದಲ್ಲಿ ಆನೆಗೊಂದಿಯ ಆರ್ಥಿಕ ದುಸ್ಥಿತಿಗೀಡಾಯಿತು. ನಿಜಾಮನಿಗೆ ಭಾರಿ ಮೊತ್ತದ ತೆರಿಗೆಯನ್ನು ಸಂದಾಯ ಮಾಡಬೇಕಿತ್ತು. ಕೃಷ್ಣದೇವರಾಯ ಮರಣ ಹೊಂದಲು ತನ್ನ ಇಬ್ಬರು ಪತ್ನಿಯರಿಗೆ ಚಿಕ್ಕ ಮೊತ್ತದಮಾಸಾಶನವನ್ನು ಹತ್ತು ವರ್ಷಗಳವರೆಗೆ ನೀಡಿತು.

ನಂತರ ಕೃಷ್ಣದೇವರಾಯನ ಚಿಕ್ಕಮ್ಮನ ಮಗ ಪೆದ್ದ ನರಸಿಂಹ ರಾಜ ಆನೆಗೊಂದಿಯ ಅರಸನಾದ ಈತನ ಮರಣ ನಂತರ ಕ್ರಿ.ಶ. ೧೮೮೫ರಲ್ಲಿ ಆನೆಗೊಂದಿಯ ರಾಣಿ ನರಸಿಂಗಯ್ಯ ಅಧಿಕಾರ ಸ್ವೀಕರಿಸಿದಳು ಇವರಿಗೆ ಮಕ್ಕಳು ಇರುವುದಿಲ್ಲ ನರಸಿಂಹ ರಾಜು ಅರಸನಿಗೆ ಒಂದು ವರ್ಷದಲ್ಲಿ ಮರಣ ಹೊಂದುತ್ತಾನೆ. ರಾಣಿ ನರಸಿಂಗಮ್ಮ ಸಹ ಅಧಿಕಾರಕ್ಕೆ ಬಂದು ಮರುವರ್ಷದಲ್ಲಿ ತೀರಿಕೊಂಡಳು. ಈಕೆಯ ಸಹೋದರಿ ರಾಣಿ ಕುಪ್ಪಮ್ಮ ತನ್ನ ಕಿರಿಯ ಸಹೋದರ ಪಂಪಾಪತಿ ಅರಸನನ್ನು ದತ್ತುಗೆ ತೆಗೆದುಕೊಳ್ಳುತ್ತಾಳೆ. ಪಂಪಾಪತಿ ರಾಜ ಶ್ರೀರಂಗ ದೇವರಾಯನಾಗಿ ಪುನರ್ ನಾಮಕರಣಗೊಳ್ಳುತ್ತಾನೆ. ಇವನಿಗೆ ವರ್ಷಕ್ಕೆ ೧೦೦೦೦ ತೆರಿಗೆ ನೀಡುವಂತೆ ನಿಜಾಮರು ಆದೇಶಿಸಿದರು. ಶ್ರೀರಂಗದೇವರಾಯ ೧೬ ವರ್ಷ ಆಡಳಿತ ಮಾಡಿದನು. ಕ್ರಿ.ಶ.೧೯೧೮ರಲ್ಲಿ ದೈವಾಧೀನನಾದನು. ಇವನ ಹಿರಿಯ ಮಗ ಶ್ರೀ ಕೃಷ್ಣದೇವರಾಯ ಆಗಿನ್ನು ಸಣ್ಣವನಾಗಿದ್ದರಿಂದ ರಾಣಿ ಕುಪ್ಪಮ್ಮ ಸಂಸ್ಥಾನದ ರಾಜ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸಿದಳು. ಮಗ ವಯಸ್ಕನಾದಾಗ ಸಂಸ್ಥಾನದ ಅಧಿಪತಿಯಾದನು. ನಂತರದಲ್ಲಿ ೧೯೪೮ ಸೆಪ್ಟೆಂಬರ್ ೧೭ರಲ್ಲಿ ಭಾರತದ ಒಕ್ಕೂಟಕ್ಕೆ ಸೇರಿತು.

ಇಂದು ಈ ಆನೆಗೊಂದಿ ನಾಯಕ ಸಂಸ್ಥಾನದವರು ಜೀವಂತ ಅರಸುಮನೆತನಗಳು ಈ ಮನೆತನಗಳು ಆನೆಗೊಂದಿ, ಗಂಗಾವತಿ ಮತ್ತು ಹೊಸಪೇಟೆಯಲ್ಲಿ ವಾಸವಾಗಿದ್ದಾರೆ. ಈ ಆನೆಗೊಂದಿ ವಂಶಸ್ಥರು ರಾಜಕೀಯ ಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

- **ಕನಕಗಿರಿಯ ಸಂಸ್ಥಾನದ ನಾಯಕರು**

ಕನಕಗಿರಿ ೧೫ನೇ ಶತಮಾನದಿಂದ ೧೮ನೇ ಶತಮಾನಗಳ ಅವಧಿಯಲ್ಲಿ ವಿಜಯನಗರ ಆದಿಲ್‌ಷಾಹಿ ಹಾಗೂ ಹೈದರಾಬಾದ್ ನಿಜಾಮನ ಆಧೀನದಲ್ಲಿ ಪಾಳೆಯಗಾರಿಕಾ ರಾಜ್ಯವಾಗಿ ಅಸ್ತಿತ್ವದಲ್ಲಿ ಇದ್ದಿತು. ವಿಜಯನಗರದ ಸಾಮ್ರಾಟ್ ಪ್ರೌಢದೇವರಾಯನ ಕಾಲದಲ್ಲಿ ಗುಜ್ಜಲವಂಶದ ಪರಸಪ್ಪ ನಾಯಕನು ಕನಕಗಿರಿಯಲ್ಲಿ ತನ್ನ ಮನೆತನದ ಆಳ್ವಿಕೆಯನ್ನು ಪ್ರಾರಂಭಿಸಿದನು. ಇವನ ವಂಶಜರು ವಿಜಯನಗರ ಸಾಮ್ರಾಟರಿಗೆ ಆಪ್ತರಾಗಿದ್ದರು.

"ಪರಸಪ್ಪ ಉಡಚನಾಯಕ(೧೪೩೬–೧೫೧೦) ನವಾಬ ಇತನಿಗೆ ಆಡಳಿತ ನೀಡಿದನು. ನಂತರ ಈತನ ಮಗ ನವಾಬ ಉಡಚನಾಯಕನಿಗೆ ಕ್ರಿ.ಶ. ೧೫೧೦ರಲ್ಲಿ ಪಟ್ಟಾಭಿಷೇಕವಾಯಿತು. ಈತನ ಕಾಲದಲ್ಲಿ ಕನಕಗಿರಿಯ ರಾಜಧಾನಿ ವಿಸ್ತಾರರೂಪ ಪಡೆಯಿತು. ಕೃಷ್ಣದೇವರಾಯ ಕ್ರಿ.ಶ.೧೫೧೦ ರಲ್ಲಿ ಕನಕಗಿರಿ ಪೇಟೆಯ ಸುಂಕ, ತಳವರಿಕೆ ಸುಂಕ, ಚಿನ್ನಾಪು, ತೊರಣಗಲ್ಲು ಸೀಮೆಯ ಯಡಿಗಾಲ ಕಳ ಸ್ರಾಮ ನವಲಿಸೀಮೆಯ ಜಾರಾಪುರ ಹೀಗೆ ಒಟ್ಟು ಮೂರು ಗ್ರಾಮಗಳನ್ನು ನೀಡಿದನು. ಆಡಳಿತ ನಡೆಸಿದನು"[೪೯]. ಉಡಚನಾಯಕನು ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಹತ್ವಪೂರ್ಣವಾದ ಬೆಳವಣಿಗೆಗಳು ಉಂಟಾದವು. "ನವಾಬ ಉಡಚನಾಯಕ ಹಲವರು ದೇವಾಲಯಗಳನ್ನು, ಕೋಟೆಗಳನ್ನು ನಿರ್ಮಿಸಿ ರಾಜಧಾನಿ ಕನಕಗಿರಿಯನ್ನು ಕಲಾಕೇಂದ್ರವನ್ನಾಗಿ ರೂಪಿಸುತ್ತಾರೆ. ಇವನು ಹಂಪಿಯ ವಿರೂಪಾಕ್ಷ ದೇವಾಲಯದ ಉತ್ತರ ದಿಕ್ಕಿನ ದ್ವಾರ ಗೋಪುರವನ್ನು ನಿರ್ಮಿಸುತ್ತಾನೆ. ಇಂದಿಗೂ ಆ ಗೋಪುರವನ್ನು 'ಕನಕಗಿರಿ ಗೋಪುರ'ವೆಂದು ಕರೆಯಲಾಗುತ್ತಿದೆ"[೫೦].

"ಈತನ ತರುವಾಯ ಕೆಲವಡಿ ಉಡಚನಾಯಕ (೧೫೩೩–೧೫೭೮), ಅಧಿಕಾರಕ್ಕೆ ಬಂದನು ಕ್ರಿ.ಶ.೧೫೬೫ ರಲ್ಲಿ ನಡೆದ ತಾಳಿಕೋಟೆ ಕದನದಲ್ಲಿ ಕನಕಗಿರಿಯ ನಾಯಕರು ವಿಜಯನಗರದೊಂದಿಗೆ ಯುದ್ದಕ್ಕೆ ತೆರಳಿದ್ದರು. ಈ ಕದನದ ನಂತರ ಷಾಹಿಮನೆತನಗಳು ವಿಜಯನಗರವನ್ನು ಲೂಟಿ ಮಾಡುವ ಮೊದಲು ಕನಕಗಿರಿಯನ್ನು ಲೂಟಿಗೈದರು"[೫೧]. ಕೆಲವಡಿ ಉಡಚನಾಯಕನು ಕೆಲವು ಧಾರ್ಮಿಕ ಕೆಲಸಗಳನ್ನು ಮಾಡಿದರು. ಕನಕಗಿರಿಯ ಕನಕ ಚಲಪತಿ ದೇವಾಲಯವನ್ನು ವಿಸ್ತರಿಸಿ ಅಂದಗೊಳಿಸಿದನು. ಪ್ರಾಕಾರದ ದ್ವಾರ ಗೋಪುರಗಳು, ರಥಗಳ ನಿರ್ಮಾಣಗೊಳಿಸಿರುವನು, ಇದು ಕೆಲವಡಿ ಉಡಚನಾಯಕನ ಭಕ್ತಿ ಅಪಾರವಾದದ್ದು ಎಂದು ತಿಳಿದು ಬರುತ್ತದೆ. ಇತನ ತರುವಾಯ ಒಂದನೆ ಕನಕಪ್ಪ ಉಡಚನಾಯಕ ಆಡಳಿತಕ್ಕೆ ಬಂದನು.

### ೧. ಒಂದನೆಯ ಕನಕಪ್ಪ ಉಡಚನಾಯಕ (೧೫೭೮-೧೬೧೮)

ಕನಕಗಿರಿಯ ಆರಸನುಕೆಲವಡಿ ಉಡಚನಾಯಕನಿಗೆ ಕನಕಪ್ಪ ಮತ್ತು ವೆಂಕಟಪ್ಪ ಎಂಬ ಇಬ್ಬರು ಮಕ್ಕಳು ಅದರಲ್ಲಿ ಹಿರಿಯವನಾದ ಕನಕಪ್ಪ ಉಡಚನಾಯಕನು ತಂದೆಯ ನಂತರ ಅಧಿಕಾರಕ್ಕೆ ಬರುತ್ತಾನೆ. ಈ ಅರಸನು ರಾಜಕೀಯ ಆಡಳಿತದಲ್ಲಿ ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಈತನು ಕೆಲಸ ಮಾಡಿದ್ದಾನೆ, ತನ್ನ ಧರ್ಮ ಪತ್ನಿಯನ್ನು ದೈವಾಂಶ ಸಂಭೂತಳೆಂದು ತಿಳಿದು ಕೆರೆ ಮತ್ತು ಮಂಟಪವನ್ನು ನಿರ್ಮಿಸಿರುವನು ಮಂಟಪವಿರುವ ಲಕ್ಷ್ಮಿಯ ಗುಡ್ಡ ಎಂದು ಲಕ್ಷ್ಮೀನಾಗತಿ ಕೆರೆ ಎಂದು ಇಂದಿಗೂ ಕರೆಯುವುದು ವಾಡಿಕೆ. ಈತನ ತರುವಾಯಿ ತನ್ನ ಮಗ ಅಧಿಕಾರ ಸ್ವೀಕರಿಸುವನು.

### ೨. ಇಮ್ಮಡಿ ಉಡಚನಾಯಕ (ಕ್ರಿ.ಶ.೧೬೧೮-೧೭೦೮)

ಕನಕಪ್ಪ ಉಡಚನಾಯಕನ ನಂತರ ಅವನ ಮಗ ಇಮ್ಮಡಿ ಉಡಚನಾಯಕ ಪಟ್ಟಾಧಿಕಾರವಹಿಸಿಕೊಂಡನು ಬಿಜಾಪುರದ ಆದಿಲ್‌ಷಾಹಿಯೊಂದಿಗೆ ಯುದ್ಧ (ಕ್ರಿ.ಶ.೧೬೫೩) ಬಿಜಾಪುರದ ಆದಿಲಾಷಾಹನು ಕನಕಗಿರಿಯನ್ನು ವಶಪಡಿಸಿಕೊಳ್ಳಲು ತನ್ನ ಸೇನಾಧಿಪತಿಅಫ್‌ಜಲ್‌ಖಾನ್‌ನನ್ನು ಕಳುಹಿಸಿದನು. ಇಮ್ಮಡಿ ಉಡಚನಾಯಕ ಹೆಚ್ಚಿನ ಸೈನಿಕ ಸಾಮರ್ಥ್ಯದಿಂದ ಆದಿಲ್‌ಷಾಹಿಯ ಸೈನ್ಯವನ್ನು ಹಿಮ್ಮೆಟ್ಟಿಸಿದನು. “ಕನಕಗಿರಿಯಲ್ಲಿ ಈ ಯುದ್ಧದಲ್ಲಿ ಅಫ್‌ಜಲ್‌ಖಾನ್‌ನ ಜೊತೆಗೆ ಬಂದಿದ್ದ ಬಿಜಾಪುರದ ಮತ್ತೊಬ್ಬ ಸೇನಾಪತಿ ಮರಾಠನಾಯಕ ಷಹಜಿಯ ಮಗ ಸಂಭಾಜಿಯು ಹತನಾದನು. ಅವನನ್ನು ಕನಕಗಿರಿಯಲ್ಲಿಯೇ ಸಮಾಧಿ ಮಾಡಲಾಯಿತು”[೫೨]. ಇಲ್ಲಿ ಮರಾಠರು ಹಾಗೂ ಬಿಜಾಪುರದ ಆದಿಲ್‌ಷಾಹಿಯ ಸೈನ್ಯವನ್ನು ಸೋಲಿಸಿದ ಇಮ್ಮಡಿ ಉಡಚನಾಯಕನಿಗೆ ಈ ಕೀರ್ತಿ ದಕ್ಕುತ್ತದೆ. ನಂತರದಲ್ಲಿ ತನ್ನ ಸಂಸ್ಥಾನವನ್ನು ವಿಸ್ತರಿಸಲೂ ಮುಂದಾದನು. ಅನೇಕ ಉಂಬಳಿ, ಜಹಗೀರಗಳನ್ನು ಹಾಕಿಕೊಟ್ಟನು. “ಇವನು ನರಭಕ್ಷಕ ಹುಲಿಯನ್ನು ಬೇಟೆಯಾಡಿ ಕೊಂದಿದ್ದಕ್ಕಾಗಿ ವಿಠಲಾಪುರದ ಶಿಕಾರಿ ವೀರಪ್ಪನ ಮಗ ಸೋಲಾಬಯ್ಯನಿಗೆ ಗೌರವಿಸಿ ಭೂದಾನ ನೀಡಿದ ವಿಷಯ ತಿಳಿಯುತ್ತದೆ”[೫೩]. ಇಮ್ಮಡಿ ಉಡಚನ ನಾಯಕನು ಸಾಹಸಿಯ ವೀರಯೋಧಕೂಡ, ಈತನ ತರುವಾಯ ಮಗ ಇಮ್ಮಡಿ ಚಿಕ್ಕ ಕನಕಪ್ಪ ಉಡಚನಾಯಕ ಬರುವನು.

### ೩. ಇಮ್ಮಡಿ ಚಿಕ್ಕ ಕನಕಪ್ಪ ಉಡಚನಾಯಕ (ಕ್ರಿ.ಶ.೧೭೦೮-೧೭೫೭)

ಇಮ್ಮಡಿ ಚಿಕ್ಕ ಕನಕಪ್ಪ ಉಡಚನಾಯಕನ ವ್ಯಕ್ತಿತ್ವ ಶಾಂತಿ ಸಹನೆ ಹೊಂದಿರುವಂತಹದನ್ನು ಅವರು ಮಾಡಿರುವ ಧಾರ್ಮಿಕ ಕಾರ್ಯಗಳಿಂದ ತಿಳಿದು ಬರುತ್ತದೆ.

"ಕನಕಗಿರಿ ಶೃಂಗೇರಿ ಮಠದ ಶ್ರೀ ಶಂಕರಭಾರತಿ ಸ್ವಾಮಿಗಳಿಗೆ ಸತ್ಕರಿಸಿ ಅವರ ಶೃಂಗೇರಿ ಮಠಕ್ಕೆ ಕನಕಗಿರಿ ಸೀಮೆಯ ತೊಂಡೆಹಾಳಗ್ರಾಮವನ್ನು ದಾನ ನೀಡಿದನು. ಮತ್ತೊಂದು ಸಂಘಟನೆ ಎಂದರೆ ಕನಕಪ್ಪ ನಾಯಕನ ಬಗಳಾಮುಖ ಕ್ಷೇತ್ರ ಅಂಬಾಮಠದಲ್ಲಿ ವಾಸಿಸುತ್ತಿದ್ದ ಚಿದಾನಂದವಧೂತರನ್ನು ಕನಕಗಿರಿಗೆ ಬರುವಂತೆ ಕೇಳಿಕೊಂಡು ಅವರಿಗೆ ಕನಕಗಿರಿಯಲ್ಲೇ ಒಂದು ಮಠವನ್ನು ಇರಲು ನಿರ್ಮಿಸಿ ಎಲ್ಲ ಸೌಕರ್ಯಗಳನ್ನು ಒದಗಿಸಿ ಕೊಟ್ಟನು"[೫೪]. ಕನಕಪ್ಪನಾಯಕನು ವ್ಯಾಧಿಯಿಂದಾಗಿ ಕ್ರಿ.ಶ. ೧೭೫೬ರಲ್ಲಿ ನಿಧನ ಹೊಂದಿದನು. ಇವನ ಸ್ಮರಣಾರ್ಥ ಕನಕಗಿರಿಯ ದಕ್ಷಿಣದ ಕೊನೆಯಲ್ಲಿ ಒಂದು ಪ್ರತಿಯಾದ ಗುಡಿಯನ್ನು ಸುಂದರವಾದ ಪುಷ್ಕರಣಿಯನ್ನು ನಿರ್ಮಿಸಲಾಗಿದೆ. ಗುಡಿಯ(ಮಂದಿರ) ಗರ್ಭಗೃಹದಲ್ಲಿ ಇವನ ಆಳೆತ್ತರ ಪ್ರತಿಮೆ ಇದೆ. ಇದು ಕನಕಪ್ಪ ಉಡಚನಾಯಕ ವ್ಯಕ್ತಿತ್ವದ ಪ್ರತಿಮೆ ಎಂದು ಹೇಳಬಹುದು. ನಂತರ ಈತನ ಮಗನು ಆಡಳಿತಕ್ಕೆ ಬರುವನು.

### ೪. ಹಿರೇರಂಗಪ್ಪ ನಾಯಕ (ಕ್ರಿ.ಶ.೧೭೫೭-೧೭೮೧)

ಹಿರೇರಂಗಪ್ಪ ನಾಯಕನು ಇಮ್ಮಡಿ ಚಿಕ್ಕ ಕನಕಪ್ಪ ನಾಯಕನ ಮಗ, ಈತನು ತಂದೆಯ ಜೀವಿತಾವಧಿಯಲ್ಲಿಯೇ ಅಧಿಕಾರಕ್ಕೆ ಬರುತ್ತಾನೆ. ತನ್ನ ತಂದೆಯು ಅನಾರೋಗ್ಯದಿಂದ ಮರಣ ಹೊಂದಿದ ಕಾರಣವಿರಬಹುದು. ಆದರೆ ಹಿರೇರಂಗರ ನಾಯಕ ತನ್ನ ತಂದೆಯಂತೆ ಉದಾರಮನಸ್ಸಿನ ಹಾಗೂ ಪ್ರಜೆಗಳಿಗೆ ಹಿತವಾದ ಕೆಲಸವನ್ನು ಮಾಡಿರುವ ವ್ಯಕ್ತಿತ್ವ ತಿಳಿಸುತ್ತದೆ. ಈತನು ಕನಕಗಿರಿಯವರೇ ಆದ ಜಯವೆಂಕಟಾಚಾರ್ಯರು ಕನ್ನಡ ಮತ್ತು ಸಂಸ್ಕೃತದಲ್ಲಿ ಶ್ರೇಷ್ಠ ವಿದ್ವಾಂಸರಾದ ಇವರಿಗೆ ಆಶ್ರಯ ನೀಡಿದ್ದನು. ಈ ವಿದ್ವಾಂಸರು ಹಿರೇರಂಗಪ್ಪ ನಾಯಕನ ತಂದೆಯ ಕಾಲದಲ್ಲಿ, ಚಿದಾನಂದಾವಧೂತರೂ ಇವನ ಆಶ್ರಯದಲ್ಲಿ ಚಿದಾನಂದ ವಚನ, ಚಿದಾನಂದ ಕೀರ್ತನ, ಕಾಮವಿಡಂಬನೆ ಮತ್ತು ಪ್ರಸಿದ್ಧವಾಗಿರುವ ದೇವಿಪುರಾಣಗಳನ್ನು ರಚಿಸಿದರು. ಹಿರೇರಂಗಪ್ಪ ನಾಯಕನ ಇಚ್ಛೆಯಂತೆ ಕವಿ ಶಿರಗುಪ್ಪ ಅಥವಾ ಅರಳಿಕೊಪ್ಪದ ಸದಾಶಿವಯ್ಯನು ಅರ್ಧಕ್ಕೆ ನಿಂತಿದ್ದು ಅಪರಾಳ ತಿಮ್ಮಣ್ಣನು ಶ್ರೀಕೃಷ್ಣಪಾರಿಜಾತ ನಾಟಕವನ್ನು ಪೂರ್ತಿಗೊಳಿಸಿದನು. ಹಿರೇರಂಗಪ್ಪ ನಾಯಕನು ಕುರಿತಾಗಿ ಎರಡು ತಾಮ್ರ ಶಾಸನ, ಒಂದು ಸನದು ಮತ್ತು ಎರಡು ಸಾಹಿತ್ಯಿಕ ಕೃತಿಗಳಲ್ಲಿ, ಈತನ ಇತಿಹಾಸವನ್ನು ಲಭ್ಯವಾಗುತ್ತದೆ. ಈ ನಾಯಕನು ಸಹ ತಂದೆಯಂತೇ ಮಗ ಎನ್ನುವ ಮಾತು ಇಲ್ಲಿ ಬರುತ್ತದೆ. ತಂದೆಯ ಆದಿಯಲ್ಲಿ ಮುಂದುವರೆದ ಕೀರ್ತಿಯು ಈ ಅರಸನಿಗೆ ಸಲ್ಲುತ್ತದೆ. ಈತನ ಕಾಲದಲ್ಲಿ ಶೃಂಗೇರಿ ಮಠಾಧೀಶರು ಬರುತ್ತಾರೆ. ಗ್ರಾಮವನ್ನು ನೀಡುವರು. ಇದು ಕನಕಗಿರಿಗೆ ಹಾಗೂ ಶೃಂಗೇರಿ ಮಠಾಧೀಶರಿಗೆ ಅವಿನಾಭಾವ ಸಂಬಂಧ ಗುರು ಶಿಷ್ಯನ ಸಂಬಂಧ ಅಥವಾ ಈ ಸಂಸ್ಥಾನಕ್ಕೆ

ತಾಯಿ ಮಗನ ಸಂಬಂಧ ಬಾಂಧವ್ಯ ತಿಳಿಸುತ್ತದೆ. ಈತನ ತರುವಾಯ ತನ್ನ ಮಗ ಅಧಿಕಾರಕ್ಕೆ ಬರುವನು.

**೫. ಮುಮ್ಮಡಿ ಕನಕಪ್ಪನಾಯಕ (ಕ್ರಿ.ಶ.೧೭೮೧-೧೭೮೮)**

ಹಿರೇರಂಗಪ್ಪನಾಯಕನು ಮೃತನಾದ ನಂತರ ಅವನ ಮಗ ಕನಕಪ್ಪ ಉಡಚನಾಯಕನು ಅಧಿಕಾರಕ್ಕೆ ಬಂದನು. ಆದರೆ ಈತನ ಬಗೆಗೆ ನಿಖರವಾದ ಮಾಹಿತಿಗಳು ತಿಳಿಯಬೇಕಾಗಿದೆ.

**೬. ಹಿರೇನಾಯಕ (ಕ್ರಿ.ಶ. ೧೭೮೮-೧೮೩೩)**

ಹಿರೇನಾಯಕನು ಮುಮ್ಮಡಿ ಕನಕಪ್ಪ ನಾಯಕನ ಮಗನಾಗಿದ್ದು ಹಿರೇನಾಯಕ ಕ್ರೂರ ನಡತೆಯುಳ್ಳವನಾಗಿದ್ದನು. ಈತನನ್ನು ರಾಣಿವಾಸದ ಜನರನ್ನು ಕಂಡ ಶಿಶುಗಳನ್ನು ಬಾಕು(ಚೂರಿ) ಯಿಂದ ಇರಿದು ಕೊಲ್ಲುತ್ತಿದ್ದನು. ಹಿರೇನಾಯಕನ ಮೇಲೆ ಸುರಪುರದ ಪಾಮನಾಯಕನು ನಿಜಾಮ ಸೈನ್ಯದೊಂದಿಗೆ ಕನಕಗಿರಿಯ ಮೇಲೆ ಆಕ್ರಮಣಗೈಯುತ್ತಾರೆ. ಏಕೆಂದರೆ ಹಿರೇನಾಯಕ ಮುಂಡರಗಿಯ ದೇಸಾಯಿಯ ಮಗಳನ್ನು, ಬಾದರಬಂಡಿಯ ದೇಸಾಯಿಯರ(ಬ್ರಹ್ಮರು) ಹೆಂಡತಿಯನ್ನು ಬಲವಂತವಾಗಿ ಅಪಹರಿಸಿದ್ದನು. ಇದರಿಂದ ಎಮ್ಮಿಗುಡ್ಡಿ ಕಾಳಗ (ಕ್ರಿ.ಶ.೧೮೮೩)ರಲ್ಲಿ ನಡೆಯಿತು. ಈ ಕಾಳಗ ಒಂಬತ್ತು ದಿನಗಳು ನಡೆದವು. ಅನೇಕ ನಾಯಕರನ್ನು ಮತ್ತು ಅಪಾರ ಸೈನ್ಯವನ್ನು ನಷ್ಟವಾಯಿತು. ಆದ ಕಾರಣ ಪಾಮನಾಯಕನು ಸಂಚನ್ನು ರೂಪಿಸಿ ಹಿರೇನಾಯಕನು ಮಧ್ಯಪಾನಮಾಡಿ ರಾತ್ರಿ ಮಲಗಿದ್ದಾಗ ಸೆರೆಹಿಡಿದು, ಹೈದರಾಬಾದಿಗೆ ಕರೆದೊಯ್ಯಲಾಯಿತು. ಅಲ್ಲಿ ಹಿರೇ ನಾಯಕನನ್ನು ತೋಪಿನ ಬಾಯಿಗೆ ಕಟ್ಟಿ ಹಾರಿಸಿ ಹತ್ಯೆಗೈಯಲಾಯಿತು. ಕನಕಗಿರಿಯ ಎಲ್ಲ ಪ್ರದೇಶವನ್ನು ನಿಜಾಮ ಸರ್ಕಾರವು ವಶಪಡಿಸಿಕೊಂಡಿತು.

**೭. ಹುಲಿಹೈದರ್‌ನಿಂದ ಆಡಳಿತ ರಂಗನಾಥಪ್ಪ ನಾಯಕ**

"ಹಿರೇನಾಯಕನ ಎರಡನೆಯ ಮಗರಂಗನಾಥಪ್ಪ ನಾಯಕ(ಗುಡ್ಡದದೊರೆ)ನು ನಿಜಾಮರಿಂದ ೧೬ ಹಳ್ಳಗಳನ್ನು ಪಡೆದುಕೊಂಡು ಅದಕ್ಕೆ ಹುಲಿಹೈದರ್‌ನು ಕೇಂದ್ರವಾಗಿಟ್ಟುಕೊಂಡು ಆಡಳಿತ ಪ್ರಾರಂಭಿಸಿದನು. ಇದಕ್ಕೆ ಹುಲಿಹೈದರ್ ಸಂಸ್ಥಾನವೆಂದು ಕರೆಯಲಾಯಿತು"[೫೫]. ನಿಜಾಮ ಸಂಸ್ಥಾನದ ಅಧೀನದಲ್ಲಿದ್ದರೂ ಶ್ರೀಕನಕಾಚಲಪತಿ ದೇವರ ಜಾತ್ರೆ ನಡೆಸುವ ಅಧಿಕಾರವನ್ನು ನಾಯಕರಿಗೆ ಬಿಟ್ಟುಕೊಟ್ಟಿದನು. ಇದಕ್ಕೆ ನಿಜಾಮ ರಾಜ್ಯದಿಂದ ೩ ಸಾವಿರ ರೂಪಾಯಿಗಳನ್ನು ನೀಡಲಾಗುತ್ತಿತ್ತು. ನಂತರ ಹಣದ ಸಹಾಯ ನಿಲ್ಲಿಸಿದರೂ, ಆದರೆ ರಂಗನಾಥಪ್ಪ ನಾಯಕ ಸ್ವತಃ ಖರ್ಚನ್ನು ಹಾಕಿ ಜಾತ್ರೆ ಮತ್ತು ನಿತ್ಯ ಪೂಜೆಗಳನ್ನು ನಡೆಸಿದನು.

೮. ರಂಗಪ್ಪನಾಯಕ

"ಈತನೂ ಕೂಡಾ ಕನಕಗಿರಿ ಕನಕಾಚಲಪತಿ ದೇವರ ಜಾತ್ರೆ ಮತ್ತು ನಿತ್ಯ ಪೂಜೆಗಳನ್ನು ಜರುಗಿಸಿದನು. ಇವನ ತಮ್ಮಂದಿರು ಕೆಲವು ಪ್ರದೇಶಗಳ ತೆಗೆದುಕೊಂಡು ಪ್ರತ್ಯೇಕರಾದರು"[೫೬].

೯. ಉಡಸಿನಾಯಕ

ಉಡಸಿನಾಯಕನ ಕಾಲದಲ್ಲಿ ಕನಕಗಿರಿಯ ರೈತರ ಒತ್ತಾಯದಂತೆ ಕನಕಾಚಲಪತಿ ದೇವಸ್ಥಾನಕ್ಕೆ ಒಂದು ಆಡಳಿತ ಸಮಿತಿಯನ್ನು ನೇಮಿಸಲಾಯಿತು. ಆ ಸಮಿತಿಗೆ ಅರಸನೇ ಅಧ್ಯಕ್ಷನಾಗಿರಬೇಕೆಂದು ನಿರ್ಣಯಿಸಲಾಯಿತು. ಕೆಲವು ದಿನಗಳ ನಂತರ ಉಡಸಿಯನಾಯಕ ನಿಧನದ ನಂತರ ಮಗ ಚಿಕ್ಕವನಿದ್ದರಿಂದ ರಾಣಿ ಗೌರಮ್ಮ ತಾನೇ

ಉತ್ತರಾಧಿಕಾರಿಯಾಗುವಳು, ಈಕೆಯು ಮಗ ಚಿಕ್ಕವಯಸ್ಸಿನಲ್ಲೇ ನಿಧನನಾದ ರಾಜಾ ರಂಗಪ್ಪನಾಯಕ. ನಂತರದಲ್ಲಿ ರಾಣಿ ಗೌರಮ್ಮ ತಮ್ಮ ಮೈದುನ ಸೋಮಸಾಗರದ ರಂಗನಾಥಪ್ಪನ ಮಗರಂಗಪ್ಪನಾಯಕನು ದತ್ತು ತೆಗೆದುಕೊಂಡಳು. ನಂತರದಲ್ಲಿ ೧೯೫೦ ರಲ್ಲಿ ಜಹಗೀರುಗಳು ರದ್ದಾಗಿ ನಾಯಕ ಮನೆತನದವರು ಸಂಪೂರ್ಣ ಅಧಿಕಾರ ಕಳೆದುಕೊಂಡರು, ಸ್ವತಂತ್ರ ಭಾರತದ ಒಕ್ಕೂಟದಲ್ಲಿ ವಿಲೀನವಾಯಿತು.

ಈ ಮನೆತನದ ರಾಜಾ ನವೀನಚಂದ್ರನಾಯಕರು ಅನೇಕ ಗ್ರಾಮಗಳಿಗೆ ಸಂಚರಿಸುತ್ತ. ಜನಾಂಗದಲ್ಲಿಯ ಎಡರುತೊಡರುಗಳನ್ನು ನಿವಾರಿಸುತ್ತ, ಪ್ರಸ್ತುತ ಹೀಗೆ ಈ ಮನೆತನದಲ್ಲಿ ನೋಡಿಕೊಂಡು ಮುಂದುವರಿಸಿಕೊಂಡು ಬರುತ್ತಿದ್ದಾರೆ.

- **ಜರಿಮಲೆ ಸಂಸ್ಥಾನದ ನಾಯಕರು**

ಕೂಡ್ಲಿಗಿಯಿಂದ ಸುಮಾರು ೧೪ ಕಿ.ಮೀ. ದೂರವಿರುವ ಐತಿಹಾಸಿಕ ಸ್ಥಳವಾಗಿದೆ. ಇಲ್ಲಿ ಪಾಳೇಗಾರರು ಆಳ್ವಿಕೆ ನಡೆಸಿದ್ದರು. ಸುಮಾರು ೮೦೦ ಅಡಿ ಎತ್ತರದಲ್ಲಿನ ಗುಡ್ಡದ ಮೇಲೆ ಜರಿಮಲೆ ಪಾಳೇಗಾರರ ಶಿಥಿಲಗೊಂಡ ಕೋಟೆಯ ಅದರ ಅಳಿದುಳಿದ ಭಾಗಗಳು ಸಹಾಯದಿಂದ ಕೋಟೆಯ ಸ್ವರೂಪವನ್ನು ಹೊಂದಿದೆ. ಈ ಬೆಟ್ಟಗಳು ಕೆಲವೇಡೆ ಪ್ರಕೃತಿ ನಿರ್ಮಿತ ಬಂಡೆಗಳೇ ಕೋಟೆ ಗೋಡೆಯಾಗಿದೆ. ಬೆಟ್ಟದ ಮೇಲೆ ಶತ್ರುಗಳಿಗೆ ಪ್ರವೇಶಿಸಲು ಸಾಧ್ಯವಾಗಬಾರದು ಎಂಬ ಆಲೋಚನೆಯಿಂದ ಕೋಟೆಯನ್ನು ನಿರ್ಮಿಸಿರುವರು ಎಂಬಂತೆ ಇದೆ.

**ಜರಿಮಲೆಯ ಐತಿಹ್ಯ**

"ಜರಿಮಲೆ ಎಂಬುದು 'ಜರಿ' ಎಂದರೆ ತೆಳುವಾಗಿ ಹರಿಯುವ ನೀರು 'ಮಲೆ' ಎಂದರೆ ಬೆಟ್ಟಗುಡ್ಡ ಎಂದರ್ಥ. ಗುಡ್ಡದಲ್ಲಿ ನೀರು ಹರಿಯುವುದು ಅಥವಾ ನೀರು ಬಸಿಯುವುದು ಎಂದರ್ಥ, ಹೀಗಾಗಿ ಈ ಪ್ರದೇಶಕ್ಕೆ ಜರಿಮಲೆ ಎಂದು ಹೆಸರು ಬಂದಿದೆ"[೫೭]. "ಜರಿಮಲೆಯ ಐತಿಹ್ಯ ಹಿನ್ನೆಲೆ ಹಿಂದೆ ಒಮ್ಮೆ ಕಂಚಿಯವರು ಎಂದು ಹೇಳುವ ನಾಯಕ ಜನಾಂಗದ ಏಳುಮಂದಿ ಜನರು ಬೇಟೆಗಾಗಿ ಹಂದಿಯನ್ನು ಹಿಂಬಾಲಿಸಿದರು. ಹಿಂದಿಯು ಬಳ್ಳಾರಿ ಜಿಲ್ಲೆಯ ಸಂಡೂರು ಪ್ರದೇಶದ ಕಡೆ ಓಡುತ್ತಾಬಂದಿತು. ಅದನ್ನು ಹಿಂಬಾಲಿಸಿಯೇ ಬಂದರಂತೆ. ಆ ಹಂದಿಯ ಸೀರ್ಕಲ್ ಕೆರೆಹಳ್ಳಿ (ಚಿಕ್ಕಕೆರಗನಹಳ್ಳಿ) ಎನ್ನುವ ಗ್ರಾಮದವರಿಗೆ ಭರ್ಜಿ ಹಾಕಿದ ಆ ಹಂದಿಯು ಸಿಂಹದಂತೆ ಘರ್ಜಿಸಿತು, ಪಕ್ಕದಲ್ಲಿದ್ದ ಗುಂಡು ಆ ಭಯಂಕರ ಘರ್ಜನೆಗೆ ಸಿಡಿದು ಹೋಯಿತು. ಇಂದಿಗೂ ಈ ಗುಂಡನ್ನು 'ಹಂದಿವಡೆದ ಕಲ್ಲು' ಎಂದು ಕರೆಯುತ್ತಾರೆ". ಹಂದಿಯು ಅಲ್ಲಿ ಪಶ್ಚಿಮ ದಿಕ್ಕಿನ ಕಡೆ ಓಡುತ್ತಿತ್ತು, ಅದನ್ನು ಬಿಡದೇ ಹಿಂಬಾಲಿಸಿ ಹೋದರು, ಉಜ್ಜನಿ ಮಠ ದರ್ಶನವಾಯಿತು, ಅಲ್ಲಿ ಮಠದ ಸ್ವಾಮಿಗಳು ದರ್ಶನ ಪಡೆದು ಸ್ವಾಮಿ ಕೃಪೆಗೆ ಪಾತ್ರರಾದಂತೆ, ಉಜ್ಜನಿಯ ಮರಳುಸಿದ್ದರು ಅವರ ಭಕ್ತಿಗೆ ಮೆಚ್ಚಿ ತಾವು ಈ ಪ್ರದೇಶದಲ್ಲಿಯೇ ಉಳಿದುಕೊಳ್ಳರಿ ಎಂದು ಆಶಿರ್ವದಿಸಿದರಂತೆ. ಏಳು ಜನರಲ್ಲಿ ಭೂಮರಾಜ ನಾಯಕನಿಗೆ ಒಂದು ದೃಶ್ಯ ಕಂಡಿತು. ಒಂದು ಗುಂಡಿನ ಮೇಲೆ ಜರಿಯನ್ನು ಮೊಲವು ಕಾಡಿಸುತ್ತಿತ್ತು. ಈ ದೃಶ್ಯವನ್ನು ಕಂಡು ಭೂಮರಾಜ ಸ್ವಾಮಿಗಳಿಗೆ ತಿಳಿಸಿದ ಸ್ವಾಮಿಗಳ ಆಜ್ಞೆಯಂತೆ ಉಗ್ಗಿ (ಪ್ರಸಾದ) ಹೊಯ್ದು ಊರು ಕಟ್ಟಿದರು. ಜರಿಯನ್ನು ಮೊಲವನ್ನು ಕಂಡುಕಟ್ಟಿದ ಊರಿಗೆ ಜರಿಮಲೆ, ಜರಿಮಲೆ ಪಾಳೆಗಾರ ವಂಶದ ಬೆಳವಣಿಗೆಯಾಗಿದೆ.

"ಜರಿಮಲೆಯ ಸಂಸ್ಥಾನದವರು ಉಜ್ಜಿನಿ ಮರುಳಸಿದ್ದೇಶನ ಜಾತ್ರೆ ಸಂದರ್ಭದಲ್ಲಿ ಶಿಖರಕ್ಕೆ ಎಣ್ಣೆ ಹಾಕುವ ಸಂಪ್ರದಾಯ ನಡೆಯುತ್ತದೆ.ಜರಿಮಲೆಯ ದೊರೆಗಳು ಎಣ್ಣೆಯ ತಂದು ತಳವಾರ್ ಮನೆತನ (ಮ್ಯಾಸ ಬೇಡರು)ದವರು ಜರಿಮಲೆಯಿಂದ ನಡೆದುಕೊಂಡು ಹೋಗಿ ಉಜ್ಜನಿಯ ಶಿಖರಕ್ಕೆ ಪ್ರಥಮವಾಗಿ ಎಣ್ಣೆ ಎರೆಯುವುದು (ಹಾಕುವ) ಸಂಪ್ರದಾಯ ನಡೆಯುತ್ತದೆ. ಇಂದಿಗೂ ಈ ಸಂಪ್ರದಾಯ ಇದೆ, ದೊರೆಗಳು ಎಣ್ಣೆಯನ್ನು ಕೊಡಿಸುವ ಅದರೆ ಶಿಖರಕ್ಕೆ ಎಣ್ಣೆ ಹಾಕುವುದಿಲ್ಲ ಕಾರಣವಿದೆ"[೫೮]. "ಒಂದು ಬಾರಿ ಹೈದರಾಲಿ ಚಿತ್ರದುರ್ಗದ ಮೇಲೆ ಯುದ್ದ ಸಾರಿದ. ಯುದ್ದದಲ್ಲಿ ಜಯಗಳಿಸಲು ಹೈದರಾಲಿ ಜರಿಮಲೆ ದೊರೆಗಳ ಸಹಾಯ ಕೋರಿದನಂತೆ. ದೊರೆಗಳು ಸಹಾಯ ಮಾಡಲು ಒಪ್ಪಿದರು. ಪಾಳೇಗಾರರ ಸಹಾಯದಿಂದ ಚಿತ್ರದುರ್ಗ ಹೈದರಾಲಿಯ ವಶವಾಯಿತಂತೆ. ಆದರೆ ಹೈದರಾಲಿ ಪಾಳೇಗಾರರಾದ ಹೈದರಾಲಿಯ ಸಂಬಂಧಿ ಸುರದ್ರೂಪಿ ಹೆಂಗಸನ್ನು ಅಪಹರಿಸಿಕೊಂಡು ಬಂದರಂತೆ. ಆ ಹೆಂಗಸನ್ನು ಉಜ್ಜನಿ ಮಠದಲ್ಲಿಯೇ ಇಟ್ಟರಂತೆ, ಈ ವಿಷಯ ತಿಳಿದ ಸ್ವಾಮಿಗಳು "ಪರಾಂಗನಾವಿರತಿ ವ್ರತವನ್ನು ಆಚರಿಸುವುದು

ರಾಜಧರ್ಮ, ಇಂಥ ಹೀನಕಾಯಕ ಕೃತ್ಯಕ್ಕೆ ಪಾಳೆಗಾರರಗೆ ನನ್ನ ದರ್ಶನಕ್ಕೆ ನಿಮ್ಮ ವಂಶಪರಂಪರೆಯಾಗಿ ಯಾರು ಬರಕೂಡದೆಂದು ಶಾಪ ಕೊಟ್ಟರಂತೆ. ಪಾಳೇಗಾರನಿಗೆ ಜ್ಞಾನೋದಯವಾಯಿತು. ಪಶ್ಚಾತ್ತಾಪದಿಂದ ನಾನಾ ವಿಧವಾಗಿ ಬೇಡಿಕೊಂಡನಂತೆ ಗುರುವಾಕ್ಯ ಹುಸಿಯಾಗಲಾರದು? ಅದರೂ ಪರಿಹಾರವನ್ನು ಗುರುಗಳೇ ಸೂಚಿಸಬೇಕಾಯಿತು. ನನ್ನ ದರ್ಶನ ನೀವಿರುವಲ್ಲೇ ಆಗುವುದು ಎಂದು ಆಶೀರ್ವದಿಸಿದರು"[೫೯]. ಆದ ಕಾರಣ ದೊರೆಯ ಮನೆತನದವರು ಎಣ್ಣೆಯನ್ನು ತಂದು ಕೊಡುವರು ಅದ್ದರಿಂದ ತಳವಾರ್ ವಂಶಸ್ಥರಲ್ಲಿ ಎಣ್ಣೆಯನ್ನು ಎರೆಯುವ ಪದ್ಧತಿ ಇದೆ.

**ಜರಿಮಲೆ ನಾಯಕ ಇತಿಹಾಸ**

ಯಾವುದೇ ರಾಜಮನೆತನದ ಮೂಲವನ್ನು ಹುಡುಕುವುದು ಇತಿಹಾಸಕಾರರಿಗೆ ಒಂದು ಕುತೂಹಲಕಾರಿ ವಿಷಯವಾಗಿರುತ್ತದೆ. ಪ್ರಸಿದ್ಧ ರಾಜಮನೆತನಗಳ ಮೂಲವನ್ನು ಕೆದಕಿ (ಸಂಶೋಧನೆಯಿಂದ) ನೋಡಿ ಪರಿಶೀಲಿಸಿ ನಮಗೆ ಕೆಲವು ಸಾಮಂತ ಅರಸರ ಬಗ್ಗೆ ಸಂಪೂರ್ಣವಾಗಿ ತಿಳಿಯಲು ಕಷ್ಟ ಸಾಧ್ಯ, ವಿಶೇಷವಾಗಿ ಸಾಧನೆ ಮಾಡಿದ ಹಾಗೂ ಸ್ವತಂತ್ರ್ಯ ರಾಜನಾಗಿ ಆಡಳಿತ ಮಾಡಿದ ಅರಸನ ವಿವರಗಳು ದಾಖಲೆ ಮೂಲಕ ತಿಳಿಯಬಹುದು. ಹಾಗೆಯೇ ರಾಣಿಯ ವಿವರ ಜರಿಮಲೆ ಸಂಸ್ಥಾನದ ಅರಸರ ಪತ್ನಿಯರು ಐತಿಹಾಸಿಕ ದಾಖಲಿಸಲು ವಿರಳವಾಗಿದೆ. ಈ ಜರಿಮಲೆ ಸಂಸ್ಥಾನದ ನಾಯಕರು ಮೂಲತಃ ಬೇಡ ಸಮುದಾಯಕ್ಕೆ ಸೇರಿದ್ದ ಈ ಸಂಸ್ಥಾನ ವಿಜಯನಗರ ಸಾಮ್ರಾಜ್ಯದ ಕೊನೆಯಬಾರಿಗೆ ಇವರು ನಿಷ್ಠೆಯಿಂದ ಇಂದರು. ವಿಜಯನಗರೋತ್ತರ ಕಾಲದಲ್ಲಿ ಬದಲಾದ ರಾಜಕೀಯಕ್ಕೆ ಅನುಗುಣವಾಗಿ ಬೇರೆ ಸಂಸ್ಥಾನಗಳ ಸ್ವತಂತ್ರವಾಗಿ ಆಡಳಿತ ಪ್ರಾರಂಭಿಸಿದರು ಹಾಗೆಯೇ ಜರಿಮಲೆ ನಾಯಕರು ತಮ್ಮ ಸಂಸ್ಥಾನವನ್ನು ಕಾಪಾಡಿಕೊಳ್ಳಲು ಹೋರಾಡಿದರು, ಜರಿಮಲೆ ಸಂಸ್ಥಾನ ಪ್ರಸಿದ್ದಿಗೆ ಬಂದಿತು.

ಜರಿಮಲೆಯ ವಂಶದ ಮೊದಲ ನಾಯಕ (ಅರಸು) ಪಾಪಣ್ಣನಾಯಕನು ಚಕ್ರವರ್ತಿಯ ಸೇವಕದಲ್ಲಿ ಒಬ್ಬನಾಗಿದ್ದನು. ಚಕ್ರವರ್ತಿಯ ಜೊತೆ ಜೊತೆಗೆ ಇದ್ದು ಆತನ ವಿಶ್ವಾಸವನ್ನು ಗಳಿಸಿಕೊಂಡನು. ಪಾಪಣ್ಣ ನಾಯಕನು ಹೆಚ್ಚಿಸಲು ಕಾರಣ, "ಒಮ್ಮೆ ಚಕ್ರವರ್ತಿಯು ವಿಜಯನಗರದ ಸುತ್ತಲಿನ ದಂಗೆಕೋರರನ್ನು ಅಡಗಿಸಲು ಪಾಪಣ್ಣ ನಾಯಕರಿಗೆ ಆದೇಶವಿತ್ತನು. ತನ್ನ ಶೌರ್ಯ ಸಾಹಸಗಳ ಪ್ರದರ್ಶನಕ್ಕೆ ಸಮಯ ಕಾಯುತ್ತಿದ್ದ ನಾಯಕನು, ಈ ದಂಗೆಕೋರರನ್ನೆಲ್ಲಾ ಸದೆ ಬಡೆದನು. ಇದರಿಂದ ಚಕ್ರವರ್ತಿಯವರಿಗೆ ವಿಶ್ವಾಸಕ್ಕೆ ಪಾತ್ರನಾದ ಪಾಪಣ್ಣ ನಾಯಕನಿಗೆ ವಡ್ಡು- ದರೋಜಿ ಗ್ರಾಮಗಳನ್ನು ಬಳುವಳಿಯಾಗಿ ಕೊಡುವನು"[೬೦]ಪಾಪಣ್ಣ ನಾಯಕನು ಇವುಗಳನ್ನು ತನ್ನ ಅಧೀನದಲ್ಲಿ ಆಳ್ವಿಕೆ ಮಾಡಿದ. ಇವನ ನಂತರ ತನ್ನ ಮಗನಾದ ಪೆನ್ನನಾಯಕನು, ವಡ್ಡು ದರೋಜಿಗಳ ಒಡೆಯನಾದನು.

ಪೆನ್ನಪ್ಪನಾಯಕನು ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ನಿಷ್ಠೆಯಿಂದ ಸೇವೆ, ಸಲ್ಲಿಸುತ್ತಾ ಇದ್ದನು. "ಅಚ್ಯುತರಾಯನ ಕಾಲದಲ್ಲಿ ಜರಿಮಲೆಯರಿಗೆ ಅತಿ ಹೆಚ್ಚಿನ ಲಾಭದಾಯಕವಾದ, ಹಾಗೂ ಚಕ್ರವರ್ತಿಗಳಿಂದ ೧೫೩೦ ಮಹಮ್ಮದ್ ಷಾಹಿ ಪಗೋಡಾ ಆದಾಯವಿರುವ ನಾಲ್ಕು ಮಾರ್ಗಗಳನ್ನು ಪಡೆದುಕೊಂಡರು. ಕೆಲ ಕಾಲಾನಂತರ ಅಚ್ಯುತರಾಯನು ಜರಿಮಲೆ ಪೆನ್ನಪ್ಪನಾಯಕನಿಗೆ ೫೦೦ ಅಶ್ವದಳ ಮತ್ತು ೩೦೦ ಕಾಲಾಳು ಪಡೆ ಇಟ್ಟುಕೊಳ್ಳಲು ಅನುಮತಿ ನೀಡಿ ಕೇಳಿದಾಗ ಅದನ್ನು ಪೂರೈಸುವ ಷರತ್ತಿನ ಮೇರೆಗೆ ೫೫೧೫೦ ಮಹಮ್ಮದ್ ಶಾಹಿ ಪಗೋಡಾ ಆದಾಯವಿರುವ ಮತ್ತೆರಡು ಹೆಚ್ಚಿಗೆ ಮಾಗಣಿಗಳನ್ನು ನೀಡಿದನು"[೬೧]. ಪೆನ್ನಪ್ಪ ನಾಯಕನು ತನ್ನ ತಂದೆಯತೆ ಆಳ್ವಿಕೆಯೊಂದಿಗೆ ತನ್ನ ಸಂಸ್ಥಾನವನ್ನು ವಿಸ್ತರಿಸಿದನು. ಇದು ಈ ನಾಯಕ ಸಂಸ್ಥಾನದ ಈತನ ಕಾಲದಲ್ಲಿ ಪ್ರಸಿದ್ಧ ಹೊಂದಿದೆ ಎಂದು ತಿಳಿಯಬಹುದು.

ಪೆನ್ನಪ್ಪನಾಯಕನಿಗೆ ಮೂರು ಜನ ಮಕ್ಕಳು ಹಿರಿಯ ಮಗ ಬಸವಂತರಾಜ, ಕಿರಿಯರು ಭೂಮಿರಾಜ, ಬೂದಿಸಿದ್ದಾರಾಜ, ಇವರಲ್ಲಿ ಭೂಮಿರಾಜ ಅತ್ಯಂತ ಪ್ರತಿಭಾನ್ವಿತ ತನ್ನ ತಾತ, ತಂದೆಯಂತೆ ಹಾಗೂ ಇವರನ್ನು ಮಿರುಸುವ ರೀತಿಯಲ್ಲಿ ಅತ್ಯಂತ ಪ್ರತಿಭಾನ್ವಿತ, ಸಾಹಸಿ, ಅವನ ಸಾಹಸವನ್ನು ಈ ಘಟನೆಯೊಂದಿಗೆ ಸಮರ್ಥಿಸಬಹುದು. ವಿಜಾಪುರದ ಬಾದ್‌ಷಾಹನ ಆಸ್ಥಾನದಲ್ಲಿ ವಿಶೇಷವಾದ ಕುದುರೆ ಇತ್ತು ಅದನ್ನು ಏರಿ ಸವಾರಿ ಮಾಡಲು ಎಲ್ಲರು ಭಯಪಡುತ್ತಿದ್ದರು. ಕುದುರೆ ಸವಾರಿಯಲ್ಲಿ ಪ್ರತಿಭಾನ್ವಿತವಾದ ಭೂಮಿರಾಜನನ್ನು ಬಿಜಾಪುರಕ್ಕೆ ಬಾದ್‌ಷಾಹನರು ಕರೆಯಿಸಿ ಕುದುರೆಯನ್ನು ಪಳಿಗಿಸುವಂತೆ ಆದೇಶಿಸಿದನು. ಅದಕ್ಕೆ ಮೆಚ್ಚಿದ ಬಾದ್‌ಷಹನು ಅವನಿಗೆ 'ಜುಮ್ಮೇದಾರ್ ಗುಡಯ್ಯಜರಿಮಲ್ಲ' ಬಿರುದನ್ನು ನೀಡಿ ದರ್ಬಾರ್‌ಗೆ ಕರೆಯಿಸಿ ಸೈನ್ಯ ನಿರ್ವಹಣೆ ಹಾಗೂ ಅಶ್ವದಳವನ್ನಾಗಿ ನೇಮಿಸಿದನು. ಈತನ ಅಣ್ಣನಾದ ಬಸವಂತರಾಜನಿಗೆ ಪಟ್ಟಕಟ್ಟಿದರು. ಸಂಪ್ರದಾಯತೆ ಹಿರಿಯ ಮಗನಿಗೆ ಪಟ್ಟಕಟ್ಟವರು. ಈತನ ತಮ್ಮಂದಿರಾದ ಭೂಮಿಸಿದ್ದರಾಜ ಮತ್ತು ಬೂದಿಸಿದ್ದರಾಜರು ಅಣ್ಣನಿಗೆ ರಾಜ್ಯವಾಳಲು ಸಹಾಯಕರಾಗಿದ್ದರು.

ಜರಿಮಲೆ ಅಧಿಕಾರಕ್ಕೆ ಬಂದ ಎರಡನೆಯ ಬೊಮ್ಮಣ್ಣನಾಯಕನು ಹೈದರಾಲಿಗೆ ಅನೇಕ ಯುದ್ಧಗಳಲ್ಲಿ ಸಹಾಯ ಮಾಡುತ್ತಿದ್ದರು. ಅದರಂತೆ ಟಿಪ್ಪುಸುಲ್ತಾನನಿಗೆ ಸಹಾಯಕರಾಗಿದ್ದರು, ಟಿಪ್ಪು ಸುಲ್ತಾನನು ಮರಾಠನ್ನು ಎದುರಿಸಲು ಸರಿಯಾದ ಸ್ಥಳವೆಂದು ಭಾವಿಸಿ ಜರಿಮಲೆ ನಾಯಕರಿಗೆ ಜರಿಮಲೆಯನ್ನು ಟಿಪ್ಪುಸುಲ್ತಾನ ಪಡೆದುಕೊಂಡು, ಬೇರೆ ಬೇರೆ ಗ್ರಾಮಗಳನ್ನು ದತ್ತಿಯಾಗಿ ಕೊಟ್ಟನು. ನಂತರ ಕೆಲವು ದಿನಗಳ ನಂತರ ಅವರಿಗೆ ಕೊಟ್ಟಿದ್ದ ದತ್ತಿಯನ್ನು ಕೊಂಡು, ಭಕ್ಷಿಯನ್ನಾಗಿ ಮಾಡಿಕೊಂಡನು. ನಂತರ ಟಿಪ್ಪುಸುಲ್ತಾನ ಇವರನ್ನು ಇಸ್ಲಾಂ ಧರ್ಮಕ್ಕೆ ಸೇರಿಸಿಕೊಳ್ಳುತ್ತಾನೆಂಬ ಸುದ್ದಿ ತಿಳಿದು ತಪ್ಪಿಸಿಕೊಂಡು ತಮ್ಮ ವಂಶಸ್ಥನಾದ ಸುರುಪುರ ಸಂಸ್ಥಾನಕ್ಕೆ ಪಲಾಯನ ಮಾಡಿದರು. "ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧಾದ ನಂತರ ಬ್ರಿಟಿಷರು

ಘುತ್ತು ನಿಜಾಮನಿಗೆ ಆದ ಒಪ್ಪಂದದಂತೆ ಜರಿಮಲೆ ಹೈದರಾಬಾದ್ ನಿಜಾಮನಿಂದ ಪಡೆದರೆಂದು ಕಾಣುತ್ತದೆ”[೬೨]. ಒಟ್ಟಿನಲ್ಲಿ ಕ್ರಿ.ಶ. ೧೫೦೦ರಿಂದ ೧೮೦೦ರ ವರೆಗೆ ಈ ಪಾಳೇಯಗಾರರು ಅಸ್ತಿತ್ವದಲ್ಲಿದ್ದರೆ, ಈ ಮನೆತನದಲ್ಲಿ ಕೆಲವು ತಲೆಮಾರುಗಳ ಅರಸರ ಹೆಸರಿನಲ್ಲಿ ದಾಖಲಾತಿಯು ಸ್ವತಂತ್ರ ಬರುವ ಸಮಯ ಮತ್ತು ನಂತರದಲ್ಲಿ ಅರಸನದ ಸಣ್ಣ ಸಿದ್ದಪ್ಪನಾಯಕ ಕಾಲಕ್ಕೆ ತಾಳೆಗರಿಗಳು ಇದ್ದು ಅವು ನಂತರ ಅರಸರ ಕಾಲದಲ್ಲಿ ಇಲ್ಲದಾಗಿದೆ. ಜರಿಮಲೆಯ ಗುಡ್ಡದ ಮೇಲಿನ ಸ್ಮಾರಕಗಳು ಕೋಟೆಯಲ್ಲಿದ್ದು, ಅವಶೇಷಗಳು ದೇವಾಲಯಗಳು ಇಂದಿಗೂ ಇವೆ. ಈ ನಾಯಕರ ಸಂಸ್ಥಾನಗಳಲ್ಲಿ ಆರ್ಥಿಕ ಸ್ಥಿತಿಗಿಂತ ಅತಿ ಕೆಳಮಟ್ಟದ ಸ್ಥಿತಿಯನ್ನು ತಲುಪಿದ್ದಾರೆ. ಈ ಸಂಸ್ಥಾನದವರು ಇರುವ ಪ್ರದೇಶ ಗುಡ್ಡಗಳಿಂದ ಆವೃತವಾಗಿದೆ. ತಾವು ಅರಸರು ಸ್ವಾಭಿಮಾನದಿಂದ ರಾಜಕೀಯಕ್ಕೆ ಪ್ರವೇಶಿಸಬಾರದೆಂಬ ಮನೋಭಾವನೆ ಇಮ್ಮಡಿ ಸಿದ್ದಪ್ಪ ದೊರೆಯ ಮನೋಭಾವನೆ, ಇವರಿಗೆ ಇಂದಿಗೂ ರಾಜಕೀಯವಾಗಿ, ಸಾಮಾಜಿಕವಾಗಿ ಇನ್ನು ಗೌರವವಿದೆ. ಕೆಲವು ರಾಜಕಾರಣಿಗಳು ಓಟಿಗಾಗಿ ಇವರನ್ನು ಆಶ್ರಯಿಸಿದರೆ. ಬೇಡ ಜನಾಂಗದ ದೊರೆಗಳು ಎಂಬ ಕಾರಣಕ್ಕಾಗಿ ಸ್ಥಳೀಯರು ಇವರಿಗೆ ಮೊದಲನೆಯ ಸ್ಥಾನವನ್ನುನೀಡುತ್ತಾ ಬಂದಿದ್ದಾರೆ.

ಈ ಮೂರು ಸಹೋದರರಲ್ಲಿ ಬೂದಿಸಿದ್ದರಾಜನ ಮಕ್ಕಳ ಬಗ್ಗೆ ಹೇಳಿಕೆ ಗೊಂದಲಮಯವಾಗಿದೆ, ಏಕೆಂದರೆ“ಏಳುಜನ ಪುತ್ರರಿದ್ದುದನ್ನು ತಿಳಿಸುತ್ತದೆ. ಹೀಗೆ ವಿಭಿನ್ನ ಮಾಹಿತಿ ಇವುಗಳಲ್ಲಿ ಇರುವುದರಿಂದ ಯಾರು? ಯಾರಿಗೆ? ಯಾವ ರೀತಿಯ ಸಂಬಂಧ? ಎಂದು ಹೇಳಲು ಅತ್ಯಂತ ತೊಡಕಾಗಿದೆ. ಪೆನ್ನಪ್ಪ ನಾಯಕನ ನಂತರ ಅವನ ಹಿರಿಯ ಪುತ್ರ ಬಸವಂತರಾಜ”[೬೩]. ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ಭೂಮಿರಾಜ, ಬೂದಿಸಿದ್ದರಾಜ ತಮ್ಮ ಅಣ್ಣನಿಗೆ ನೆರವು ನೀಡಿ ಈ ಪಾಳೆಯ ಪಟ್ಟಿನ ಔನ್ನತ್ಯಕ್ಕೆ ಕಾರಣರಾದರೆಂಬುದನ್ನು ಮಾತ್ರ ಹೇಳಲಿಕ್ಕೆ ಸಾಧ್ಯವಾಗುತ್ತದೆ. ಕರ್ನಲ್ ಮೆಕಂಜಿ ಸಂಗ್ರಹಿಸಿರುವ ವಂಶಾವಳಿಯ ಬಸವಂತರಾಜನು ರಾಜ್ಯವನ್ನು ತನ್ನ ಏಳು ಮಕ್ಕಳಿಗೆ ಹಂಚಿದನೆಂದು ತಿಳಿಸುತ್ತದೆ. ಅದರಲ್ಲಿ ಹಿರಿಯವರಿಂದ ಇಮ್ಮಡಿ ನಾಯಕನು ಕಣಕುಪ್ಪೆ ಉಜ್ಜಯಿನಿ, ಕೂಡಲಗಿ ಆಡಳಿತ ಮಾಡಿದನು. ಇವನ ನಂತರ ಈತನ ಮಗ ಕಿರಿ ಇಮ್ಮಡಿನಾಯಕನು ಅರಸನಾದನು. ಇವನು ಕಾಲದಲ್ಲಿ ಹರಪ್ಪನಹಳ್ಳಿಯವರು ಮೇಲಿದ ಮೇಲೆ ಕಿರುಕುಳ ಕೊಡಲಾರಂಭಿಸಿದರು. ಈತನ ನಂತರ ಬಂದ ಮಗ ಬೊಮ್ಮಣ್ಣ ನಾಯಕ.

“ಬೊಮ್ಮಣ್ಣನಾಯಕ ಕಾಲದಲ್ಲಿ ಹರಪನಹಳ್ಳಿ, ಚಿತ್ರದುರ್ಗದವರು ತೊಂದರೆ ಕೊಡಲಾರಂಭಿಸಿದರು. ಚಿತ್ರದುರ್ಗದ ಮೇಲೆ ಹೈದರಾಲಿಯ ದಾಳಿಯ ಸುದ್ದಿ ಸಮಾಚಾರ ತಿಳಿದು ಚಿತ್ರದುರ್ಗದ ಅರಸು ತನ್ನ ಆಶ್ರಿತ ಸಂಸ್ಥಾನಗಳಿಗೆ ಸೇನೆಯನ್ನು ಕಳುಹಿಸಿಕೊಡುವಂತೆ ಪತ್ರ ಬರೆದನು”[೬೪]. ಇಂತಹ ಪತ್ರ ಜರಿಮಲೆಯ ನಾಯಕರಿಗೂ ತಲುಪಿತು. ಅಲ್ಲಿದ್ದ ಬೊಮ್ಮಣ್ಣನಾಯಕನು ಸೇನೆಯನ್ನು ಸಂಗ್ರಹಿಸಿ ಸಂಸ್ಥಾನದ ವ್ಯವಹಾರವನ್ನು ತನ್ನ ಸೋದರನಾದ

ಮಲ್ಲಿಕಾರ್ಜುನ ನಾಯಕನಿಗೆ ವಹಿಸಿದ, ಹೈದರನು ದುರ್ಗಕ್ಕೆ ಮುತ್ತಿಗೆ ಹಾಕಿ ಮೂರು ತಿಂಗಳುಗಳಾದವು. ಈ ಸನ್ನಿವೇಶದಲ್ಲಿ ದುರ್ಗದವರು ಹೈದರನೊಂದಿಗೆ ಒಪ್ಪಂದವೇನಾದರೂ ಮಾಡಿಕೊಳ್ಳಬೇಕಾದ ಸಂದರ್ಭ ಒದಗಿದರೆ ಸೆರೆಮನೆಯಲ್ಲಿದ್ದ ಜರಿಮಲೆ ನಾಯಕ ಇಮ್ಮಡಿನಾಯಕನನ್ನು ಬಿಡುಗಡೆ ಮಾಡಬೇಕಾಗಬಹುದು ಅವನು ತೊಂದರೆ ಕೊಡುವ ವ್ಯಕ್ತಿ ಅಲ್ಲದೆ ಬಲಾಢ್ಯ ಎಂದು ಆಲೋಚನೆ ಮಾಡಿ ಮದಕರಿನಾಯಕನ ಇಮ್ಮಡಿನಾಯಕನು ಕೊಲೆ ಮಾಡಿದನು. ತನ್ನ ತಂದೆಯ ಸಾವಿನ ಸುದ್ದಿ ಕೇಳಿದ ಬೊಮ್ಮಣ್ಣನಾಯಕನು ದುರ್ಗದವರು ವಿಶ್ವಾಸ ದ್ರೋಹಿಗಳೆಂದು ಭಾವಿಸಿ ಜರಿಮಲೆಗೆ ತಪ್ಪಿಸಿಕೊಂಡು ಹೋದನು.

- **ಗುಡೇಕೋಟೆ ಸಂಸ್ಥಾನದ ನಾಯಕರು**

"ಗುಡೇಕೋಟೆ ಕೂಡ್ಲಿಗಿಯಿಂದ ಪೂರ್ವ ದಿಕ್ಕಿಗೆ ೨೮ ಕಿ.ಮೀ ದೂರದಲ್ಲಿರುವ ಒಂದು ಹೋಬಳಿ ಕೇಂದ್ರ. ಈ ಗ್ರಾಮದ ಸುತ್ತಲೂ ಬೆಟ್ಟ ಗುಡ್ಡಗಳು, ಕುರುಚಲ ಗಿಡ ಕಾಡುಗಳು ಸುತ್ತವರೆದಿದೆ. ಇದು ಬಳ್ಳಾರಿಯಿಂದ ನೈಋತ್ಯಕ್ಕೆ ೬೫ಕಿ.ಮೀ ಅಂತರದಲ್ಲಿದೆ. ಈ ಗುಡೇಕೋಟೆಯೂ ಕಲ್ಲುಗುಡ್ಡಗಳಿಂದ ಅವೃತವಾಗಿದೆ. ಕೋಟೆಗೋಡೆಗಳನ್ನು ಇಡೀ ದಕ್ಷಿಣ ಭಾರತದಲ್ಲಿಯೇ ಕಂಡಿಲ್ಲ ಎಂದು ಪ್ರಾಕ್ತನಶಾಸ್ತ್ರದ ಬ್ರೂಸ್‌ಪುಟ್ ಹೇಳಿದ್ದಾರೆ.

**ಗುಡೇಕೋಟೆ ಮೂಲನಾಮ**

"ಗಡಿಯಾಂಕ ಭೀಮನ ಪಟ್ಟಣವೆಂದು ಪೌರಾಣಿಕ ಪ್ರಸಂಗಗಳು ಹೇಳುತ್ತವೆ. ಕನ್ನಡ ನಿಘಂಟುಗಳಲ್ಲಿ ಬರುವ ಗುಡೇ ಎಂಬುದರ ಶಾಬ್ದಿಕ ಅರ್ಥವು ರಾಶಿ, ಸಮೂಹ, ಗುಂಪು ಎಂಬ ಪದಗಳನ್ನು ನಿರ್ದೇಶಿಸುತ್ತಿದ್ದು, ಈಗಲೂ ಗುಡೇಕೋಟೆ ಸುತ್ತಲೂ ಅನೇಕ ಗುಡ್ಡಗಳು ರಾಶಿ ರಾಶಿಯಾಗಿ ಹಬ್ಬಿರುವುದುನ್ನು ನೋಡಲಾಗಿ ಅನ್ವರ್ಥವಾಗಿ ಗುಡೇ ಎಂಬ ವಿಶ್ಲೇಷಣೆಯನ್ನು ಸೇರಿಸಿಕೊಂಡಿರಬೇಕು ಹಾಗಾಗಿ ಈ ಗ್ರಾಮಕ್ಕೆ ಗುಡೇಕೋಟೆ ಎಂಬ ಹೆಸರು ಪ್ರಾಪ್ತವಾಗಿದೆ"[೬೫].

**ಗುಡೇಕೋಟೆಯ ಪ್ರಾಗೈತಿಹಾಸ ಕಾಲ ಹಿನ್ನೆಲೆ**

ಗುಡೇಕೋಟೆಯ ಪ್ರಾಚೀನತೆಯನ್ನು ಕಾಲವಾದ ಅವಶೇಷಗಳ ಮೂಲಕ ಈ ಗ್ರಾಮದ ಸುತ್ತಮುತ್ತಲಿನ ಪರಿಸರವು ಪ್ರಾಗತಿಹಾಸ ಕಾಲದ ಅವಶೇಷಗಳು ದೊರೆಕಿರುವುದು ಕಂಡುಬಂದಿದೆ. ಈ ಪ್ರದೇಶವು ಬೃಹತ್ ಶಿಲಾಯುಗದಿಂದ ಬಂದಿರುವುದನ್ನು ಕಾಣಬಹುದು. ಪ್ರಾಗತಿಹಾಸದ ಅಧ್ಯಯನಗಳು ನಡೆದಿದ್ದಾವೆ. ಮೂಲಾಧಾರಗಳ ಮೂಲಕ ಸಾಬೀತುಪಡಿಸಿವೆ. ಹಾಗೆಯೇ ಗುಡೇಕೋಟೆಯನ್ನು ಪಾಳೆಯಗಾರರ ಮೇಲೆ ಟಿಪ್ಪುಸುಲ್ತಾನನು ದಾಳಿಮಾಡಿ ಇಡಿ ಊರನ್ನೆ ಬೆಂಕಿ ಹಚ್ಚಿದನು ಅವುಗಳು ಸುಟ್ಟು ಹೋದವು. ಜನರು ಆ ಜಾಗವನ್ನು ಬಿಟ್ಟು ಇನ್ನೊಂದು ಜಾಗದಲ್ಲಿ ಊರನ್ನೇ ಮಾಡಿಕೊಂಡರು. ನಂತರ ಊರು ಬೆಳೆಯುತ್ತಾ ಮರಳಿ ಅದೇ ಜಾಗಕ್ಕೆ ಜನರು ಮನೆಗಳನ್ನು ಕಟ್ಟಿಕೊಳ್ಳುವ ಸಂದರ್ಭ ಬಂದಿದೆ. ಮನೆಗಳನ್ನು ಕಟ್ಟುವ

ಸಮಯದಲ್ಲಿ ಹಳೆಯ ಕಾಲದಲ್ಲಿ ಮನೆಯು ಸುಟ್ಟು ಹುದುಗಿದ್ದ ವಸ್ತುಗಳು ಮರಳಿ ಈ ಕಾಲದಲ್ಲಿ ದೊರಕುತ್ತಿವೆ.

**ಗುಡೇಕೋಟೆ ಐತಿಹ್ಯಗಳು**

"ಐತಿಹ್ಯದ ಪ್ರಕಾರ ಹಿಂದೆ ಬಾಣಾಸುರನು ಆಳುತ್ತಿದ್ದನಂತೆ. ಈತ ಶಿವಪಾರ್ವತಿಯರ ಪರಮಭಕ್ತ. ಈತನ ಭಕ್ತಿಗೆ ಮೆಚ್ಚಿದ ದೇವ ಮತ್ತು ದೇವಿಯು ಇಬ್ಬರು ಸೇರಿ ಈ ಪರಮಭಕ್ತನಿಗೆ ಪ್ರತ್ಯಕ್ಷರಾಗಿ ಒಂದು ವರವನ್ನು ನೀಡಿದರು ಅದು ಪಟ್ಟಣದ ಮಹಾದ್ವಾರ ಕಾಯುವುದಾಗಿ ಅಭಯ ನೀಡಿದರಂತೆ ಎಂಬ ಪ್ರತೀತಿ ಇದ್ದು"[೬೬]. ಶಿವ ಪಾರ್ವತಿಯ ದೇವಾಲಯವು ಇಂದಿಗೂ ಸಹ ಊರಿನ ಹೊರಗಡೆ ಉತ್ತಮ ಸ್ಥಿತಿಯಲ್ಲಿ ಇದೆ. ಶಿವಪಾರ್ವತಿಯರ ಮೂರ್ತಿಯು ಕಪ್ಪು ಶಿಲೆಯಲ್ಲಿ ಇದೆ. ಹೆಚ್ಚು ಎಂದರೆ ಶಿವನರೂಪ ಮತ್ತು ಪಾರ್ವತಿ ಸಮೇತ ಮೂರ್ತಿ ಬಳ್ಳಾರಿ ಜಿಲ್ಲೆಯಲ್ಲಿ ಎಲ್ಲಿಯೂ ಇಲ್ಲ ಹಾಗೂ ಶಿವನ ಆರಾಧನೆ ಲಿಂಗ ರೂಪದಲ್ಲಿ ಹೆಚ್ಚು ಮಾಡುವ ಸಂಪ್ರದಾಯ ಅಥವಾ ಆಚರಣೆ ಎಂದು ಹೇಳಬಹುದು.

**ಗುಡೇಕೋಟೆಯ ಇತಿಹಾಸ**

ಗುಡೇಕೋಟೆ ಪ್ರದೇಶವು ಮೌರ್ಯ ಸಾಮ್ರಾಜ್ಯದ ಇದು ಒಂದು ಪ್ರದೇಶವು ಆಡಳಿತಕ್ಕೆ ಒಳಪಟ್ಟಿದ್ದಿತು. ಇಲ್ಲಿಯ ಬ್ರಹ್ಮಗಿರಿ ಸಿದ್ದಾಪುರ ಪ್ರದೇಶದಲ್ಲಿ ಸಿಕ್ಕಿರುವ ಶಾಸನಗಳಿಂದ ಮತ್ತು ಇತಿಹಾಸಕಾರರ ಮೂಲಕ ತಿಳಿದುಬರುತ್ತದೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಇದು ಒಂದು ನಾಯಕರ ಪ್ರದೇಶವು ಚಿಕ್ಕ ಪಾಳೆಪಟ್ಟಿನ ಕೇಂದ್ರವಾಗಿತ್ತು. ವಿಜಯನಗರೋತ್ತರದ ನಂತರದಲ್ಲಿ ಇದು ತನ್ನ ಬಲ ಹೆಚ್ಚಿಸಿಕೊಂಡಿತು. ಸಂಸ್ಥಾನವನ್ನು ವಿಸ್ತರಿಸಿತು. "ಇವರು ಸುಮಾರು ಕ್ರಿ.ಶ. ೧೫೦೬ ರಿಂದ ೧೭೫೨ರ ವರೆಗೆ ಅಂದರೆ ಸುಮಾರು ೨೫೦ ವರ್ಷಗಳ ಕಾಲ ಗುಡೇಕೋಟೆಯನ್ನು ಆಳ್ವಿಕೆ ಮಾಡಿದರು"[೬೭]. ಗುಂಡಳನಾಯಕನು ಗುಡೇಕೋಟೆ ಪಾಳೆಯಗಾರರಲ್ಲಿ ಪ್ರಥಮಿಗ ಎಂದು ಹೇಳುವರು. ಈತನ ಬಗ್ಗೆ ಮಾಹಿತಿ ಅಸ್ಪಷ್ಟವಾಗಿದ್ದು, ಇವನ ನಂತರ ಅಧಿಕಾರಕ್ಕೆ ಬಂದವನು ಪೆನ್ನಪ್ಪನಾಯಕ ಅವನ ನಂತರ ಕ್ರಮವಾಗಿ ಪಾಪಳನಾಯಕ, ಕೆಮ್ಮಯ್ಯರಾಜ, ರಾಮಪ್ಪನಾಯಕನ ಮಕ್ಕಳಾದ ತಿಮ್ಮಪನಾಯಕ, ಹಾಗೂ ಹಿರೇಬೊಮ್ಮಂತರಾಜ, ಚೆಣ್ಣಯ್ಯರಾಜ ಬೆಣ್ಣಯ್ಯರಾಜನ ಮಗ ಜಟಿಂಗಿರಾಜ, ರಾಮಪ್ಪನಾಯಕ ಆಳಿದರೆಂದು ತಿಳಿದುಬರುತ್ತದೆ.

**ದಾಖಲೆ ಪತ್ರದ ಪ್ರಕಾರ ಗುಡೇಕೋಟೆ ಆಡಳಿತ ಮಾಡಿದ ನಾಯಕರು**

ಶಕ ಸನ್ ೧೪೨೫ನೇ ಪ್ರಭವನಾಮ ಸಂವತ್ಸರದ ಕಾರ್ತಿಕ ಶುದ್ಧ ದ್ವಾದಶಿ ದಿವಸದಲ್ಲಿ ಮೂಲಪುರುಷರು ಗಂಡಳನಾಯಕರು ಹುಟ್ಟು ಹಾಕಿಸಿ ೧೫ ವರುಷ ರಾಜ್ಯ ಅನುಭವಿಸಿದುರು. ಗಂಡಳರಾಜರ ಮಕ್ಕಳು ಪೊನ್ನಪ ರಾಜರು ೨೦ ವರ್ಷ ರಾಜ್ಯ ಆಳಿದರು. ಪೆನ್ನಪ್ಪನಾಯಕರ

ಮಕ್ಕಳು ಪಾಪಳನಾಯಕರು ೧೭ ವರುಷ ರಾಜ್ಯವನ್ನಾಳಿದರು. ಪಾಪಳ್ಳಿ ನಾಯಕರ ಮಕ್ಕಳು ತಮ್ಮಯ್ಯ ರಾಜರು ೩೨ ವರುಷ ರಾಜ್ಯವಾಳಿದರು. ರಾಯಪ್ಪನಾಯಕ ಮಕ್ಕಳು ಬೊಮ್ಮಂತರಾಜರು ೩೬ ವರುಷ ರಾಜ್ಯವಾಳಿದರು. ಚಿಂಣ್ಣೈಯ್ಯ ರಾಜರ ಮಕ್ಕಳು ಜಟಿಂಗರಾಜರು ೪೬ ವರುಷ ರಾಜ್ಯ ಆಳಿದರು. ಜಟಿಂಗರಾಜರ ಮಕ್ಕಳು ೫ ವರ್ಷ ರಾಜ್ಯ ಆಳಿದರು. ಆ ಮೇಲೆ ನಳ ಸಂವತ್ಸರದ ಚಿತ್ರದುರ್ಗದ ಭರಮಣ್ಣ ನಾಯ್ಕರ ಮಕ್ಕಳು ಮದಕರಿನಾಯಕರು ಸೈನ್ಯ ಸಮೇತ ಬಂದು ಗುಡೇಕೋಟೆಯಲ್ಲಿ ಠಾಣಿ ಹೂಡಿದರು. ಒಂದೊಂದು ಸಂಶೋಧನೆಯಲ್ಲಿ ರಾಜರ ಆಡಳಿತವನ್ನು ರೂಪಿಸುತ್ತ ಹೋಗಿದ್ದಾರೆ.

ರಾಮಪ್ಪನಾಯಕ ನಂತರ ಆತನ ಹಿರಿಯ ಮಗನಾದ ಬೊಮ್ಮಂತರಾಜ ಅಧಿಕಾರಕ್ಕೆ ಬರುವನು. ನಂತರದಲ್ಲಿ ಕುಮಾರರಾಮನ ವಂಶಜರೆಂದು ಹೇಳಿಕೊಂಡು ಬೊಮ್ಮಂತರಾಜನು ಕೃಷ್ಣದೇವರಾಯನಲ್ಲಿ ಅರಿಕೆ ಮಾಡಿಕೊಳ್ಳುತ್ತಾನೆ. ಬೊಮ್ಮಂತರಾಜನಿಗೆ ಕೃಷ್ಣದೇವರಾಯನು ಏಳು ಸೀಮೆಗಳನ್ನು ದಯಪಾಲಿಸಿದನು. ವಿಜಯನಗರ ಸಾಮ್ರಾಜ್ಯದ ಅರಸರಿಗೆ ವಿಧೇಯನಾಗಿದ್ದನು ಆತ ಆದೋನಿಯ ನವಾಬನಿಗೆ ಪೊಗದಿಯನ್ನು ಸಲ್ಲಿಸಿ ಈ ಪ್ರದೇಶಗಳನ್ನು ಆಡಳಿತ ಮಾಡಿದನು.

ಬೊಮ್ಮಂತರಾಜನ ಮರಣದ ತರುವಾಯ ಆತನು ಗುಡೇಕೋಟೆ ಸಂಸ್ಥಾನದ ಆಧಿಕಾರ ಸ್ವೀಕರಿಸಿದನು. ಈತನು ಸಹ ತನ್ನ ತಂದೆಯಂತೆ ಆದೋನಿ ನವಾಬನಿಗೆಭೋಗದಿಯನ್ನು ಸಲ್ಲಿಸುತ್ತಿದ್ದನು. ಮೂರು ಸೀಮೆಗಳನ್ನು ಆಡಳಿತ ಮಾಡಿದ ನೆರೆಹೊರೆಯವರ ಉಪಟಳ ಈತನ ಅಧಿಕಾರಾವಧಿಯಲ್ಲಿ ಹೆಚ್ಚಾಗಿದ್ದುದರಿಂದ ರಾಜ್ಯದ ಸ್ಥಿತಿಗತಿಯಲ್ಲಿ ಯಾವುದೇ ರೀತಿಯ ಸುಧಾರಣೆಯಾಗಲಿಲ್ಲ.

ಚೆನ್ನಯ್ಯರಾಜನ ಮಗ ಜಟ್ಟಿಂಗರಾಜನು (ಕ್ರಿ.ಶ.೧೭೨೧ –೧೭೪೮) ರಲ್ಲಿ ಆಡಳಿತಮಾಡಿದನು, ಗೋಡೆಕೋಟೆ ಅರಸರು ಚಿತ್ರದುರ್ಗದ ಅರಸರ ಬಾಂಧವ್ಯ ಉತ್ತಮವಾಗಿತ್ತು. ಅದೇ ಜಟ್ಟಿಂಗರಾಜನಿಂದ ಈ ಎರಡು ಅರಸುಮನೆತನಗಳು ಯುದ್ಧವನ್ನು ಮಾಡಿದರು, "ಜಟ್ಟಿಂಗರಾಜನು ತಾನು ಚಿಕ್ಕ ವಯಸ್ಕರನಾದ ಸಂದರ್ಭದಲ್ಲಿ ಚಿತ್ರದುರ್ಗದ ರಾಣಿಯ ವಿವಾಹವಾಗಿದ್ದ ಕಾರಣಕ್ಕೆ ಆಕೆಯನ್ನು ತಿರಸ್ಕರಿಸಿದ"[೬೮]. ಬೇರೆ ಸಂಸ್ಥಾನದ ರಾಣಿಯರಾದ ಕನಕಗಿರಿ ನಾಗತಿ ಹಾಗೂ ಗುಡಿಬಂಡೆಯ ನಾಲ್ಕು ಜನಗಣತಿಯನ್ನು ವಿವಾಹವಾದ ಕಾರಣಕ್ಕೆ ಚಿತ್ರದುರ್ಗದ ನಾಯಕರು ಜಟ್ಟಿಂಗ ರಾಜನ ಮೇಲೆ ಯುದ್ಧ ಮಾಡುವರು ಎನ್ನುವ ಸಂದರ್ಭ ಅರಿತು ಜಟ್ಟಿಂಗರಾಜನು ತನ್ನ ನಾಗತಿಯರನ್ನು ಚಿತ್ರದುರ್ಗದ ಹೆಣ್ಣುಮಕ್ಕಳನ್ನು ಚಿಕ್ಕನಾಗತಿಯ ಆಶ್ರಯದಲ್ಲಿ ಗುಡೇಕೋಟೆಯೊಳಗೇ ಬಿಟ್ಟ, ತನ್ನ ಎರಡನೆಯ ಮಗನಾದ ರಾಮಪ್ಪನಾಯಕನೊಂದಿಗೆ ಹರಪನಹಳ್ಳಿಗೆ ಪಲಾಯನ ಮಾಡಿದನು. ಚಿಕ್ಕನಾಗತಿ ಚಿತ್ರದುರ್ಗದವರ ಆಶ್ರಯದಲ್ಲಿ ಇರಲು ಇಚ್ಛಿಸದೇ, ಇತರೆ ನಾಗತಿಯರೊಡನೆ ಹರಪನಹಳ್ಳಿಗೆ ಹೋಗಿ ಸೇರಿಕೊಂಡಳು.

೧. ರಾಮಪ್ಪನಾಯಕ

ಜಟ್ಟಂಗಿರಾಜನು ಮತ್ತು ರಾಮಪ್ಪ ನಾಯಕ ಚಿತ್ರದುರ್ಗದ ನಾಯಕರು ಗುಡೇಕೋಟೆ ಮುತ್ತಿಗೆ ಹಾಕಿದ ಕಾರಣ ಇಬ್ಬರೂ ಕನಕಗಿರಿಯಲ್ಲಿ ಅವಿತುಕೊಂಡಿದ್ದರು. ಅವರ ಸಹಾಯದಿಂದ ಕುಡುತಿನಿ, ಕೊಡೆಕಲ್ ಮೊದಲಾದ ಪ್ರದೇಶಗಳನ್ನು ಗೆದ್ದುಕೊಂಡು ಚಿತ್ರದುರ್ಗದವರ ಇತರ ಪ್ರದೇಶಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ಚಿತ್ರದುರ್ಗದ ಹಿರೇ ಮದಕರಿನಾಯಕನು ಮರಣ ಹೊಂದಲು ಗುಡೇಕೋಟೆ ಸಂಸ್ಥಾನವನ್ನು ರಾಮಪ್ಪನಾಯಕ ಸಂಪೂರ್ಣವಾಗಿ ವಶಪಡಿಸಿಕೊಂಡನು. ಹಿರೇಮದಕರಿ ನಾಯಕನ ಮಗ ಕಸ್ತೂರಿ ರಂಗಪ್ಪನಾಯಕರು ಪಟ್ಟಕ್ಕೆ ಬಂದನು. ಆಗ ಚಿತ್ರದುರ್ಗದ ಸುತ್ತಲು ಶತ್ರುಗಳ ಕಾಟವಿದ್ದುದರಿಂದ ಯುದ್ಧದಲ್ಲಿ ತೊಡಗದೆ ಇದ್ದನು. ರಾಮಪ್ಪನಾಯಕನು ಯಾವ ಯೋಚನೆಯೂ ಇಲ್ಲದೆ ಆಳುತ್ತಿದ್ದನು.

ಗುಡೇಕೋಟೆಯ ಆಗಲೇ ಪ್ರಬಲವಾದ ಗಿರಿದುರ್ಗ ನಿರ್ಮಾಣವಾಯಿತು. ಇವರ ನಂತರ ಗುಡೇಕೋಟೆ ಕ್ರಿ.ಶ. ೧೮ನೇ ಶತಮಾನದ ಕೊನೆಯಾರ್ಧದಲ್ಲಿ ಹೈದರಾಲಿಯು ಅದನ್ನು ತನ್ನ ವಶಪಡಿಸಿಕೊಳ್ಳುವನು. ನಂತರ ಟಿಪ್ಪು ಬ್ರಿಟಿಷರಿಂದ ಗೆದ್ದು ನಾಯಕರಿಗೆ ನೀಡಿದನಂತರ ನಿಜಾಮರಿಗೆ ಸೇರುವುದು ಕೆಲವು ದಿನ ನಂತರ ಗುಡೇಕೋಟೆ ನಿಜಾಮ ಬ್ರಿಟಿಷರಿಗೆ ಗುಡೇಕೋಟೆಯನ್ನು ಒಪ್ಪಿಸಿದನು. ಬ್ರಿಟಿಷರು ೧೫೦ ವರ್ಷಗಳ ಆಳ್ವಿಕೆಯ ನಂತರ ಅಂದರೆ ೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದಾದ ಮೇಲೆ ಗುಡೇಕೋಟೆ ಮೈಸೂರು ರಾಜ್ಯಕ್ಕೆ ಸೇರಿತು.



**ಬ್ರಿಟಿಷರು ಗುಡೇಕೋಟೆಯನ್ನು ೧೫೦ ಆಳ್ವಿಕೆ ಮಾಡಿದ ಸಂದರ್ಭದ ಘಟನೆಗಳು**

ಬ್ರಿಟಿಷರು ಈ ಮನೆತನದವರಿಗೆ ವಿಶ್ರಾಂತಿ ವೇತನ ನೀಡಿದರು. ಗುಡೇಕೋಟೆ ಸಂಪೂರ್ಣ ಬ್ರಿಟೀಷರ ಅಧಿಕಾರದಲ್ಲಿ ಇದ್ದ ಕಾರಣ ಅರಸನಿಗೆ ಮತ್ತು ರಾಣಿಯರಿಗೆ ಮಾಸಾಶಸನ ನೀಡಿದರು. "ಜಟ್ಟಂಗರಾಯ (೧೮೫೯-೬೦) ೭೪.೯ಪೈಸೆ, ಬೊಮ್ಮಂತರಾಜ (೧೯೬೦) ೭೪.೯ಪೈಸೆ, ಪಂಪಾಪತಿರಾಜ (೧೮೬೮) ರಲ್ಲಿ೯೩.೩೪ಪೈಸೆ, ವೆಂಕಮ್ಮನಾಗತಿ ಮತ್ತು ಕೇಶವಮ್ಮನಾಗತಿ (೧೮೮೯-೯೦)ರಲ್ಲಿ ೯೩.೩೪ಪೈಸೆ, ಕೇಶವಮ್ಮನಾಗತಿ(೧೯೨೯) ರಲ್ಲಿ ೧೫೯.೧೩೦ಪೈಸೆ ವಿಶ್ರಾಂತಿ ವೇತನ ನೀಡುತ್ತಿದ್ದರು ಎಂದು ತಿಳಿದು ಬರುತ್ತದೆ"[೯೬]. ಕ್ರಿ.ಶ. ೧೮೨೮ರಲ್ಲಿ ಬರಗಾಲದಲ್ಲಿ ಗುಡೇಕೋಟೆಯ ಬೊಮ್ಮಂತರಾಜ, ಈತನ ತಮ್ಮ ಲಿಂಗಪ್ಪ ಹಾಗೂ ಸಂಬಂಧಿ ರಾಮಪ್ಪಯ್ಯ ಎಂಬುವರು ೫೦೦ ಜನ ಬೇಡ ಸಮುದಾಯವನ್ನು ಸಂಘಟಿಸಿ ಬ್ರಿಟಿಷರ ಕಂದಾಯ ನೀತಿಯನ್ನು ವಿರೋಧಿಸಿದರು. ಆಗ ಅಲ್ಲಿಯ ಅಮಲ್ದಾರ ಹಡಗಲಿಯಿಂದ ಪೊಲೀಸರನ್ನು ಕರೆಯಿಸಿ ಈ ದಂಗೆಯನ್ನು ಹತ್ತಿಕ್ಕಿದರು.

## ಅಡಿಟಿಪ್ಪಣಿಗಳು

1) ಕರ್ನಾಟಕ ರಾಜ್ಯದ ಗ್ಯಾಜೆಟಿಯರ್, ಪು.೧೮೭.

2) ಅದೇ,ಪು.೨೬೧.

3) ಅದೇ, ಪು.೨೭೦.

4) ಅಮರೇಶ ಯತಗಲ್, ಚಾರಿತ್ರಿಕ ಸುರಪುರ ಅಧ್ಯಯನಾತ್ಮಕ ನೋಟಗಳು, ಪು.೦೪.

5) ಅದೇ, ಪು.೦೯.

6) ಅಮರೇಶ ಯತಗಲ್, ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು, ಪು.೫೦.

7) ಕಪಟರಾಳ ಕೃಷ್ಣರಾಯರು, ಸುರಪುರ ಸಂಸ್ಥಾನದ ಇತಿಹಾಸ, ಪು.೮೫.

8) ಅಮರೇಶ ಯತಗಲ್, ಪೂರ್ವೋಕ್ತ,ಪು.೫೨.

9) ಅಮರೇಶ ಯತಗಲ್, ಪೂರ್ವೋಕ್ತ,ಪು.೧೦.

10) ಅಮರೇಶ ಯತಗಲ್, ಪೂರ್ವೋಕ್ತ, ಪು.೫೭.

11) ಅದೇ,ಪು.೫೯.

12) ಕಪಟರಾಳ ಕೃಷ್ಣರಾಯರು, ಪೂರ್ವೋಕ್ತ, ಪು.೧೬.

13) ಅದೇ, ಪು.೧೮.

14) ವಸಂತ ಕುಷ್ಟಗಿ, ಸುರಪುರದ ದೊರೆ ವೆಂಕಟಪ್ಪನಾಯಕ, ಪು.೧೮೪.

15) ಅಮರೇಶ ಯತಗಲ್, ಪೂರ್ವೋಕ್ತ, ಪು.೨೧,

16) ಕಪಟರಾಳ ಕೃಷ್ಣರಾಯರು, ಪೂರ್ವೋಕ್ತ, ಪು.೩೧೪.

17) ಅದೇ, ಪು.೩೧೪.

18) ಮಹೇಶ್,ದೇವದುರ್ಗ ತಾಲ್ಲೂಕಿನ ಶಾಸನಗಳು ಮತ್ತು ಅವಶೇಷಗಳು, ಪು. ೯.

19) ಕೊಟ್ರೇಶ್ ಎಂ. ಕಲ್ಯಾಣ ಕರ್ನಾಟಕದ ಅರಸು ಮನೆತನಗಳು, ಪು.೧೫೧.

20) ಅದೇ, ಪು.೧೫೨.

21) ಅದೇ, ಪು.೧೫೩.

22) ಅದೇ, ಪು.೧೫೩.

23) ಅಮರೇಶ ಯತಗಲ್, ಪೂರ್ವೋಕ್ತ, ಪು.೮೫.

24) ಅದೇ, ಪು.೮೬.

25) ಅದೇ, ಪು.೮೭.

26) ಕೊಟ್ರೇಶ್ ಎಂ. ಪೂರ್ವೋಕ್ತ, ಪು.೧೪೮.

27) ಅಮರೇಶ ಯತಗಲ್, ಪೂರ್ವೋಕ್ತ, ಪು.೮೦.

28) ಕೊಟ್ರೇಶ್ ಎಂ. **ಪೂರ್ವೋಕ್ತ**, ಪು.೧೪೯.

29) ಅಮರೇಶ ಯತಗಲ್, **ಪೂರ್ವೋಕ್ತ**, ಪು.೮೧.

30) ಕೊಟ್ರೇಶ್ ಎಂ.**ಪೂರ್ವೋಕ್ತ**, ಪು.೧೫೦.

31) **ಅದೇ**,ಪು. ೧೪೩.

32) **ಅದೇ**,ಪು. ೧೪೪.

33) **ಅದೇ**,ಪು. ೧೪೪.

34) ಅಮರೇಶ ಯತಗಲ್, **ಪೂರ್ವೋಕ್ತ**, ಪು.೭೬.

35) ಕೊಟ್ರೇಶ್ ಎಂ. **ಪೂರ್ವೋಕ್ತ**, ಪು.೧೪೫.

36) ಅಮರೇಶ ಯತಗಲ್ **ಪೂರ್ವೋಕ್ತ**, ಪು.೭೭.

37) ಕೊಟ್ರೇಶ್ ಎಂ. **ಪೂರ್ವೋಕ್ತ**, ಪು.೧೪೬.

38) ಅಮರೇಶ ಯತಗಲ್, **ಪೂರ್ವೋಕ್ತ**, ಪು.೭೮.

39) **ಅದೇ**, ಪು.೭೯.

40) ಶರಣಬಸಪ್ಪ ಕೋಲ್ಕಾರ, **ವಿಜಯನಗರ ಹಂಪಿ ಪರಿಸರ**, ಪು.೩೫.

41) ಕೊಟ್ರೇಶ್ ಎಂ. **ಪೂರ್ವೋಕ್ತ**, ಪು. ೧೩೯.

42) ಅಮರೇಶ ಯತಗಲ್, **ಪೂರ್ವೋಕ್ತ**, ಅನುಬಂಧ–೨.

43) **ಅದೇ**, ಪು.೬೭.

44) **ಅದೇ**, ಪು.೬೯.

45) **ಅದೇ**, ಪು.೬೯.

46) ಶರಣಬಸಪ್ಪ ಕೋಲ್ಕಾರ, **ಪೂರ್ವೋಕ್ತ**, ಪು.೬೨.

47) ಅಮರೇಶ ಯತಗಲ್, **ಪೂರ್ವೋಕ್ತ**, ಪು.೭೧.

48) ಶರಣಬಸಪ್ಪ ಕೋಲ್ಕಾರ, **ಪೂರ್ವೋಕ್ತ**, ಪು.೬೩.

49) ಅಮರೇಶ ಯತಗಲ್, **ಪೂರ್ವೋಕ್ತ**, ಪು.೮೭.

50) ತಾರಿಹಳ್ಳಿ ಹನುಮಂತಪ್ಪ, **ಕನಕಗಿರಿ ನಾಯಕರು**, ಪು.೪೦.

51) ಅಮರೇಶ ಯತಗಲ್, **ಪೂರ್ವೋಕ್ತ**, ಪು.೮೮.

52) ಕೊಟ್ರೇಶ್ ಎಂ. **ಪೂರ್ವೋಕ್ತ**, ಪು.೧೦೯.

53) ತಾರಿಹಳ್ಳಿ ಹನುಮಂತಪ್ಪ, **ಪೂರ್ವೋಕ್ತ**, ಪು.೧೧೦.

54) **ಅದೇ**,ಪು.೧೧೧.

55) **ಅದೇ**,ಪು.೧೯.

56) ಕೊಟ್ರೇಶ್ ಎಂ. **ಪೂರ್ವೋಕ್ತ**,ಪು.೧೧೪.

57) ಕರಿಬಸಪ್ಪ ಎ. **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು**, ಪು.೮೯.

58) ಇವರ ಹೇಳಿಕೆ ಜರಿಮಲೆ ಸಿದ್ದಪ್ಪ ದೊರೆ.

59) ಕರಿಬಸಪ್ಪ ಎ. ಪೂರ್ವೋಕ್ತ, ಪು.೮೯.

60) ವಸಂತ ಕೃಷ್ಣಗಿ, ಹೈದರಾಬಾದ್ ಕರ್ನಾಟಕ ಕಣಜದಿಂದ, ಪು.೬೫.

61) ಕೊಟ್ರೇಶ್ ಎಂ. ಪೂರ್ವೋಕ್ತ, ಪು.೫೭.

62) ವಸಂತ ಕೃಷ್ಣಗಿ, ಪೂರ್ವೋಕ್ತ, ಪು.೭೦.

63) ಕೊಟ್ರೇಶ್ ಎಂ. ಪೂರ್ವೋಕ್ತ, ಪು.೫೮.

64) ಅದೇ, ಪು.೬೧.

65) ಕರಿಬಸಪ್ಪ ಎ. ಪೂರ್ವೋಕ್ತ, ಪು.೮೫.

66) ವಸಂತ ಕೃಷ್ಣಗಿ, ಪೂರ್ವೋಕ್ತ, ಪು.೬೫.

67) ಅಮರೇಶ ಯತಗಲ್, ಪೂರ್ವೋಕ್ತ, ಪು.೯೨.

68) ವಸಂತ ಕೃಷ್ಣಗಿ, ,ಪೂರ್ವೋಕ್ತ, ಪು.೬೪.

69) ಅಮರೇಶ ಯತಗಲ್, ಪೂರ್ವೋಕ್ತ, ಪು.೯೫.

# ಅಧ್ಯಾಯ : ಮೂರು

# ಕಲ್ಯಾಣ ಕರ್ನಾಟಕ ಆಡಳಿತದಲ್ಲಿ ನಾಯಕ ರಾಣಿಯರು

---

೩.೧. ಪಟ್ಟದ ರಾಣಿಯ ನೇಮಕ

೩.೨. ಪಟ್ಟದ ಅರಸಿಯರ ಕಾರ್ಯಗಳು

೩.೩. ನಾಯಕ ಸಂಸ್ಥಾನದ ರಾಣಿಯರ ಘೋಷಾ ಪದ್ಧತಿ

೩.೪. ನಾಯಕ ಸಂಸ್ಥಾನದ ರಾಣಿಯರ ಚಾರಿತ್ರಿಕ ಅಂಶಗಳು

೩.೪. ಆಡಳಿತ ಕ್ಷೇತ್ರದಲ್ಲಿ ನಾಯಕ ರಾಣಿಯರು

# ಅಧ್ಯಾಯ : ಮೂರು

## ಕಲ್ಯಾಣ ಕರ್ನಾಟಕ ಆಡಳಿತಕ್ಕೆ ರಾಣಿಯರ ಕೊಡುಗೆಗಳು

### ೩.೧. ಪಟ್ಟದ ಅರಸಿಯ ನೇಮಕ

ಯಾವುದೇ ಒಂದು ಸಂಸ್ಥಾನ, ರಾಜ್ಯ, ಸಾಮ್ರಾಜ್ಯಕ್ಕೆ ಅರಸರಿರುವಂತೆ ಅರಸಿಯರೂ ಇರುತ್ತಿದ್ದರು. ಅಂದು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬಹುಪತ್ನಿತ್ವ ಸಹಜವೆಂಬಂತೆ ಜಾರಿಯಲ್ಲಿತ್ತು. ಅದರಲ್ಲಿ ಮೊದಲನೆ ಹೆಂಡತಿ ಎಲ್ಲ ರೀತಿಯಲ್ಲಿಯೂ ಅರ್ಹತೆ ಹೊಂದಿದವಳು ಪಟ್ಟದರಸಿಯಾಗುತ್ತಿದ್ದಳು. ಇವಳಿಗಿರುವ ಅಧಿಕಾರ ಇತರೆ ಅರಸಿಯರಿಗೆ ಇರುತ್ತಿರಲಿಲ್ಲ. 'ಪಟ್ಟದರಸಿ' ಎನ್ನುವಲ್ಲಿ ಪಟ್ಟ ಮತ್ತು ಅರಸಿ ಎನ್ನುವ ಎರಡು ಪದಗಳು ಬಳಕೆಯಾಗಿವೆ. 'ಪಟ್ಟ' ಎಂದರೆ ಶುದ್ಧವಾದ, ಮಡಿಯಾದ ರೇಷ್ಮೆವಸ್ತ್ರ, ಸಿಂಹಾಸನ, ಅಧಿಕಾರ, ಪದವಿ ಎಂದು, 'ಅರಸ' ಎಂದರೆ ಅರಸನ ಪತ್ನಿ ಎಂದರ್ಥ. ರಾಣಿಯರನ್ನು ಸಾಮಾನ್ಯವಾಗಿ ಅರಸಿ, ಪಿರಿಯರಸಿ, ಪಟ್ಟಮಹಾದೇವಿ, ಅಗ್ರಸತಿ, ರಾಣಿ ಎಂದು ಕರೆಯಲಾಗುತ್ತಿದ್ದಿತು. ಪಟ್ಟಮಹಾದೇವಿ ಅಂದರೆ ಅರಸನ ಜೊತೆಯಲ್ಲಿ ಪಟ್ಟಕಟ್ಟಿಸಿಕೊಂಡ ರಾಣಿ 'ಪಟ್ಟಕಟ್ಟು' ಎಂದರೆ ಪಟ್ಟಂಗಟ್ಟು; ಅಧಿಕಾರ ವಹಿಸಿಕೊಡುವುದು, ಪಟ್ಟ ಎನ್ನುವುದಕ್ಕೆ ಅಧಿಕಾರ ಎಂಬ ಅರ್ಥವನ್ನು ನೀಡಬಹುದು. 'ಪಟ್ಟದರಿಸಿ' ಎಂದರೆ ಅಧಿಕಾರವುಳ್ಳ ಅರಸಿ ಎಂದು ಭಾವಿಸಬಹುದಾಗಿದೆ.

ಕರ್ನಾಟಕದ ನಾಯಕ ಸಂಸ್ಥಾನಗಳಲ್ಲಿ ಪಟ್ಟದ ರಾಣಿಯಾಗುವವಳು ಅರಸನಿಗೆ ಸಮಾನವಾದ ಅಂತಸ್ಥಿನ, ಇಲ್ಲವೆ ಗೌರವಯುತ ಮನೆತನದವಳಾರಗಿಬೇಕು, ವಿವೇಕವುಳ್ಳವಳು, ಕಲೆಯ ಜ್ಞಾನ ಅರಿತವಳು, ಧಾರ್ಮಿಕ ಸಹಿಷ್ಣುತೆಯುಳ್ಳವಳೂ ಆಗಿರಬೇಕಿತ್ತು. ಈ ಎಲ್ಲ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಲಾಗುತ್ತಿತ್ತು. ನಾಯಕ ಅರಸು ಮನೆತನದವರ ರಾಣಿ (ಹೆಂಡತಿ)ಯರಿಗೆ ನಾಗತಿಯರೆಂದು ಕರೆಯುತ್ತಿದ್ದರು. ಕೆಲವು ಅರಸನ ಉಪಪತ್ನಿಯರಿಗೆ ಸಹ ನಾಗತಿಯರು ಎಂದು ಕರೆಯುತ್ತಿದ್ದರು. ಅರಸುಮನೆತನಗಳು ಸುರಪುರ, ಗುಡಗುಂಟೆ, ದೇವದುರ್ಗ, ಗುಂತಗೋಳ, ಕನಕಗಿರಿ, ಜರಿಮಲೆ, ಗುಡೇಕೋಟೆ ಅರಸರ ಮಡದಿಯರಿಗೆ ಹೆಚ್ಚಾಗಿ ರಾಣಿಯರೆಂದೇ ಕರೆಯುವ ರೂಢಿಯಲ್ಲಿದ್ದಿತು. ಪಟ್ಟದರಿಸಿಗೆ ಮಕ್ಕಳಾಗದಿದ್ದ ಪಕ್ಷದಲ್ಲಿ ಪಟ್ಟದರಿಸಿಯ ಬದಲಿಗೆ ಮತ್ತೊಬ್ಬ ರಾಣಿಯನ್ನು ಪಟ್ಟಕ್ಕೆ ಕೂಡಿಸಲಾಗುತ್ತಿತ್ತು.

### ೩.೨. ಪಟ್ಟದರಿಸಿಯ ಕಾರ್ಯಗಳು

ಪಟ್ಟಕ್ಕೆ ಬರುವ ಮೊದಲು ಲಗ್ನವಾಗಿದ್ದರೂ ಕೂಡ ಪಟ್ಟದರಸನಿಗೆ ಉಪನಯನದ ಮರುದಿನ ವಿವಾಹ ಮಹೋತ್ಸವವನ್ನು ವಿಧಿಪೂರ್ವಕವಾಗಿ ನಡೆಸಲಾಗುತ್ತಿತ್ತು. ಈ ವಿವಾಹದಲ್ಲಿ

ಅರಸನ ಹಿರಿಯ ರಾಣಿಗೆ ಪಟ್ಟದರಸಿ ಸ್ಥಾನಮಾನ ದೊರಕುತ್ತಿತ್ತು. ಮೊದಲ ಶಾಸ್ತ್ರಪದ್ಧತಿಯಂತೆ ಪಟ್ಟದ ಹಿರಿಯ ರಾಣಿಯ ವಿವಾಹ ಕಾರ್ಯಕ್ರಮ ಮುಗಿಸಿಕೊಂಡ ನಂತರ ಇನ್ನುಳಿದ ರಾಣಿಯರೊಂದಿಗೆ ಅರಸನ ವಿವಾಹಶಾಸ್ತ್ರ ವಿಧಿಪೂರ್ವಕವಾಗಿ ಜರುಗುತ್ತಿತ್ತು.

ಪಟ್ಟದರಸಿ ರಾಜ್ಯಕಾರ್ಯಗಳಲ್ಲಿ ಭಾಗವಹಿಸುವ ಗುಣವುಳ್ಳವಳಾಗಿರುತ್ತಿದ್ದಲ್ಲದೆ ಮುಖ್ಯವಾದ ರಾಜತಂತ್ರಗಳಿಗೆ ಸಂಬಂಧಿಸಿದ ವಿಷಯಗಳನ್ನು ಹಾಗೂ ಪ್ರಮುಖ ಹಬ್ಬ-ಉತ್ಸವಗಳಿಗೆ ಸಂಬಂಧಿಸಿದ ವಿಷಯಗಳನ್ನು ಸ್ವತಃ ಅರಸನು ಪಟ್ಟದರಸಿಯರೊಂದಿಗೆ ಸಮಾಲೋಚಿಸುತ್ತಿದ್ದನು. ರಾಜ್ಯಕ್ಕೆ ಸಂಬಂಧಿಸಿದ ಕೆಲವು ಮಹತ್ವದ ಕಾರ್ಯಗಳಲ್ಲಿ ನೇರವಾಗಿ ಭಾಗವಹಿಸುವ ಹಕ್ಕು ಪಟ್ಟದರಿಸಿಗೆ ಇತ್ತು. ದತ್ತು ಸ್ವೀಕಾರದ ಸಂದರ್ಭದಲ್ಲಿ ಈಕೆಯ ಪಾತ್ರ ಪ್ರಮುಖವಾಗಿರುತ್ತಿತ್ತು. ಸುರಪುರದ ಗಡ್ಡಿಪಿಡ್ಡಿನಾಯಕನಿಗೆ ಆರುಜನ ಹೆಂಡಂದಿರಿದ್ದರೂ ಮಕ್ಕಳಾಗಿರಲಿಲ್ಲ. ಅಣ್ಣ ಗುಡಗುಂಟೆ ಸಂಸ್ಥಾನದ ಲಿಂಗನಾಯಕನ ಮಗನಾದ ಪಾಮನಾಯಕನನ್ನು ದತ್ತು ತೆಗೆದುಕೊಳ್ಳುವಲ್ಲಿ ಗಡ್ಡಿಪಿಡ್ಡಿನಾಯಕನ ಪಟ್ಟದ ರಾಣಿ ಅವ್ವಮ್ಮಳ ಪಾತ್ರ ಪ್ರಮುಖವಾಗಿತ್ತು. ಆನೆಗೊಂದಿ ಕುಪ್ಪಮ್ಮ ತನ್ನ ಗಂಡನ ಮರಣನಂತರ ತನ್ನ ತಮ್ಮನಾದ ಪಂಪಾಪತಿಯನ್ನು ದತ್ತು ತೆಗೆದುಕೊಂಡು ಆನೆಗೊಂದಿಯ ಆಡಳಿತವನ್ನೂ ಸಹ ನಡೆಸಿಕೊಂಡು ಪಟ್ಟದರಾಣಿಯ ಶ್ಲಾಘನೀಯವಾಗಿದೆ. ಪಟ್ಟದ ರಾಣಿಯು ಅರಸನು ಅನುಪಸ್ಥಿತಿಯಲ್ಲಿದ್ದಾಗ ರಾಜ್ಯವಾಳುವ ಅಧಿಕಾರವನ್ನು ಪಡೆದುಕೊಂಡಿದ್ದಳು. ಅಲ್ಲದೆ ಪಟ್ಟದರಸನ ನಂತರದ ಸ್ಥಾನ ಇವಳದಾಗಿತ್ತು. ಮತ್ತು ರಾಜ್ಯದ ಕೆಲವು ಭಾಗಗಳನ್ನು ಆಯ್ಕೆಮಾಡಿಕೊಂಡು ಆಡಳಿತ ನಡೆಸಬಹುದಾಗಿತ್ತು. ಈಕೆಯ ನಂತರದ ಸ್ಥಾನದಲ್ಲಿ ಮಹಾಪ್ರದಾನ, ದಂಡನಾಯಕ ಮುಂತಾದವರು ಆಡಳಿತ ನಡೆಸುತ್ತಿದ್ದರು. ಅಪ್ರಾಪ್ತ ವಯಸ್ಸಿನ (ಮಕ್ಕಳು- ಮೊಮ್ಮಕ್ಕಳು) ಅರಸು ಅಧಿಕಾರಕ್ಕೆ ಬಂದಾಗ ಅವರ ಸಹಭಾಗಿಯಾಗಿ ಪಟ್ಟದ ರಾಣಿಯರು ಆಡಳಿತವನ್ನು ಮುಂದುವರೆಸಿದ ನಿದರ್ಶನಗಳು ಕೆಲವು ನಾಯಕ ಅರಸುಮನೆತನಗಳಲ್ಲಿ ಕಾಣಬಹುದಾಗಿದ್ದು ಅವುಗಳಲ್ಲಿ ಸುರಪುರ, ಕನಕಗಿರಿ, ಗುಡಗುಂಟೆ, ಗುಂತಗೋಳ. ದೇವದುರ್ಗ, ಗುಡೇಕೋಟೆ, ಆನೆಗೊಂದಿ, ಜರಿಮಲೆ ಇತ್ಯಾದಿ ಅರಸುಮನೆತನದ ರಾಣಿಯರು ಪ್ರಮುಖ ಪಾತ್ರವಹಿಸುವರು.

**೩.೩. ನಾಯಕ ಸಂಸ್ಥಾನದ ರಾಣಿಯರ ಘೋಷಾ ಪದ್ಧತಿ**

ನಮ್ಮ ಭಾರತ ದೇಶದಲ್ಲಿ ಮಧ್ಯಕಾಲೀನ ವೇಳೆಗಾಗಲೇ ಮುಸ್ಲಿಂ ದಾಳಿ ಮತ್ತು ಆಳ್ವಿಕೆಯಿಂದಾಗಿ ಸಂಪೂರ್ಣವಾಗಿ ಸ್ತ್ರೀಯರು ತಮ್ಮೆಲ್ಲ ಹಕ್ಕುಬಾಧ್ಯತೆಗಳಿಂದಲೂ ದೂರ ಸರಿಯುವಂತಾಯಿತು. ಈ ಕಾರಣದಿಂದ ಸ್ತ್ರೀಯರ ಪಾಲಿಗಂತೂ 'ಅಂಧಕಾರ' ಯುಗವೇ ಆಗಿತ್ತೆನ್ನಲಾಗಿದೆ. ಪಿ.ಥಾಮಸ್ ಅವರು ತಿಳಿಸುವಂತೆ ಸ್ತ್ರೀಯರ ಸ್ವಾತಂತ್ರ್ಯವನ್ನು ಮೊಟಕುಗೊಳಿಸಲಾಯಿತು, ಶಾಸ್ತ್ರಗಳ ಬಗ್ಗೆ ಜ್ಞಾನ ಹೆಚ್ಚಿಸಿಕೊಳ್ಳುವುದರಲ್ಲಿ ಅವರ ಅಕ್ಷರಾಭ್ಯಾಸಕ್ಕೆ

ಅವಕಾಶವಿಲ್ಲವಾಯಿತು ಸ್ತ್ರೀಯರ ಅಂತಸ್ತು ಎಂಬುದು ಪುರುಷರ ಅನುಬಂಧವೆಂಬಂತಹ ಸ್ಥಿತಿಗೆ ಬಂದಿತು. ಈ ವೇಳೆಯಲ್ಲಿಯೇ ಪರದಾ ಪದ್ಧತಿ, ಬಾಲ್ಯವಿವಾಹ, ಸತಿಪದ್ಧತಿ, ವಿಧವಾ ಪುನರ್‌ವಿವಾಹ ನಿಷೇಧ, ದೇವದಾಸಿ ಪದ್ಧತಿ ಮೊದಲಾದ ಪಿಡುಗುಗಳು ಕಠಿಣವಾಗಿ ಆಚರಣೆಗೆ ಬಂದವು. ಇಂತಹ ಸಂದರ್ಭದಲ್ಲಿ ಹಿಂದೂ ಸಮಾಜಕ್ಕೆ ಅಂಟಿಕೊಂಡ ಬಹುದೊಡ್ಡ ಸಮಸ್ಯೆಗಳಾಗಿರುವುದನ್ನು ಸಾಮಾಜಿಕ ಸುಧಾರಕರು, ಧಾರ್ಮಿಕ ಸುಧಾರಕರ ಚಳುವಳಿಯಿಂದ ಕೆಲವು ಸಂಪ್ರದಾಯ ಕೊನೆಗೊಂಡವು ಪರಾದ ಪದ್ಧತಿ ಇನ್ನೂ ಹಾಗೆಯೇ ಉಳಿದು ಬಂದಿದೆ. ಮುಸ್ಲಿಂ ಮಹಿಳೆಯರಲ್ಲಿ ನಾಯಕ ಮನೆತನದಲ್ಲಿ ಅದರಲ್ಲಿಯೂ ನಾಯಕ ಸಂಸ್ಥಾನದ ರಾಣಿಯರು ಪೂರ್ವದಿಂದಲೂ ಘೋಷ (ಪಾರದ) ಪದ್ಧತಿಯನ್ನು ಸುತ್ತಾ ಬಂದಿದ್ದಾರೆ. ಆದ ಕಾರಣ ಶಿಕ್ಷಣವನ್ನು ರಾಣಿಯರಿಗೆ ಅರಮನೆ ಒಳಗೆ ನೀಡುತ್ತಿದ್ದರು. ಘೋಷ ಪದ್ಧತಿ ಇರುವುದರಿಂದ ಹೊರಗೆ ಪ್ರಯಾಣಕ್ಕೆ ಪಲ್ಲಕ್ಕಿಯಲ್ಲಿ ಹೋಗುವುದು, ಗಾಡಿ (ಕುದುರೆ ಗಾಡಿ, ಎತ್ತಿನಗಾಡಿ)ಯಲ್ಲಿ ಹೋಗುವ ಪದ್ಧತಿ ಇದೆ. ಇಂದಿನ ದಿನಮಾನಗಳಲ್ಲಿ ಅವರ ಸಂಸ್ಥಾನದ ಸುತ್ತ-ಮುತ್ತಲು ಇರುವ ಪ್ರದೇಶದ ಊರುಗಳಿಗೆ ಕಾರಿನಲ್ಲಿ ಪ್ರಯಾಣಿಸುವುದು ರೂಢಿಯಲ್ಲಿದೆ. ಸಾರ್ವಜನಿಕ ಸ್ಥಳಗಳಲ್ಲಿ ನಡೆದಾಡುವುದಿಲ್ಲ. ತಮ್ಮ ಹೆಣ್ಣು ಮಕ್ಕಳಿಗೆ ಹೆಚ್ಚಿನ ಶಿಕ್ಷಣ ಕೊಡಿಸಲೂ ಬೇರೆ ನಗರ ಪ್ರದೇಶದಲ್ಲಿ ಶಿಕ್ಷಣ ಅನಿವಾರ್ಯದಿಂದ ಕೂಡಿಸುವ ಕೆಲವು ಸಂಸ್ಥಾನದ ಮನೆತನದವು ಉನ್ನತ ಶಿಕ್ಷಣಕ್ಕೆ ಹೊರ ಪ್ರದೇಶಕ್ಕೆ ಕಳುಸುವುದಿಲ್ಲ ಕಾರಣ ಘೋಷ ಪದ್ಧತಿ ಇರುವುರಿಂದ ಘೋಷ ಪದ್ಧತಿಯಿಂದ ನಾಯಕ ಸಂಸ್ಥಾನದ ರಾಣಿಯರು ಕೆಲವು ಸಾಂದರ್ಭಿಕವಾಗಿ ಸಮಾರಂಭಗಳಲ್ಲಿ ಮಾತ್ರ ಭಾಗವಹಿಸುವರು ಸಂಬಂಧಿಕರ ವಿವಾಹ, ಮನೆದೇವರ ಉತ್ಸವಗಳು, ತಮ್ಮ ಸಂಸ್ಥಾನದ ಸಮಾರಂಭಗಳಲ್ಲಿ ಭಾಗವಹಿಸುವರು. ಈ ಘೋಷ ಪದ್ಧತಿಯೂ ಇಂದಿಗೂ ಒಂದು ಪವಿತ್ರ (ಮೌಲ್ಯವಾದ) ಆಚರಣೆ ಎಂದು ಭಾವಿಸಿ ಆಚರಿಸುತ್ತಿದ್ದಾರೆ.

### ೩.೪. ನಾಯಕ ಸಂಸ್ಥಾನದ ರಾಣಿಯರ ಚಾರಿತ್ರಿಕ ಅಂಶಗಳು

ಪೂರ್ವ ಕರ್ನಾಟಕದ ಪಾಳೆಗಾರರಿಗೆ ಬಹುಪತ್ನಿಯರನ್ನು ಹೊಂದುವುದು ವೈಭವದ ಸಂಕೇತವಾಗಿತ್ತು. ಯುದ್ಧದಲ್ಲಿ ಇತರ ರಾಜರನ್ನು ಜಯಸಿದಾಗ, ಸೋತ ನಾಯಕ ಸಂಸ್ಥಾನದ ಅರಸರು ತನ್ನ ರಾಜಕೀಯ ಭದ್ರತೆಗಾಗಿ ರಕ್ತಸಂಬಂಧವನ್ನು ಬೆಳೆಸುತ್ತಿದ್ದನು.ತನ್ನ ಮಗಳನ್ನೋ, ಸಹೋದರಿಯನ್ನೋ ಗೆದ್ದಾಗ ಗೆದ್ದ ಹೆಣ್ಣನ್ನೇ ರಾಜನಿಗೆ ಮದುವೆ ಮಾಡಿಕೊಡುತ್ತಿದ್ದನು. ಕೆಲವೊಮ್ಮೆ ಸಾಂಕೇತಿಕವಾಗಿ 'ನಾಗತಿಯರು' ಎಂದು ಹೇಳಿದ್ದಾರೆ, ಕೆಲವು ಶಾಸನಗಳಲ್ಲಿ ಅವರೆಲ್ಲರ ಹೆಸರುಗಳನ್ನು ಕೊಟ್ಟಿದೆ ಹಾಗೂ ಜನಪದ ಸಾಹಿತ್ಯದ ಮೂಲಕ, ದಾಖಲೆಯ ಮೂಲಕ, ಸ್ಮಾರಕಗಳ ಮೂಲಕ, ಸಾಮಾಜಿಕ, ಧಾರ್ಮಿಕ ಕಾರ್ಯಗಳ ಮೂಲಕ

ತಿಳಿಯಲಾಗಿದೆ.ಕೆಲವು ನಾಗತಿಯರು ರಾಜ್ಯಾಡಳಿತದಲ್ಲಿ ಪರೋಕ್ಷವಾಗಿಯೋ, ಅಪರೋಕ್ಷವಾಗಿಯೋ ಭಾಗವಹಿಸಿದ್ದಾರೆ.

- **ಸುರಪುರ ನಾಯಕ ಸಂಸ್ಥಾನದ ರಾಣಿಯರು**

ಸುರಪುರದ ಸಂಸ್ಥಾನದ ರಾಣಿಯರು ಐತಿಹಾಸಿಕವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವರು. ಅವರು ಅರಸ ಗಡ್ಡಿಪಿಡ್ಡನಾಯಕನ ಪಟ್ಟದರಾಣಿ ಅಮ್ಮವ್ವನಾಗತಿ ಎರಡನೆ ಪತ್ನಿ ಹನುಮವ್ವನಾಗತಿ ಇದ್ದರು. ೨ನೇ ಪಾಮನಾಯಕನ ಪತ್ನಿ ರಾಣಿ ತಿಮ್ಮವ್ವ, ೨ನೇ ಪಿಡ್ಡನಾಯಕ(೧೬೮೭-೧೭೨೬)ನ ಪತ್ನಿ ರಾಣಿಕೃಷ್ಣಮ್ಮ ಈಕೆಯೊಂದಿಗೆ ಇನ್ನು ಉಪಪತ್ನಿಯರು ಇರುವವರು ರಾಣಿಬಂಗಾರಮ್ಮ, ರಾಣಿಮುಗನಾಗತಿ, ರಾಣಿದೇವಮ್ಮನಾಗತಿ, ರಾಣಿ ಸತ್ಯಮ್ಮ, ಹಾಗೆಯೇ ೨ನೇ ಪಿಡ್ಡನಾಯಕ ಮುಸ್ಲಿಂ ಹೆಣ್ಣು ಮಗಳನ್ನು ಸಹ ವಿವಾಹವಾಗಿದ್ದರು. ಈತನಿಗೆ ಹೆಚ್ಚಿನ ಸಂಖ್ಯೆಯಲ್ಲಿ ವಿವಾಹವಾಗಿದ್ದನು. ಇಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ. ೧೭೭೩-೧೮೦೨)ನ ಪಟ್ಟದ ರಾಣಿಲಕ್ಷ್ಮಮ್ಮ, ಉಪಪತ್ನಿಯರಾದ ರಾಣಿ ಕಾಟಮ್ಮ, ರಾಣಿ ನರಸಿಂಗಮ್ಮ, ೪ನೇ ಪಾಮನಾಯಕ (೧೭೨೭-೧೭೪೧) ನ ಪತ್ನಿ ಪಟ್ಟದ ರಾಣಿ ರುಕ್ಕವ್ವ ಉಪಪತ್ನಿ ಬಂಗಾರಮ್ಮ, ೩ನೇ ಪಿಡ್ಡನಾಯಕ (ಕ್ರಿ.ಶ.೧೭೪೨-೧೭೪೬) ನ ಪತ್ನಿ ರಾಣಿ ಸತ್ಯಮ್ಮ ಈ ಅರಸನಿಗೆ ಒಬ್ಬಳೇ ಪತ್ನಿರುವಳು ಅಥವಾ ದೊರೆಕಿರುವ ಪತ್ನಿ ಹೆಸರು ಒಬ್ಬಳೇ. ಮೊಂಡಗೈ ವೆಂಕಟಪ್ಪನಾಯಕನ ಪಟ್ಟದ ಅರಸಿ ರಾಣಿ ರಂಗಮ್ಮ ಉಪಪತ್ನಿ ರಾಣಿ ಓಂಕಾರಮ್ಮ, ೧ನೇ ಕೃಷ್ಣಪ್ಪನಾಯಕ (ಮದನಗೋಪಾಲ)ನ ಪತ್ನಿ ರಾಣಿ ಚೆನ್ನಮ್ಮ. ಅರಸ ರಾಯಪ್ಪನಾಯಕ ಪತ್ನಿ ರಾಣಿಲಕ್ಷ್ಮಮ್ಮ, ೪ನೇ ಪಿಡ್ಡನಾಯಕ (ಕ್ರಿ.ಶ.೧೮೦೨-೧೮೧೮) ನ ಪತ್ನಿ ರಾಣಿ ವೆಂಕಮ್ಮ ಇನ್ನೊಂಬ ಪತ್ನಿ ರಾಣಿ ಅವ್ವಭೀಮವ್ವ, ೩ನೇ ಪಾಮನಾಯಕ (ರಾಘವಪಾಮನಾಯಕ)ನ ಪತ್ನಿ ರಾಣಿ ತಿಮ್ಮಾಂಭ, ದೇವೆಂದ್ರ ವೆಂಕಟಪ್ಪನಾಯಕ ಪತ್ನಿ ರಾಣಿ ರಂಗಮ್ಮ ಎರಡನೆ ಪತ್ನಿ ರಾಣಿ ಚೆನ್ನಮ್ಮ. ೨ನೇ ಕೃಷ್ಣಪ್ಪನಾಯಕ (ಕ್ರಿ.ಶ.೧೮೨೭-೧೮೪೨)ನ ಪತ್ನಿ ರಾಣಿ ಈಶ್ವರಮ್ಮ, ರಾಣಿಚುಂಡಿ ಪೆದ್ದಮ್ಮ, ರಾಣಿ ಲಕ್ಷ್ಮಮ್ಮ, ನಾಲ್ವಡಿ ವೆಂಕಟಪ್ಪ ನಾಯಕ (೧೪೪೨-೧೮೫೮)ನ ಪತ್ನಿ ರಾಣಿರಂಗಮ್ಮ ಪಟ್ಟದರಾಣಿ ಆಗಿದ್ದಳು. ಈಕೆ ೧೯೦೬ರಲ್ಲಿ ಮರಣ ಹೊಂದಿದಳು ರಾಣಿರಂಗಮ್ಮ ಪಟ್ಟದ ಅರಸಿ ನಂತರದಲ್ಲಿ ಸುರಪುರ ಸಂಸ್ಥಾನ ಸ್ವತಂತ್ರನಂತರ ಸರ್ಕಾರಕ್ಕೆ ಸೇರುತ್ತದೆ"[೧]. ರಾಜಕೀಯ ಕ್ಷೇತ್ರದಲ್ಲಿ ಸಿಗುವಂತಹ ರಾಣಿಯರು ಈ ರಾಣಿಯರು ರಾಜರ ಪತ್ನಿಯಾಗಿ ಹೆಸರನ್ನು ಗುರುತಿಸಲಾಗಿದೆ. ಕೆಲವು ರಾಣಿಯರು ಸಾಂದರ್ಭಿಕವಾಗಿ ಆಡಳಿತ ಮಾಡಿರುವ ಸಂದರ್ಭದಿಂದ ಗುರುತಿಸಲಾಗಿದೆ. ಈ ರಾಣಿಯರಲ್ಲಿ ಪ್ರಸಿದ್ಧಿ ಪಡೆದ ರಾಣಿ ಈಶ್ವರಮ್ಮನವರು ರಾಜಕೀಯವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಸ್ವಾತಂತ್ರ್ಯ ಹೋರಾಟದ ಮೂಲಕ ಈ ರಾಣಿಯನ್ನು ಗುರುತಿಸಲಾಗಿದೆ. ಕೊನೆಯ ರಾಣಿರಂಗಮ್ಮನವರು ಇವರ ಮೂಲಕ ಮಗನ ಮೂಲಕ ಸುರಪುರ ಸಂಸ್ಥಾನ

ಬೆಳೆಯುತ್ತದೆ. ರಾಣಿರಂಗಮ್ಮ ಕೃಷ್ಣಪ್ಪನಾಯಕ (ಕ್ರಿ.ಶ.೧೯೫೨ರಲ್ಲಿ ನಿಧನವಾದನು)ಇವರ ನಂತರ ತಮ್ಮ ಮಕ್ಕಳಾದ ರಾಜಾ ಪಿಡ್ಡನಾಯಕ ಮತ್ತು ಬ್ಯಾರಿಸ್ಟಲ್ ರಾಜಾ ವೆಂಕಟಪ್ಪನಾಯಕ ದೊರೆಯ ಪಟ್ಟಕ್ಕೆ ರಾಜಾಪಿಡ್ಡನಾಯಕ ಪಡೆದುಕೊಂಡರು ಇವರ ಪತ್ನಿ ರಾಣಿ ತಾರಮ್ಮ ಈ ದಂಪತಿ ಮಗ ರಾಜಾವೆಂಕಪಟ್ಟ ತಾತಾ ಹಿರಿಯ ಪುತ್ರ ಇವರ ಪತ್ನಿ ರಾಣಿ ಹೇಮಾವತಿ ಸುರಪುರ ಸಂಸ್ಥಾನದವರು (ಶಿಕ್ಷಣ ಪಿ.ಯು.ಸಿ) ಇವರು ಮೂಲ ಮನೆತನ ಸರ್‌ಸೌಬತ್ ಸರ್ದಾರ್ ಮನೆತನದ ಹೆಣ್ಣು ಮಗಳು ಈಕೆ ಸುರಪುರ ಸಂಸ್ಥಾನಕ್ಕೆ ಬಂದ ಸಮಯದಲ್ಲಿ ಸುರಪುರ ಸಂಸ್ಥಾನವು ರಾಜಕೀಯದಲ್ಲಿ ಮತ್ತು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿ ಇತ್ತು ಎಂದು ಹೇಳಲಾಗಿದೆ. ಸುರಪುರ ಸಂಸ್ಥಾನವನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ವಹಿಸಿದರು. ರಾಣಿ ಹೇಮಾವತಿಯವರು ಸಂಸ್ಥಾನದ ಜವಾಬ್ಧಾರಿಯನ್ನು ವಹಿಸಿಕೊಂಡರೆ, ಅರಸರು ರಾಜಕೀಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಗಂಡನಿಗೆ ಸಹಕರಿಸುತ್ತ. ಕೆಲವು ಬರಿ ಸಂಸ್ಥಾನದ ವಿಚಾರಗಳಲ್ಲಿ ಸಲಹೆ ಸೂಚನೆ ನೀಡುವುದು ಅವರ ಪ್ರಮುಖ ಕರ್ತವ್ಯವಾಗಿತ್ತು. ರಾಜಾ ವೆಂಕಟಪ್ಪ ತಾತಾನವರು ೨೦೧೭ರಲ್ಲಿ ಮರಣದ ನಂತರ ಸಂಪೂರ್ಣವಾಗಿ ಧಾರ್ಮಿಕ ಆಚರಣೆಗಳು. ಸಾಮಾಜಿಕ ಕಾರ್ಯಗಳನ್ನು ಇವರ ಮಾರ್ಗದರ್ಶನದಲ್ಲಿ ತಮ್ಮ ಮಕ್ಕಳಾದ ರಾಜಾಕೃಷ್ಣಪ್ಪನಾಯಕ ಪತ್ನಿ ರಾಣಿ ಅನುರಾಧ (ಬಿಕಾಂ) ಈಕೆ ತವರುಮನೆ ಆಂಧ್ರಪ್ರದೇಶದ ಚುಂಡಿ ಸಂಸ್ಥಾನದ ಹೆಣ್ಣುಮಗಳು, ಎರಡನೆ ಮಗ ರಾಜಾ ಲಕ್ಷ್ಮಣನಾಯಕ ಪತ್ನಿ ರಾಣಿ ತಾರಮ್ಮ ಇವರ ತವರುಮನೆ ಚುಂಡಿ ಸಂಸ್ಥಾನದವರು ಸುರಪುರ ಸಂಸ್ಥಾನಕ್ಕೆ ಸೊಸೆಯಾಗಿ ಬಂದವರು ಏಂಟು ತಲೆಮಾರು ಚುಂಡಿ ಮನೆತನದ ಹೆಣ್ಣು ಮಕ್ಕಳನ್ನು ಸುರಪುರ ಸಂಸ್ಥಾನದ ಸೊಸೆಯಾಗಿ ಬಂದಿರುವರು.

**೧. ಅಮ್ಮವ್ವ ನಾಗತಿ ಹಾಗೂ ಹನುಮವ್ವ ನಾಗತಿ**

ಸುರಪುರ ನಾಯಕ ಸಂಸ್ಥಾನದಲ್ಲಿ ಬರುವ ರಾಣಿಯರು ಕೇಂದ್ರಸ್ಥಾನಕ್ಕೆ ಏರಿ ದೇವಪುರದ ಗಡಿಯಲ್ಲಿ ಆಡಳಿತ ಮಾಡುತ್ತಿದ್ದ ಸುರಪುರ ನಾಯಕ ಸಂಸ್ಥಾನದ ಅರಸನಾದ ಗಡ್ಡಿಪಿಡ್ಡನಾಯಕನ ಹೆಂಡತಿಯರು ರಾಣಿ ಅಮ್ಮವ್ವ ನಾಗತಿ, ರಾಣಿ ಹನುಮವ್ವ ನಾಗತಿಯರು ಅರಸನಿಗೆ ಪತ್ನಿಯರು.ಈ ಅರಸನಿಗೆ ಮಕ್ಕಳಿಲ್ಲದ ಕಾರಣಕ್ಕಾಗಿ ಹರಸಂಗಿ ಪಾಮನಾಯಕನನ್ನು ದತ್ತುಮಗನಾಗಿ ತೆಗೆದುಕೊಂಡರು. ಪಾಮನಾಯಕನ ತಂದೆ ಗಡ್ಡಿಲಿಂಗನಾಯಕನು ಕೇಂದ್ರಸ್ಥಾನವಾದ ಗುಡಗುಂಟಿ ಸಂಸ್ಥಾನದ ಆಳ್ವಿಕೆಯನ್ನು ಮಾಡುತ್ತಿದ್ದನು.

**೨. ೨ನೇ ಪಿಡ್ಡನಾಯಕನ ರಾಣಿಯರು(೧೬೮೭-೧೭೨೬)**

೨ನೇ ಪಿಡ್ಡ ನಾಯಕನಿಗೆ ಆರು ಜನ ಪತ್ನಿಯರು. ಅವರುಗಳೆಂದರೆ ರಾಣಿ ಕೃಷ್ಣಮ್ಮ, ರಾಣಿ ಬಂಗಾರಮ್ಮ, ರಾಣಿಮ್ಮ, ರಾಣಿ ರಂಗಮ್ಮ, ರಾಣಿ ಮಂಗನಾಗತಿ, ರಾಣಿ ದೇವಮ್ಮ ನಾಗತಿ.

ಇವರಲ್ಲಿ ರಾಣಿ ಮಂಗನಾಗತಿ ಮತ್ತು ದೇವಮ್ಮ ನಾಗತಿಗೆ ಮಕ್ಕಳಿಲ್ಲ ಇನ್ನು ನಾಲ್ಕು ಜನ ರಾಣಿಯರಿಗೆ ಮಕ್ಕಳು ಇರುವರು.

**ರುಕ್ಕವ್ವ ಹಾಗೂ ಬಂಗಾರಮ್ಮ**

೪ನೇ ಪಾಮನಾಯಕ(೧೭೭೭-೧೭೪೧)ನ ಹೆಂಡತಿಯರಾದ ರುಕ್ಕವ್ವ ಹಾಗೂ ಬಂಗಾರಮ್ಮ ಇವರು ಸುರಪುರ ಸಂಸ್ಥಾನವನ್ನು ಆಡಳಿತ ಮಾಡಿರುವರು. ಈತನ ಪತ್ನಿಯರಾದ ರಾಣಿ ರುಕ್ಕವ್ವ, ರಾಣಿ ಬಂಗಾರಮ್ಮ.ಇವರಲ್ಲಿ ರಾಣಿ ಬಂಗಾರಮ್ಮನಿಗೆ ಮಕ್ಕಳಾದ ೩ನೇ ಪಿಡ್ಡನಾಯಕ ೧ನೇ ವೆಂಕಟಪ್ಪನಾಯಕ ಎಂದು ತಿಳಿದುಬರುತ್ತದೆ. ರಾಣಿ ರುಕ್ಮವ್ವನಿಗೆ ಮಕ್ಕಳಿರಲಿಲ್ಲ.

**ರಾಣಿ ಸತ್ಯಮ್ಮ**

ಸುರಪುರ ನಾಯಕ ಸಂಸ್ಥಾನದ ಅರಸ ೩ನೇ ಪಿಡ್ಡನಾಯಕನ ಪತ್ನಿ ರಾಣಿ ಸತ್ಯಮ್ಮ ಆಗಿದ್ದಳು. "೩ನೇ ಪಿಡ್ಡನಾಯಕನು ಸುರಪುರ ಸಂಸ್ಥಾನದಲ್ಲಿಯೇ ಅತ್ಯಂತ ಅಸಮರ್ಥ ಆರಸನಾಗಿದ್ದನು. ಇವನು ೧೭೪೬ರಲ್ಲಿ ಮರಣ ಹೊಂದಿದನು.ತದ ನಂತರ ಈತನ ತಮ್ಮನಾದ ಮೊಂಡಗೈ ವೆಂಕಟಪ್ಪನಾಯಕನು ಕ್ರಿ.ಶ.೧೭೪೬ರಲ್ಲಿ ಸಿಂಹಾಸನವೇರಿದನು"[೨]. ಇಲ್ಲಿ ರಾಣಿ ಸತ್ಯಮ್ಮಳ ಗಂಡ ಮರಣದ ನಂತರ ತನಗೆ ಆಡಳಿತ ನಿರ್ವಹಣೆಗೆ ಅವಕಾಶ ಕೊಟ್ಟಿಲ್ಲದ ಕಾರಣ ೩ನೇ ಪಿಡ್ಡನಾಯಕ ಅಸಮರ್ಥ ಅರಸನಾದ್ದರಿಂದ ಮತ್ತು ಇವರಿಗೆ ಮಕ್ಕಳಿಲ್ಲದ ಕಾರಣಕ್ಕಾಗಿ. ರಾಣಿ ಸತ್ಯಮ್ಮಳಿಗೆ ಆಡಳಿತ ನಿರ್ವಹಣೆ ಮಾಡಲು ನೀಡಲಿಲ್ಲ.

**ರಾಣಿ ತಿಮ್ಮವ್ವ**

"ಈಕೆ ಸುರಪುರದ ಮುಮ್ಮಡಿ ಪಾಮನಾಯಕ(ಕ್ರಿ.ಶ.೧೭೫೦ ರಿಂದ ೧೭೬೩)ನ ಪತ್ನಿ ರಾಣಿ ತಿಮ್ಮವ್ವ ಇವಳು ದೇವದುರ್ಗದ ಅರಸ ಕಿಲಚನಾಯಕನ ಮಗಳು"[೩]. ಸುರಪುರ ಅರಸರಿಗೂ ಮತ್ತು ದೇವದುರ್ಗದ ಅರಸರಿಗೂ ಸಂಬಂಧ ಸರಿ ಇಲ್ಲದ ಕಾರಣ ಪದೇ ಪದೇ ಯುದ್ಧಗಳು ನಡೆಯುತ್ತಿರುವುದರಿಂದ ಇವರ ಮಧ್ಯೆ ಉತ್ತಮ ಬಾಂಧವ್ಯ ಬೆಳೆಯುತ್ತವೆ ಎಂಬ ದೃಷ್ಟಿಯಿಂದ ಕಿಲಚನಾಯಕನು ಮುಮ್ಮಡಿ ಪಾಮನಾಯಕನಿಂದ ಸೋತ ಅರಸ ರಾಜಕೀಯ ಭದ್ರತೆಗಾಗಿ ರಕ್ತಸಂಬಂಧವನ್ನು ಬೆಳೆಸಿದನು. ಆದರೆ ಇಲ್ಲಿ ಸ್ವ ಇಚ್ಛೆಯಿಂದ ಅಥವಾ ಸ್ತ್ರೀಯರು(ರಾಣಿಯ) ಒಪ್ಪಿಗೆಯಿಂದಾಗಲಿ ವಿವಾಹಕ್ಕೆ ಅವಕಾಶವಿಲ್ಲ ಎಂದು ತಿಳಿಯಲಾಗುತ್ತದೆ. ಈ ವಿವಾಹದ ನಂತರ ಅರಸ ಕಿಲಚನಾಯಕನು ಹಸರಂಗಿ ಪಾಮನಾಯಕನಿಗೆ ದೇವದುರ್ಗ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶವನ್ನು ಶತ್ರುಗಳಿಂದ ರಕ್ಷಿಸಲು ಈ ಪ್ರದೇಶಗಳನ್ನು ನೀಡಿದನು. ತನ್ನ ಆಡಳಿತದ ಅವಧಿಯಲ್ಲಿ ಉತ್ತಮ ರೀತಿಯಲ್ಲಿ ಆಡಳಿತ ನಡೆಸಿದನು.

- **ಜರಿಮಲೆ ನಾಯಕ ಸಂಸ್ಥಾನದ ರಾಣಿಯರು**

ಯಾವುದೇ ರಾಜಮನೆತನದ ಮೂಲವನ್ನು ಹುಡುಕುವುದು ಇತಿಹಾಸಕಾರರಿಗೆ ಒಂದು ಕುತೂಹಲಕಾರಿ ವಿಷಯವಾಗಿರುತ್ತದೆ. ಪ್ರಸಿದ್ಧ ರಾಜಮನೆತನಗಳ ಮೂಲವನ್ನು ಕೆದಕುವ(ಸಂಶೋಧನೆಯ)ಮೂಲಕ ಪರಿಶೀಲಿಸಿ ನಮಗೆಕೆಲವು ಸಾಮಂತ ಅರಸರ ಬಗ್ಗೆ ಸಂಪೂರ್ಣವಾಗಿ ತಿಳಿಯಲು ಕಷ್ಟ ಸಾಧ್ಯ. ವಿಶೇಷವಾಗಿ ಸಾಧನೆ ಮಾಡಿದ ಹಾಗೂ ಸ್ವತಂತ್ರವಾಗಿ ಆಡಳಿತ ಮಾಡಲು ಪ್ರಯತ್ನಿಸಿದ ಅರಸ ಯುದ್ಧದ ಸಂಗತಿಯಿಂದ ತಿಳಿಯಬಹುದು. ಉದಾಹರಣೆಗೆ ಜರಿಮಲೆ ಅರಸರಲ್ಲಿ ಭೂಮಿರಾಜ ಅತ್ಯಂತ ಪ್ರತಿಭಾನ್ವಿತ ಹಾಗೂ ಸಾಹಸಿ. "ವಿಜಾಪುರದ ಬಾದ್‌ಷಹನ ಆಸ್ಥಾನದಲ್ಲಿ ಕುದುರೆ ಪಳಗಿಸಿ ಸವಾರಿಮಾಡಿ ಪ್ರತಿಭೆಯನ್ನು ತೋರಿಸಿದ ಅದಕ್ಕೆ ಸೈನ್ಯ ಮತ್ತು ಅಶ್ವದಳಕ್ಕೆ ನೇಮಕ ಮಾಡಿ 'ಜುಮ್ಮೇದಾರ್ ಗುಡಯ್ಯ ಜರಿಮಲ್ಲ' ಎಂದು ಬಿರುದು ನೀಡಿದನು. ಈ ರೀತಿಯಲ್ಲಿ ಹೆಸರುಗಳು ಉಲ್ಲೇಖವಾಗಿದೆ"[೪]. ಹಾಗೆಯೇ ಜರಿಮಲೆ ರಾಣಿಯರ ವಿವರಗಳು ಸಂಗ್ರಹಿಸಲು ಕಷ್ಟಕರವಾಗಿದೆ. ವಿವಾಹ ಸಂಬಂಧಗಳು ಬೆಲೆಸಿರುವ ವೇಳೆ, ಯಾರ ಸಂಸ್ಥಾನದಿಂದ ಯಾರ ಸಂಸ್ಥಾನಕ್ಕೆ ಅಥವಾ ಯಾರ ಅರಸನ ಮಗಳನ್ನೋ ಸಹೋದರಿಯನ್ನೋ ಈ ಅರಸನಿಗೆ ವಿವಾಹ ಮಾಡಿಕೊಟ್ಟಿರುವುದು ಎಂಬುದರ ಬಗ್ಗೆ ತಿಳಿದುಬರುವ ಸಂಗತಿ. ಅರಸನ ಹೆಸರೋ, ಸಂಸ್ಥಾನದ ಹೆಸರೋ ಬರುವುದು ಸ್ತ್ರೀಯ(ರಾಣಿಯ) ಹೆಸರು ಬರುವುದು ತುಂಬ ವಿರಳವಾಗಿದೆ.ನನ್ನ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಬೆಳಕಿಗೆ ಬಂದ ನಂತರದ ರಾಣಿಯರು ಮತ್ತು ಅವರ ಬದುಕಿನ ಚಿತ್ರಣ ಈ ರೀತಿ ಇದೆ.

"ಸಣ್ಣ ಸಿದ್ದಪ್ಪನಾಯಕ ಈತನ ಪತ್ನಿ ರಾಣಿ ಚಿಕ್ಕಮ್ಮ ಇವರು ಇಮ್ಮಡಿ ವೆಂಕಟಪ್ಪನಾಯಕನ ತಂದೆ ಮತ್ತು ತಾಯಿ. ರಾಣಿ ಚಿಕ್ಕಮ್ಮನವರ ಕಾಲಕ್ಕೆ ಜರಿಮಲೆ ಸಂಸ್ಥಾನವು ಬಹಳ ಆರ್ಥಿಕವಾಗಿ ನಷ್ಟವಾಗಿತ್ತು. ಒಬ್ಬನೇ ಮಗನಾದ ಇಮ್ಮಡಿ ವೆಂಟಕಪ್ಪನಾಯಕ ಈತನ ಪತ್ನಿ ರಾಣಿ ಧರ್ಮವತಮ್ಮ. ತವರು ಮನೆ ಚಿತ್ರದುರ್ಗ ಪಾಳೇಗಾರರ ಮನೆತನದ ಮಗಳಾಗಿದ್ದಳು. ರಾಣಿಯಾಗಿ ಮೆರೆಯಬೇಕಿದ್ದ ಧರ್ಮವತಮ್ಮ ಗಂಡ ಇಮ್ಮಡಿ ವೆಂಕಟಪ್ಪನಾಯಕ ೧೯೮೦ರಲ್ಲಿ ಇದ್ದಾಗ ತಮ್ಮ ಸರ್ಕಾರದಿಂದ ರಾಣಿಯರಿಗೆ ಮಾಸಾಶನ ನೀಡುತ್ತಿದ್ದರು. ತಮಗೆ ಇದ್ದ ಜಮೀನು ಮಳೆಯಾಧಾರಿತವಾಗಿದೆ. ಅದರಲ್ಲಿ ಅವರ ಜೀವನ ಮಾಡಬೇಕು. ಆದರೆ ಈ ವಂಶಸ್ಥರಿಂದ ಆಸ್ತಿ, ಸಂಪತ್ತು, ಉಳಿಸಿಕೊಂಡಿಲ್ಲ ಎಂಬುದಾಗಿ ಇಮ್ಮಡಿ ಸಿದ್ದಪ್ಪನಾಯಕರನ್ನು ಕೇಳಿದರೆ ಪೂರ್ವ ರಾಜರಾಗಿದ್ದರೂ ಅನಕ್ಷರಸ್ಥರಾಗಿದ್ದರು. ಅಧಿಕಾರಿಗಳು ಅನಕ್ಷರತೆಯನ್ನು ದುರ್ಬಳಕೆ ಮಾಡಿಕೊಂಡು ಆಸ್ತಿ, ಸಂಪತ್ತು ಲೂಟಿ ಮಾಡಿದ್ದಾರೆಂದು ಅದಕ್ಕೆ ಅರಸು ಮನೆತನ ಆರ್ಥಿಕವಾಗಿ ಸಂಕಷ್ಟದಲ್ಲಿ ಇದೆ. ಇದರಲ್ಲಿಯು ರಾಣಿ ಧರ್ಮವತಮ್ಮ ಪಾಲನೆ ಪೋಷಣೆಯೊಂದಿಗೆ ಅರಸು ಮನೆತನದ ಧಾರ್ಮಿಕ ಕಾರ್ಯಗಳಿಗೆ ಈ ವಂಶಸ್ಥರಿಂದಲೇ ಹಣ ಕೊಡಲಾಗುತ್ತಿದ್ದು, ರಾಣಿ

ಧರ್ಮವತಮ್ಮ ಗಂಡನ ಮರಣ ನಂತರ ಸಹ ಅವರು ಪೋಷದಲ್ಲಿ ಇದ್ದು ಕಾರ್ಯ ಕೆಲಸವನ್ನು ಆ ಸಂಸ್ಥಾನದ ಆಡಳಿತ ವೈಖರಿ ಮುಂದುವರಿಸಿದರು"[೫]. "ಪ್ರಮುಖವಾಗಿ ಕಂಡುಬರುವುದು ಬ್ರಿಟಿಷರು ಆಯುಧಗಳ ನಿಷೇಧ ಕಾಯ್ದೆ ಬಂದು ಆಯುಧಗಳನ್ನು ತರಲು ಬ್ರಿಟಿಷರು ಜರಿಮಲೆಗೆ ಬರುವರು ಎಂಬುವುದನ್ನು ಅರಿತ ರಾಣಿ ಧರ್ಮವತಮ್ಮ ತನ್ನ ತವರು ಮನೆ ಚಳ್ಳಕೆರೆಗೆ ಸಾಗಿಸಿದಳು.ಆದರೂ ಬ್ರಿಟಿಷರು ಚಳ್ಳಕೆರೆಗೆ ಹೋಗಿ ರಾಣಿ ತವರಮನೆಗೆ ಹೊಕ್ಕು ಆಯುಧಗಳನ್ನು ತೆಗೆದುಕೊಂಡು ಹೋಗಲು ಪ್ರಯತ್ನಿಸಿದರು.ಆಗ ರಾಣಿ ಧರ್ಮವತಮ್ಮ ತನ್ನ ತಾಯಿ ಇಬ್ಬರು ಸೇರಿ ಅಡ್ಡ ನಿಂತು ತಮ್ಮ ಪ್ರಾಣವನ್ನು ಪಣವಾಗಿಟ್ಟು ಆಯುಧಗಳನ್ನು ಉಳಿಸಿಕೊಂಡರು. ಅವುಗಳು ಇಂದಿಗೂ ಜರಿಮಲೆ ದೊರೆಗಳ ಮನೆಯಲ್ಲಿವೆ"[೬]. ಹೀಗೆ ತಮ್ಮ ಜೀವನ ಸಾಗಿಸಿದ ರಾಣಿ ಕಾಲ ಕಳೆದಂತೆ ತನ್ನ ಮಕ್ಕಳು ಮೊದಲನೆಯ ಮಗ ಚಂದ್ರಶೇಖರನಾಯಕ, ಎರಡನೆಯ ಮಗ ಇಮ್ಮಡಿ ಸಿದ್ಧಪ್ಪನಾಯಕ ಈತನಿಗೆ ದೊರೆಯ ಪಟ್ಟ ಕಟ್ಟಲಾಗಿದೆ. ಇವರು ರಾಣಿ ಮತ್ತು ಮಕ್ಕಳು ಚಿಕ್ಕ ಚಪ್ಪರದ ಮನೆಯೊಂದರಲ್ಲಿ ಜೀವನ ಸಾಗಿಸಿದ್ದರು.ಹಿರಿಯ ಮಗ ಚಂದ್ರಶೇಖರನಾಯಕ ತನ್ನ ಪತ್ನಿ ಇವರಿಗೆ ಮಕ್ಕಳಿಲ್ಲ. ಅಂದರೆ ಇಮ್ಮಡಿ ಸಿದ್ದಪ್ಪನಾಯಕ ಪತ್ನಿ ರಾಣಿ ಸಾವಿತ್ರಮ್ಮ ಇವರು ೧೭.೦೮.೨೦೧೫ರಲ್ಲಿ ಮರಣ ಹೊಂದಿದ್ದರು.ಇವರಿಗೆ ಮೂರು ಜನ ಹೆಣ್ಣುಮಕ್ಕಳು ಒಂದು ಗಂಡು ಮಗ ಶಶಿಧರ ನಾಯಕ ಇವರಿಗೆ ಇನ್ನು ವಿವಾಹವಾಗಿಲ್ಲ. ಹೆಣ್ಣು ಮಕ್ಕಳಿಗೆ ವಿವಾಹವಾಗಿದೆ.ಜರಿಮಲೆ ಸಂಸ್ಥಾನದಲ್ಲಿ ರಾಣಿಯರು ಶಿಕ್ಷಣ ಪಡೆದಿದ್ದರು.ರಾಣಿ ಧರ್ಮವತಮ್ಮ ಎಸ್.ಎಸ್.ಎಲ್.ಸಿ ಶಿಕ್ಷಣಪಡೆದರೆ, ರಾಣಿ ಸಾವಿತ್ರಮ್ಮ ಪಿ.ಯು.ಸಿ.ಶಿಕ್ಷಣ ಪಡೆದಿದ್ದರು.

ರಾಣಿಯರು ವಿಶ್ರಾಂತಿ ಸಮಯದಲ್ಲಿ ಸಾಂಸ್ಕೃತಿಕ ಚಟುವಟಿಕೆಯಲ್ಲಿ ತೊಡಗುತ್ತಾರೆ ಎನ್ನುವುದಕ್ಕೆ ನಿದರ್ಶನ ರಾಣಿ ಧರ್ಮವತಮ್ಮ. ತಾವೇ ಸ್ವತಃ ಕೈ ಕಸೂತಿಯಿಂದ ಮಾಡಿರುವ ಚಿತ್ರವನ್ನು ಇಂದಿಗೂ ಭದ್ರವಾಗಿ(ಫ್ರೇಮ್ ಹಾಕಿಸಿ) ಇದೆ. ಅದೇ ರೀತಿ ಅವರು ಇತ್ಯಾದಿ ಕಲೆಗಳಲ್ಲಿ ತೊಡಗಿಸಿಕೊಂಡಿದ್ದರು ಎಂಬುದು ವಕ್ತೃಗಳು ಮಾಹಿತಿ ನೀಡಿದ್ದಾರೆ.ಇಷ್ಟಲ್ಲದೇ ಸಂಗೀತ, ನೃತ್ಯ, ಸಾಹಿತ್ಯ ಇತ್ಯಾದಿಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು ಎಂಬುದು ತಿಳಿದುಬಂದಿದೆ.

"ಜರಿಮಲೆಯು ಎಲ್ಲಾ ದೃಷ್ಟಿಯಿಂದಲೂ ಆಯಕಟ್ಟಿನ ಸ್ಥಳ.ಮರಾಠರ ದಾಳಿಯನ್ನು ಸಮರ್ಥವಾಗಿ ಎದುರಿಸಬೇಕಾದರೆ ಇದನ್ನು ಗಡಿ ಕೇಂದ್ರವಾಗಿಟ್ಟುಕೊಂಡರೆ ಸಾಧ್ಯವಾಗುತ್ತದೆ ಎಂದು ಭಾಗವಹಿಸಿ, ಅಲ್ಲಿ ರಕ್ಷಣೆ ಪಡೆಯನ್ನಿಡಲು ನಿರ್ಧರಿಸಿ ಜರಿಮಲೆ ನಾಯಕರಿಗೆ ಪತ್ರದ ಮೂಲಕ ಮಾಹಿತಿ ಕಳುಹಿಸಿದನು.ನೀವು ನನ್ನ ಹಾಗೂ ಸರ್ಕಾರದ ಹಿತೈಷಿಗಳು, ನೀವು ಬಹಳ ದೂರದಲ್ಲಿರುವುಕ್ಕಿಂತ ನನ್ನ ಬಳಿ ಇರುವುದು ಉತ್ತಮ.ಆದ್ದರಿಂದ ತಾವು ತಮ್ಮ ಕುಟುಂಬದವರೊಂದಿಗೆ ಶ್ರೀರಂಗಪಟ್ಟಣಕ್ಕೆ ಬರುವುದು ಒಳಿತು.ಟಿಪ್ಪುವಿನ ಮಾತಿನ ಅರ್ಥವನ್ನು ಸರಿಯಾಗಿ ಗ್ರಹಿಸಿದ ನಾಯಕರು ಅವನ ಬಲೆಯಲ್ಲಿ ಬಂದು ಶ್ರೀರಂಗಪಟ್ಟಣಕ್ಕೆ ಆಗಮಿಸಿದರು. ಟಿಪ್ಪುಸುಲ್ತಾನನು ಹಿರೇಕೊಟ್ಟೂರು ಸೇರಿದ ಹರದನಹಳ್ಳಿ ಮತ್ತು ಯಡೆತೊರೆ ಗ್ರಾಮಗಳನ್ನು

ದತ್ತಿಯಾಗಿ ನೀಡಿದ. ನಂತರ ದತ್ತಿಯನ್ನು ಕಿತ್ತುಕೊಂಡು ಅವನನ್ನು ಭಕ್ಷಿಯನ್ನಾಗಿ ತಿಂಗಳಿಗೆ ೩೦೦ ರೂಗಳ ವೇತನದ ಮೇಲೆ ನೇಮಕ ಮಾಡಿಕೊಂಡನು"[೭]. ಹೀಗೆ ಮೋಸದಿಂದ ಜರಿಮಲೆ ಸಂಸ್ಥಾನ ಸಂಪೂರ್ಣವಾಗಿ ಪಡೆದುಕೊಂಡು ಇದು ಬೊಮ್ಮಣ್ಣನಾಯಕನ ಕಾಲದಿಂದ ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಅವನತಿ ಕಡೆಗೆ ಬಂದಿದೆ.ಆದ ಕಾರಣ ಜರಿಮಲೆ ಆರ್ಥಿಕ ಕುಸಿತದ ಕಡೆಗೆ ಬಂದಿದೆ.ವೆಂಕಟಪ್ಪನಾಯಕನ ಕಾಲಕ್ಕೆ ಸಂಪೂರ್ಣವಾಗಿ ಅವನತಿಯ ಹಂತದ ನಂತರ ವಂಶಿಕರು ಕಷ್ಟದಲ್ಲಿ ತಮ್ಮ ಜೀವನ ಸಾಗಿಸಲು ಕಾರಣವಾಗಿದೆ.ಈಗಿನ ಸಿದ್ದಪ್ಪ ದೊರೆಗಳು ಹೇಳುವ ಪ್ರಕಾರ ಆರ್ಥಿಕವಾಗಿ ಕುಸಿತಕ್ಕೆ ಇದೇ ಕಾರಣ ಎಂದು ಹೇಳಬಹುದು.

- **ಗುಂತಗೋಳ ನಾಯಕ ಸಂಸ್ಥಾನದ ರಾಣಿಯರು**

ಗುಂತಗೋಳ ನಾಯಕ ಸಂಸ್ಥಾನದ ರಾಣಿಯರು ರಾಜಕೀಯ ಕ್ಷೇತ್ರದಲ್ಲಿ ಗುರುತಿಸುವಲ್ಲಿ ವಿರಳವಾಗಿದೆ. ಈ ಸಂಸ್ಥಾನದಲ್ಲಿ ಪೂರ್ವದಲ್ಲಿ ರಾಣಿಯ ಬಗ್ಗೆ ಮಾಹಿತಿ ಲಭ್ಯವಾಗಿಲ್ಲ ಈ ಗುಂತಗೋಳ ವಂಶಿಕರ ಮಾಹಿತಿಯಿಂದ ರಾಣಿಯರ ಬಗ್ಗೆ ತಿಳಿಯಬಹುದಾಗಿದೆ. ಸ್ವತಂತ್ರ ಬಂದ ಸಂದರ್ಭದಲ್ಲಿ ರಾಣಿ ಕೇಶವಮ್ಮನವರ ಬಗ್ಗೆ ಹಾಗೂ ನಂತರದ ರಾಣಿಯರು ಈ ಸಂಸ್ಥಾನಕ್ಕೆ ಸೊಸೆಯಾಗಿ ಬಂದವರು ರಾಣಿ ಲಕ್ಷ್ಮಿದೇವಮ್ಮ, ರಾಣಿ ಶಾರದ, ರಾಣಿ ತಿರುಮಲದೇವಿ ಆಧುನಿಕ ಕಾಲದಲ್ಲಿ ಗುಂತಗೋಳ ಜೀವಂತ ನಾಯಕ ಸಂಸ್ಥಾನದ ರಾಣಿಯರು ಇರುವರು.

**೧. ರಾಣಿ ಕೇಶವಮ್ಮ**

ಈಕೆ ಗುಂತಗೋಳ ಸಂಸ್ಥಾನದ "ರಾಜರಾಯಪ್ಪನಾಯಕನ ಪತ್ನಿ ರಾಣಿ ಕೆಶವಮ್ಮನವರು ತವರುಮನೆ ಸುರಪುರ. ಈಕೆ ಗೃಹಿಣಿಯಾಗಿ ಈ ಸಂಸ್ಥಾನವನ್ನು ನೋಡಿಕೊಂಡು ಹೋಗುವುದರ ಜೊತೆಗೆ, ರಾಜರಾಯಪ್ಪನಾಯಕರು ಧಾರ್ಮಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಜನಸೇವೆಯನ್ನು ಮಾಡುವುದಕ್ಕೆ ಪ್ರೋತ್ಸಾಹ ಹಾಗೂ ಕೆಲವು ಬಾರಿ ಸಲಹೆ ಸೂಚನೆಗಳನ್ನು ನೀಡುವ ಕೆಲಸವನ್ನು ರಾಣಿ ಕೇಶವಮ್ಮನವರು ಮಾಡುತ್ತಿದ್ದರು"[೮]. ಇಡಿ ಸಂಸ್ಥಾನದ ಜವಾಬಾ್ದರಿಯನ್ನು ನೋಡಿಕೊಂಡು ಹೋಗುತ್ತಿದ್ದರು. ಇವರಿಗೆ ಇಬ್ಬರು ಮಕ್ಕಳು ರಾಜಾ ನರಸಿಂಹನಾಯಕ ರಾಜಾ ವೆಂಕಟಪತಿನಾಯಕ ಮಕ್ಕಳು ಹಿರಿಮಗ ರಾಜ ನರಸಿಂಹನಾಯಕನಿಗೆ ದೊರೆಯ ಪಟ್ಟಕಟ್ಟಲಾಗಿದೆ.

**೨. ರಾಣಿ ಲಕ್ಷ್ಮಿದೇವಮ್ಮ**

ಈಕೆ "ರಾಜ ನರಸಿಂಹನಾಯಕನ ಪತ್ನಿ ಈಕೆಯ ತವರುಮನೆ ಚಿತ್ರದುರ್ಗದವರು ಮೂಲತಃ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಜಾಮೀನ್ದಾರ್ ವಂಶಸ್ಥರು ಮಗಳು ರಾಣಿ ಲಕ್ಷ್ಮಿದೇವಮ್ಮ.

ಈಕೆ ಈ ಸಂಸ್ಥಾನದ ನಡೆಸಿಕೊಂಡು ಹೋಗುವ ಮೂಲಕ ಸಂಸ್ಥಾನದ ರೀತಿ ರಿವಾಜ್‌ಗಳನ್ನು ಮುಂದಿ ವಂಶಸ್ಥ(ಪೀಳಿಗೆ)ರಾದ ತಮ್ಮ ಮಕ್ಕಳಿಗೆ ತಿಳಿಸಿ ಹೇಳುವುದು ತಮ್ಮ ಅತ್ತೆಯಿಂದ ತಿಳಿಸಿ ಕೊಟ್ಟಿರುವ ವಿಚಾರವನ್ನು ತಾವು ಮುಂದುವರೆಸಿಕೊಂಡು ಬಂದರು"[೯]. ಪ್ರಮುಖವಾಗಿ ಘೋಷ ಪದ್ಧತಿಯಿರುವುದರಿಂದ ಇವರು ಶಿಕ್ಷಣವನ್ನು ಪಿ.ಯು.ಸಿವರೆಗೆ ಶಿಕ್ಷಣ ಪಡೆದಿದ್ದರು. ಆದರು ಇವರು ಇಂಗ್ಲಿಷು ಓದಲು ಬರೆಯಲು ಬಲ್ಲವರು. ಸಂಗೀತ ಕಲಿತಿದ್ದರು, ದೇವರ ನಾಮಗಳು ಹೇಳುವುದು ಮತ್ತು ಮಕ್ಕಳಿಗೆ ಹೇಳಿಕೊಡುವುದು ಸಹ ಮಾಡುತ್ತಿದ್ದರು. ವಿಶ್ರಾಂತಿ ಸಮಯದಲ್ಲಿ ಕಥೆ, ಕಾದಂಬರಿ, ಓದು ತುಂಬ ಇಷ್ಟಪಡುತ್ತಿದ್ದರು. ಈ ಸಂಸ್ಥಾನದಲ್ಲಿ ನಡೆಯುವ ಧಾರ್ಮಿಕ ಆಚರಣೆಗಳಲ್ಲಿ ಭಾಗವಹಿಸುತ್ತಿದ್ದರು.ರಾಣಿ ಲಕ್ಷ್ಮಿದೇವಮ್ಮರಿಗೆ ಹಿರಿಯ ಮಗ ರಾಜಾ ರಾಯಪ್ಪನಾಯಕ ಇವರ ಪತ್ನಿ ಶಾರದ ಮಾದ್ರಬ್ ಜಮೀನ್ದಾರರ ಮಗಳು ಈಕೆ ರಾಣಿ ಲಕ್ಷ್ಮಿದೇವಮ್ಮ ನಂತರ ರಾಣಿ ಪಟ್ಟ(ಸೊಸೆ)ವು ಬರುವುದು. ಗುಂತಗೋಳ ಸಂಸ್ಥಾನವನ್ನು ಮುಂದುವರಿಸಿಕೊಂಡು ಹೋಗುವರು. ರಾಣಿ ಲಕ್ಷ್ಮಿದೇವಮ್ಮರ ಎರಡನೆ ಮಗ ರಾಜಾ ಅಮರೇಶ್ವರ ನಾಯಕ ಇವರ ಪತ್ನಿ ರಾಣಿ ಮೋಹನಾಂಭ ತವರುಮನೆ ಮೂಡುಗೇರಿ, ಮೂರನೆ ಮಗ ಶ್ರೀನಿವಾಸನಾಯಕ ಇತನ ಪತ್ನಿ ರಾಣಿ ತಿರುಮಲ ದೇವಿಯವರು ಇವರ ತವರುಮನೆ ಮಂಗರ್‌ಪಾಳ್ಯ ಜಮಿನ್ದಾರ್ ಆಂಧ್ರಪ್ರದೇಶದ ಮೂಲದ ವಂಶಿಕರ ಮಗಳು. ರಾಣಿ ಲಕ್ಷ್ಮಿದೇವಮ್ಮನವರ ಮಾರ್ಗದರ್ಶನದಲ್ಲಿ ತಮ್ಮ ಮಕ್ಕಳು ಮೂರುಜನರು ಸಮಾಜ ಸೇವೆಯನ್ನು ಮಾಡುವ ಮೂಲಕ ರಾಜಕೀಯ ಕ್ಷೇತ್ರದಲ್ಲಿ ಇದ್ದು ಜನರ ಸೇವೆ ಸಲ್ಲಿಸುವ ಮೂಲಕ ಈ ಸಂಸ್ಥಾನವನ್ನು ಉನ್ನತ ಸ್ಥಾನಕ್ಕೆ ಜೀವಂತವಾಗಿ ಇಟ್ಟಿದ್ದಾರೆ.

- **ಗುಡೇಕೋಟೆ ನಾಯಕ ಸಂಸ್ಥಾನದ ರಾಣಿಯರು**

ಗುಡೇಕೋಟೆ ನಾಯಕ ಸಂಸ್ಥಾನದ ರಾಣಿಯರು ರಾಜಕೀಯ ಕ್ಷೇತ್ರದಲ್ಲಿ ಗುರುತಿಸುವಲ್ಲಿ ವಿರಳವಾಗಿದೆ. ಬ್ರಿಟಿಷರು ಈ ಮನೆತನದವರಿಗೆ ವಿಶ್ರಾಂತಿ ವೇತನ ನೀಡಿದರು. ವೆಂಕಟಮ್ಮ ನಾಗತಿ ಮತ್ತು ಕೇಶವಮ್ಮನಾಗತಿಯರಿಗೆ (೧೮೮೯-೯೦) ೯೩.೩೪ಪೈಸೆ, ನೀಡಲಾಗಿದೆ. ಇವುಗಳ ಮೂಲಕ ರಾಣಿಯರನ್ನು ಗುರುತಿಸಲಾಗಿದೆ. ನಂತರದಲ್ಲಿ ಗುಡೇಕೋಟೆ ವಂಶಸ್ಥರ ರಾಣಿ ಪದ್ಧತಿಯವರು ಮೂಲಕ ರಾಣಿ ಸಾವಿತ್ರಮ್ಮಜಿ, ರಾಣಿ ಸಿದ್ಧಮ್ಮಾಜಿ, ರಾಣಿ ವೆಂಕಮ್ಮ, ರಾಣಿ ರಂಗಮ್ಮ, ಇವರು ಈ ಸಂಸ್ಥಾನದ ಪೂರ್ವ ರಾಣಿಯರು ಮಾಹಿತಿಯನ್ನು ನೀಡಲಾಗಿದೆ. ಈ ಕೆಳಗಿನಂತೆ ತಿಳಿಸಿರುವವರು.

**೧. ರಾಣಿ ರಂಗಮ್ಮ**

ಈಕೆ "ಗುಡೇಕೋಟೆ ಸಂಸ್ಥಾನದ ಅರಸ ಜಟ್ಟಿಂಗರಾಜನ ಪತ್ನಿ ರಾಣಿ ರಂಗಮ್ಮನವರು ಗೃಹಿಣಿಯಾಗಿ ತಮ್ಮ ಸಂಸ್ಥಾನದ ಜವಾಬ್ದಾರಿಯಿಂದ ನಿಭಾಯಿಸುತ್ತಿದ್ದರು"[೧೦]. ಈಕೆ ಪತ್ನಿ

ಜಟ್ಟಿಂಗರಾಜ ಅರಸ ಇವರು ಸ್ವತಂತ್ರ ನಂತರದಲ್ಲಿಯೂ ಅರಸರ ಆಳ್ವಿಕೆ ಕೊನೆಗೊಂಡಿದ್ದರು ಸಹ ಆ ಸಂಸ್ಥಾನದ ಅರಸನಾಗಿ ಜವಾಬ್ದಾರಿಯಿಂದ ಜನರ ಸೇವೆಯನ್ನು ರಾಜಕೀಯ ಮೂಲಕ ರಾಜ ಜಟ್ಟಿಂಗರಾಜರು ಇದ್ದಕ್ಕೆ ತಕ್ಕಂತೆ ಸಹಕರಿಸಿ ರಾಣಿ ರಂಗಮ್ಮನವರು ತಮ್ಮ ಪತಿಗೆ ಸಹಕರಿಸುತ್ತ, ಸಂಸ್ಥಾನದ ಹಾಗೂ ಕುಟುಂಬದ ಜವಾಬ್ದಾರಿಯನ್ನು ನಿಭಾಯಿಸಿಕೊಂಡು ಬಂದರು. ಈ ದಂಪತಿಗಳಿಗೆ ಒಬ್ಬನೆ ಮಗ ಕೃಷ್ಣವರ್ಮ ರಾಜ ಈತನು ಚಿಕ್ಕವಯಸ್ಕನಾಗಿದ್ದಾಗಲೇ ತಂದೆ ತಾಯಿ ತೀರಿಕೊಂಡರು ಇತನನ್ನು ತನ್ನ ಸಹೋದರಿಯರು ಸಾಕಿಸಲುಹಿದರು.

**೨. ರಾಣಿ ಸಾವಿತ್ರಮ್ಮಾಜಿ, ರಾಣಿ ಸಿಂದ್ದಮ್ಮಾಜಿ ಹಾಗೂ ರಾಣಿ ನೀಲಮ್ಮಾಜಿ**

"ಇವರು ಜಟ್ಟಿಂಗರಾಜನ ಸಹೋದರ ಸದಾಶಿವ ರಾಜನ ಮಕ್ಕಳು ಇವರು ಕೃಷ್ಣವರ್ಮ ರಾಜನು ಚಿಕ್ಕವಯಸ್ಕರನಾಗಿ ಇರುವುದರಿಂದ ಗುಡೇಕೋಟೆ ಸಂಸ್ಥಾನದ ಆಡಳಿತ ನೋಡಿಕೊಂಡರು. ನಂತರದಲ್ಲಿ ಕೃಷ್ಣವರ್ಮರಾಜನು ವಯಸ್ಕನು ಅದಾಗ ಅವನಿಗೆ ಈ ಗುಡೇಕೋಟೆ ಸಂಸ್ಥಾನ ಅರಸನಾಗಿ ಮಾಡಿದರು"[೧೧]. ನಂತರದಲ್ಲಿ ಅವರಿಗೆ ಸುರಪುರದ ರಾಣಿ ಪದ್ಮಾವತಿಯೊಂದಿಗೆ ವಿವಾಹ ಮಾಡಿದರು. ಇವರಿಗೆ ನಾಲ್ಕು ಜನ ಗಂಡು ಮಕ್ಕಳು ಮೂರು ಜನ ಹೆಣ್ಣು ಮಕ್ಕಳು. ಹಿರಿಯ ಮಗ ಶಿವರಾಜವರ್ಮನಿಗೆ ವಿವಾಹವಾಗಿದೆ ಪತ್ನಿ ರಾಣಿ ಹಿಮಬಿಂದು ಈಕೆ ತವರು ಮನೆ ಆನಂತಪುರವಾಗಿದೆ.

**೩. ರಾಣಿ ಪದ್ಮಾವತಿ**

ರಾಣಿ ಪದ್ಮಾವತಿಯು ಕೃಷ್ಣವರ್ಮರಾಜನನ್ನು ವಿವಾಹವಾಗಿ ಗುಡೇಕೋಟೆ ಸಂಸ್ಥಾನಕ್ಕೆ ಬಂದ ಸಮಯದಲ್ಲಿ ಸರ್ಕಾರದ ಅಧೀನದಲ್ಲಿತ್ತು. ಅವರು ಈ ಸಂಸ್ಥಾನದ ಅಧಿಕ ಕುಗ್ಗಿರಲಿಲ್ಲ ಎಂದು ಹೇಳುವವರು, ಅಲ್ಲಿಯ ಜನರು ಈ ಸಂಸ್ಥಾನಕ್ಕೆ ವಿಧೇಯರಾಗಿದ್ದರು. ಹಾಗೂ ಈ ಸಂಸ್ಥಾನಕ್ಕೆ ವಿಧೇಯರಾಗಿರುವವರು. "ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಸಕ್ರಿಯ ಕಾರ್ಯಕರ್ತರಾಗಿದ್ದರಲ್ಲದೆ ಕೂಡ್ಲಿಗಿ ತಾಲ್ಲೂಕು ಬೋರ್ಡ್ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿರುವರು"[೧೨]. ಕೃಷ್ಣವರ್ಮ ರಾಜರ ಮರಣಾ ನಂತರ ರಾಣಿ ಪದ್ಮಾವತಿಯವರು ಈ ಸಂಸ್ಥಾನದ ಜವಾಬ್ದಾರಿಯನ್ನು ನಿಭಾಯಿಸಿಕೊಂಡು ಹೋಗುತ್ತಿರುವ ಸಂಸ್ಥಾನದ ಧಾರ್ಮಿಕ ಕೆಲಸಗಳನ್ನು ಇವರು ನಿಭಾಯಿಸಿಕೊಂಡು ಹೋಗುವರು. ಪ್ರಮುಖವಾಗಿ ವಿಜಯದಶಮಿ, ದೀಪಾವಳಿ, ಯುಗಾದಿ, ರಾಮನವಮಿ, ಪ್ರಮುಖ ಹಬ್ಬಗಳ ಈ ಸಂಸ್ಥಾನದ ಮೂಲಕ ಪ್ರಾರಂಭವಾಗಬೇಕಾಗಿತ್ತು. ಊರಿನ ಜಾತ್ರೆಗಳು ಸಹ ಈ ಸಂಸ್ಥಾನದ ಅನುಮತಿ ಮೂಲಕ ಜಾತ್ರೆಯನ್ನು ನಡೆಯುತ್ತದೆ. ಈ ಜಾತ್ರೆಯ ಉತ್ಸವಗಳಿಗೆ, ಗುಡೇಕೋಟೆ ಸಂಸ್ಥಾನದವರು ಪೂರ್ವದಿಂದ ಇಂದಿನವರಿಗೂ ಜಾತ್ರೆ ಉತ್ಸವಗಳಿಗೆ ಹಣ ನೀಡುವುದು(ದೇಣಿಗೆ) ಆಗಿದೆ. ಈ

ಸಂಪ್ರದಾಯವನ್ನುರಾಣಿ ಪದ್ಮಾವತಿಯವರು ಆಚರಿಸುತ್ತಾ ಬಂದಿರುವರು, ಜಾತ್ರೆ ಉತ್ಸವಗಳಲ್ಲಿ ಈ ಸಂಸ್ಥಾನದ ಮನೆತನದ ಮೊದಲ ಪೂಜೆಯನ್ನು ಜಾರಿಗೊಳಿಸುವರು.

- **ಕನಕಗಿರಿ ನಾಯಕ ಸಂಸ್ಥಾನದ ರಾಣಿಯರು**

ಕನಕಗಿರಿಯ ರಾಣಿಯರು ಆಡಳಿತ ಮಾಡಿರುವುದು ತುಂಬಾ ವಿರಳ ಆದರೆ ಸಾಮಾಜಿಕ ಕ್ಷೇತ್ರದಲ್ಲಿ, ಧಾರ್ಮಿಕ ಕ್ಷೇತ್ರದಲ್ಲಿ ಕನಕಗಿರಿ ರಾಣಿಯರು ತಮ್ಮದೇ ಛಾಪನ್ನು ಮೂಡಿಸಿದ್ದಾರೆ.ರಾಣಿ ಕಾಟಮ್ಮ, ರಾಣಿ ಲಕ್ಷ್ಮಿನಾಗತಿ, ರಾಣಿ ಅಚ್ಚಮ್ಮ, ರಾಣಿ ಚೆನ್ನಮ್ಮ, ರಾಣಿ ಕನಕಮ್ಮ, ರಾಣಿ ಗೌರಮ್ಮ, ಇವರುಗಳ ಕೊಡುಗೆ ಅಪಾರ ಈ ಕೆಳಗೆ ತಿಳಿಸಲಾಗಿದೆ. ನಮ್ಮ ನಾಡು ಸ್ವತಂತ್ರವಾದ ನಂತರ ರಾಣಿ ಗೌರಮ್ಮನ ಮಗ ರಾಜ ರಂಗಪ್ಪನಾಯಕ ಪಟ್ಟದ ಅರಸ ಪತ್ನಿ ರಾಣಿ ಅಮರಮ್ಮ ಪಟ್ಟದ ರಾಣಿಯಾಗುತ್ತಾಳೆ.ಈ ಸಂಸ್ಥಾನ ವಂಶ ಅಭಿವೃದ್ಧಿಯು ಈಕೆಯಿಂದ ಆಧುನಿಕ ನಾಯಕ ಮನೆತನ ಪ್ರಾರಂಭವಾಗುತ್ತದೆ.

**೧. ರಾಣಿ ಅಮರಮ್ಮ**

ರಾಜ ರಂಗಪ್ಪನಾಯಕನ ಪತ್ನಿ ರಾಣಿ ಅಮರಮ್ಮ ಈಕೆಯ ತವರುಮನೆ ಲಿಂಗಸ್ಸೂಗುರು ತಾಲ್ಲೂಕಿನ ಗುಡಗುಂಟಿ ಈ ಸಂಸ್ಥಾನದ ಮನೆತನದ ಹೆಣ್ಣುಮಗಳನ್ನು ಹುಲಿಹೈದರ್ ಸಂಸ್ಥಾನದ ಅರಸನಿಗೆ ಕೊಟ್ಟು ವಿವಾಹ ಮಾಡಲಾಗಿದೆ. "ರಾಣಿ ಅಮರಮ್ಮರವರನ್ನು ರಾಜರಂಗಪ್ಪನಾಯಕ ವಿವಾಹವಾಗುವ ಸಂದರ್ಭದಲ್ಲಿ ಹೈದರಾಬಾದ್ ತಮ್ಮ ಪ್ರಾರಂಭದಲ್ಲಿಯೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾಗಿದ್ದರು. ನಂತರ ಹುಲಿಹೈದರ್‌ಗೆ ಬಂದರು ಅರಸನಿಗೆ ಪಟ್ಟ ಕಟ್ಟಲಾಯಿತು. ತಮ್ಮ ಜೀವನವನ್ನು ಸ್ವಾತಂತ್ರ ಸಂಗ್ರಾಮದಲ್ಲಿ ತೊಡಗಿಸಲು ತನ್ನ ತಾಯಿಯ ಪ್ರೇರಣೆಯಿಂದ ಏಕೆಂದರೆ ರಾಣಿ ಗೌರಮ್ಮ ಮತ್ತು ಮಗನನ್ನು ಹೈದರಾಬಾದ್‌ನ ನಿಜಾಮ ಸರ್ಕಾರವು ಯುವ ರಾಜನು ಕಿರಿಯ ವಯಸ್ಕರನ್ನು ಎಂದು ನೆಪವೊಡ್ಡಿ ಹುಲಿಹೈದರ್ ಸಂಸ್ಥಾನವನ್ನು ತನ್ನ ಕೈವಶ ಮಾಡಿಕೊಂಡನು. ತಾಯಿ ಮಗನಿಗೆ (ವರ್ಷಾಸ ಮಾಸಾಶನ)ನೀಡುವುದು ಎಂದು ತೀರ್ಮಾನಿಸಲಾಯಿತು. ಹೈದರಾಬಾದ್‌ನಲ್ಲಿಯೇ ಇಡಲಾಯಿತು ಒಂದು ಸಂಸ್ಥಾನದ ರಾಣಿಯಾಗಿ ಹತ್ತು ಹಲವಾರು ಗ್ರಾಮಗಳನ್ನು ನಿಭಾಯಿಸಿದ ರಾಣಿ ಗೌರಮ್ಮನವರು ನಾಯಕ ಸಂಸ್ಥಾನಗಳ ಆಚಾರ, ವಿಚಾರಗಳು, ಸಂಪ್ರದಾಯಗಳಲ್ಲಿ ಹುಟ್ಟಿ ಬೆಳೆದ ರಾಣಿಯನ್ನು ತಮ್ಮ ಬಂಧು ಬಳಗದಿಂದ ದೂರವಿಟ್ಟು ಚಿಕ್ಕ ವಯಸ್ಕರ ಮಗನನ್ನು ಹೈದರಾಬಾದ್‌ನಲ್ಲಿಯೇ ಇದ್ದು ಮಗನನ್ನು ಬೆಳೆಸುತ್ತಾಳೆ"[೧೩]. ರಾಣಿ ಗೌರಮ್ಮನವರು ತಮ್ಮ ಮಗನಿಗೋಸ್ಕರ ಕೆಲವು ಕಾಲಗಳು ಅವನ ಪಾಲನೆ ಮಾಡಿ ನಂತರದಲ್ಲಿ ರಾಣಿ ಗೌರಮ್ಮನವರು ಹೈದರಾಬಾದ್‌ನಲ್ಲಿಯೇ ನಿಧನಳಾದಳು. ರಾಜ ರಂಗಪ್ಪನವರು ಹೈದರಾಬಾದ್‌ನಲ್ಲಿ ಇದ್ದು ಬ್ರಿಟಿಷ್

ಹಾಗೂ ನಿಜಾಮರ ವಿರುದ್ಧ ಸಂಘಟನೆ ಮಾಡಿ ಸ್ವಾತಂತ್ರ ಸಂಗ್ರಾಮ ಮಾಡಿದರು. ನಂತರದಲ್ಲಿ ಕನಕಗಿರಿಗೆ ಬಂದನು ರಾಣಿ ಅಮರಮ್ಮನವರೊಂದಿಗೆ ವಿವಾಹ ಸಹ ಮಾಡಲಾಗಿತ್ತು.ಎರಡು ವರ್ಷಗಳ ನಂತರ ಈ ಸಂಸ್ಥಾನ "ಕ್ರಿ.ಶ. ೧೯೪೮ರಲ್ಲಿ ಭಾರತ ಒಕ್ಕೂಟದೊಂದಿಗೆ ವಿಲೀನವಾಯಿತು. ೧೯೫೬ರಲ್ಲಿ ಇವರ ಜಹಗೀರುಗಳೆಲ್ಲರದ್ದಾದವು"[೧೪]. ಜಹಗೀರುಗಳು ವಿಭಾಗವಾದವು ಬ್ರಾಹ್ಮಣರಿಗೆ ಬಡಿಗೇರ, ಕುಲಕರ್ಣಿ, ಸುಬೇದರ, ಹೀಗೆ ಹಲವು ವಿಭಾಗಗಳಾಗಿ ೩೩.೦೦೦ ಸಾವಿರ ಎಕರೆಯ ಜಹಗೀರ ನಂತರದಲ್ಲಿ ಉಳಿದ ಜಹಗೀರ ೨೮೦ ಎಕರೆ ಮಾತ್ರ ರಾಜ ಉಡನಾಯಕನ ರಾಣಿ ಅಮರಮ್ಮನವರು ಗೃಹಿಣಿಯಾಗಿ ತಮ್ಮ ಜೀವನ ಸಾಗಿಸಿದರು. ಈ ಸಂಸ್ಥಾನವು ಆರ್ಥಿಕವಾಗಿ ಕುಂಠಿತಗೊಂಡಿತು (ಆರ್ಥಿಕವಾಗಿ ನಷ್ಟ) ಸಂಸ್ಥಾನವನ್ನು ತಮ್ಮ ಕುಟುಂಬ ಜವಾಬ್ದಾರಿ ಹಾಗೂ ಆ ಊರಿನಲ್ಲಿ ನಡೆಯುವ ಧಾರ್ಮಿಕ ಕಾರ್ಯಕ್ರಮಗಳಿಗೆ ದೇಣಿಗೆ(ವೆಚ್ಚ) ಕೊಡುವುದು ಹಾಗೂ ರಾಜನು ಆ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದು ಮುಖ್ಯ ಕರ್ತವ್ಯ ಉದಾಹರಣೆ ದೇವರ ಉತ್ಸವ, ಜಾತ್ರೆ, ಸಮಾರಂಭಗಳು ಹೀಗೆ ಮೊದಲಾದವು.

ಈ ಇಬ್ಬರು ದಂಪತಿಗಳಿಗೆ ನಾಲ್ಕು ಜನ ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು ಹಿರಿಯಮಗ ಉಡಚಪ್ಪನಾಯಕ, ರಾಜವಿಜೇಂದ್ರ ನಾಯಕ, ರಾಣಿ ಗೌರಮ್ಮ, ರಾಜ ನವೀನ್‌ಚಂದ್ರನ್ ನಾಯಕ, ರಾಜ ಉಡಚೇಂದ್ರ ನಾಯಕ, ರಾಣಿ ಅನಸೂಯಾ, ಈ ಮಕ್ಕಳಲ್ಲಿ ರಾಜ ನವಿನ್‌ಚಂದ್ರನಾಯಕರವರು ಕನಕಗಿರಿಯ ಸಂಸ್ಥಾನದಲ್ಲಿ ಇರುವರು ಇನ್ನು ಉಳಿದ ಮಕ್ಕಳು ಬೇರೆ ಬೇರೆ ಊರುಗಳಲ್ಲಿ ಇರುವರು.

**೨. ರಾಣಿ ಶ್ರೀದೇವಿ**

ರಾಜ ರಂಗಪ್ಪನಾಯಕ ಪತ್ನಿ ರಾಣಿ ಅಮರಮ್ಮ ದಂಪತಿಗಳ ಹಿರಿಯ ಮಗ ರಾಜ ಉಡಚಪ್ಪ ನಾಯಕ ಈತನಿಗೆ ತನ್ನ ತಂದೆಯ ನಂತರ ದೊರೆ ಪಟ್ಟ ಕಟ್ಟಲಾಗಿದೆ. ಈಗಲೂ ಈ ಸಂಸ್ಥಾನದವರಿಗೆ ಅಧಿಕಾರ ಇಲ್ಲದಿದ್ದರೂ ಇಂದಿಗೂ ಜನರು ದೊರೆಗಳು ಎಂದೆ ಗೌರವಿಸುತ್ತಾರೆ. ರಾಜ ಉಡಚಪ್ಪನಾಯಕ ಪತ್ನಿ ರಾಣಿ ಶ್ರೀದೇವಿ ಇವರ ತವರು ಮನೆ ಸುರಪುರ ಸಂಸ್ಥಾನದ ಹೆಣ್ಣು ಮಗಳು. ಇವರಿಗೆ ಮೂರು ಜನ ಮಕ್ಕಳು ಹಿರಿಯ ಮಗ ರಾಜ ಸುಭಾಷ್‌ಚಂದ್ರ ನಾಯಕ, ರಾಣಿ ಮಮತ, ರಾಜಚೆನ್ನಪ್ಪ ನಾಯಕ, ಎಂಬುವರು ಇವರು. "ರಾಜ ಉಡಚನಾಯಕರು ಮಂಡಲ ಪಂಚಾಯಿತಿ ಪ್ರಧಾನರಾಗಿದ್ದರು"[೧೫]. ಈ ದೊರೆಯು ತನ್ನ ಪತ್ನಿಯ ತವರು ಮನೆಯಲ್ಲಿಯೇ ಕುಟುಂಬ ಸಮೇತ ಅಲ್ಲಿಯೇ ಉಳಿದುಕೊಂಡಿರುವರು. ಈ ಕನಕಗಿರಿ ಸಂಸ್ಥಾನವನ್ನು ಈತನ ಸಹೋದರ ರಾಜ ನವೀನ್ ನಾಯಕ ಹಾಗೂ ಅವರ ಮಕ್ಕಳು ನೋಡಿಕೊಂಡು ಹೋಗುತ್ತಿದ್ದಾರೆ.

### ೩. ರಾಣಿ ಕೊಂಡಮ್ಮ

"ದೊರೆ ರಾಜ ನವೀನ್‌ಚಂದ್ರ ನಾಯಕ ಪತ್ನಿ ಕೊಂಡಮ್ಮ ಈಕೆಯ ತವರುಮನೆ ಗುಡಗುಂಟೆ ಸಂಸ್ಥಾನ ಇವರಿಗೆ ನಾಲ್ಕು ಜನ ಪುತ್ರರು ಇದ್ದಾರೆ. ಹಿರಿಯ ಮಗ ರಾಜ ಶರತ್ ಚಂದ್ರಶೇಖರ ನಾಯಕ ಇವರು ಬಿ.ಎ. ಪದವಿಯನ್ನು ಪಡೆದಿದ್ದಾನೆ. ಈ ದೊರೆಯು ತಮ್ಮ ಹಿರಿಯರ ಹಾದಿಯಲ್ಲಿ ತಮ್ಮ ಸಂಸ್ಥಾನದ ವ್ಯವಹಾರ ವೈಖರಿ ಹಾಗೂ ಸಮಾಜದ ಸೇವೆಯನ್ನು ಮಾಡುವುದು ಇವರ ಕಾಯಕವಾಗಿದೆ. ದ್ವಿತೀಯ ಪುತ್ರನಾದ ರಾಜ ಹರಿಷ್ ನಾಯಕ, ಇವರ ಕನಕಗಿರಿಯಲ್ಲಿ ಪ್ರೌಢಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿ ಕೆಲಸ ಮಾಡುತ್ತಿದ್ದಾರೆ. ಈತನಿಗೆ ವಿವಾಹವಾಗಿದೆ ಇವರ ಪತ್ನಿ ರಾಣಿ ಹೇಮಲತಾ ಈಕೆಯ ತವರುಮನೆ ಕರ್ನೂಲ್ ಜಿಲ್ಲೆಯ ಸಂಸ್ಥಾನಕ್ಕೆ ಸೇರಿರುವ ಹೆಣ್ಣು ಮಗಳು ಈಕೆ ಪಿ.ಯು.ಸಿ ಶಿಕ್ಷಣ ಪಡೆದಿದ್ದಾರೆ. ನಾಯಕ ಮನೆತನಗಳಲ್ಲಿ ಹೆಣ್ಣುಮಕ್ಕಳ ಹೆಚ್ಚು ಶ್ರೀಸಾಮಾನ್ಯರಂತೆ ಇವರಿಗೆ ಸ್ವತಂತ್ರವಾಗಿ ಇರಲು ಸಾಧ್ಯವಿಲ್ಲ ಎಂದು ತಿಳಿಯುತ್ತದೆ"[೧೬]. ಅವರಲ್ಲಿ ಇರುವ ಆಚಾರ ಘೋಷ ಪದ್ಧತಿ ಇರಬಹುದು ಆದ ಕಾರಣ ಶಿಕ್ಷಣದಲ್ಲಿ ಕೆಲವು ಮನೆತನಗಳಲ್ಲಿ ಉನ್ನತ ಶಿಕ್ಷಣ ಪಡೆದಿಲ್ಲ ಎಂದು ತಿಳಿಯಬಹುದು. ಹಾಗೆಯೇ ಪಂದಿಕೋನಿ ಸಂಸ್ಥಾನ ಎಂದ ಕೂಡಲೇ ದೇವದುರ್ಗದ ಸಂಸ್ಥಾನದ ಕೊಳ್ಳಿರಂಗಪ್ಪನಾಯಕನ ಪತ್ನಿ ಪಂದಿಕೋನಿ ಲಕ್ಷ್ಮಮ್ಮ ಇವರು ಸಹ ಆಂಧ್ರಪ್ರದೇಶ ರಾಜ್ಯದ ಕರ್ನೂಲ್ ಜಿಲ್ಲೆಯ ಪಂದಿಕೋನಿ ಸಂಸ್ಥಾನಕ್ಕೆ ಸೇರಿದ ಹೆಣ್ಣುಮಗಳು ಎಂದು ತಿಳಿದು ಬರುತ್ತದೆ. ದೊರೆ ರಾಜ ನವೀನ್ ನಾಯಕನ ತೃತೀಯ ಪುತ್ರ ರಾಜ ಅರವಿಂದ್ ನಾಯಕ ಇವರು ಬಿ.ಎ. ಪದವಿಯನ್ನು ಪಡೆದಿದ್ದಾರೆ. ಚತುರ್ಥ ಪುತ್ರನಾದ ರಾಜ ಅಮರನಾಯಕ ಇವರು ಡಿ.ಇಡ್ ಮತ್ತು ಬಿ.ಎ.ಪದವಿಯನ್ನು ಪಡೆದಿದ್ದಾರೆ. ರಾಣಿ ಕೊಂಡಮ್ಮನವರು ತಮ್ಮ ಕುಟುಂಬವನ್ನು ಪಾಲನೆ ಪೋಷಣೆ ಮಾಡುವುದು ಮುಖ್ಯ ಕರ್ತವ್ಯವಾಗಿತ್ತು. ಇವರು ಸಂಪೂರ್ಣವಾಗಿ ಗೃಹಿಣಿಯಾಗಿದ್ದರು. ಆದರು ಊರಿನ ಧಾರ್ಮಿಕ ಆಚರಣೆಗಳು ಪ್ರಾರಂಭವಾಗಬೇಕಾದರೆ ಈ ಸಂಸ್ಥಾನದ ಅನುಮತಿ ಹಾಗು ಮೊದಲ ಆದ್ಯತೆಯ ಈ ಮನೆತನದ ರಾಜ ನವೀನ್ ನಾಯಕ ಪತ್ನಿ ರಾಣಿ ಕೊಂಡಮ್ಮವರಿಂದ

"ರಾಜ ರಂಗಪ್ಪನಾಯಕ ಪತ್ನಿ ರಾಣಿ ಅಮರಮ್ಮನವರ ಇನ್ನೊಬ್ಬ ಪುತ್ರ ರಾಜ ವಿಜಯ ನಾಯಕ ಈತನ ಪತ್ನಿ ರಾಣಿ ರಂಗಮ್ಮ ಈಕೆಯ ತವರುಮನೆ ಆಂಧ್ರಪ್ರದೇಶದ ಶ್ರೀಶೈಲ ಹತ್ತಿರದ ಪ್ಯಾಪಲೇರ್ ಸಂಸ್ಥಾನದ ಹೆಣ್ಣುಮಗಳು. ಈ ವಿವಾಹ ಸಂಬಂಧಿಸಿದಂತೆ ಪ್ಯಾಪಲೇರ್ ಸಂಸ್ಥಾನದ ಬಗ್ಗೆ ತಿಳಿದು ಬರುತ್ತದೆ. ಈ ಸಂಸ್ಥಾನದ ವಿವರ ಮುಂದೆ ಇದರ ಬಗ್ಗೆ ಸಂಶೋಧನೆಗೆ ಸಹಾಯವಾಗುತ್ತದೆ. ಇವರಿಗೆ ಮೂರು ಜನ ಮಕ್ಕಳು ಹಿರಿಯ ಮಗ ರಾಜ ಪೂರ್ಣಚಂದ್ರ ನಾಯಕ ರಾಣಿ ಸೂನೇನ, ರಾಜ ಗಿರೀಶ್ ನಾಯಕ ಇವರ ಮಕ್ಕಳು"[೧೭]. ರಾಜ ರಂಗಪ್ಪನಾಯಕ ಮಗಳು ರಾಣಿ ಗೌರಮ್ಮ ರಾಜ ರಂಗಪ್ಪನಾಯಕರನ್ನು ತನ್ನ ತಾಯಿ ರಾಣಿ ಗೌರಮ್ಮಳ ಹೆಸರೇ ಇಡಲಾಗಿದೆ. ರಾಣಿ ಗೌರಮ್ಮಳನ್ನು ಗುಡಗುಂಟಿ ಸಂಸ್ಥಾನದ ರಾಜ ಗೋಪಾಲ್ ನಾಯಕರಿಗೆ

ಕೊಡಲಾಗಿದೆ, ಈತನು ರಾಣಿ ಅಮರಮ್ಮನವರ ಸಹೋದರನಾಗಿರುತ್ತಾನೆ. ಇವರಿಗೆ ಮೂರು ಜನ ಮಕ್ಕಳಿದ್ದಾರೆ.ರಾಜ ರಂಗಪ್ಪ ನಾಯಕ ಮಗ ರಾಜ ಉಡಚಂದ್ರ ನಾಯಕ ಪತ್ನಿ ರಾಣಿ ರೋಜವತಿ ಇವರಿಗೆ ಐದು ಜನ ಮಕ್ಕಳು ಇರುವರು.

ಈ ಮನೆತನದ ವಂಶಸ್ಥನ ಅಣ್ಣ–ತಮ್ಮಂದಿರ ಬೇರೆ ಬೇರೆ ಸ್ಥಳಗಳಲ್ಲಿ ಇರುವರು.ಈ ಸಂಸ್ಥಾನದಲ್ಲಿ ಇರುವ ರಾಜ ನವೀನ್‌ಚಂದ್ರ ನಾಯಕ ಕುಟುಂಬವು ಇದೆ.ಈ ಮನೆತನ ಸ್ಥಳೀಯ ರಾಜಕೀಯದೊಂದಿಗೆ ಉತ್ತಮ ಸಂಪರ್ಕ ಹೊಂದಿದೆ.ಈ ಮನೆತನದವರು ಆರ್ಥಿಕವಾಗಿ ತಕ್ಕಮಟ್ಟಿಗೆ ಇರುವವರು.ವಾಲ್ಮೀಕಿ ಗುರುಗಳೆಂದು ಗುರುತಿಸುತ್ತಾರೆ.ಈ ಮನೆತನದ ರಾಜಾ ನವೀನಚಂದ್ರನಾಯಕರು ಸಾಮಾಜಿಕ ಧಾರ್ಮಿಕ, ರಾಜಕೀಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ ಹಾಗೆಯೇ ತಮ್ಮ ಮಗ ರಾಜ ಶರತ್‌ಚಂದ್ರ ಶೇಖರನಾಯಕ ರವರು ಸಮಾಜದ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ.

ಕನಕಗಿರಿಯ ನಾಯಕ ಸಂಸ್ಥಾನದ ರಾಣಿಯರು ಧಾರ್ಮಿಕ ಆಚರಣೆಯಲ್ಲಿ ಭಾಗವಹಿಸುವಿಕೆ ಕನಕಗಿರಿಯ ನಾಯಕ ಸಂಸ್ಥಾನದ ಮನೆದೇವರು ತಿರುಪತಿ ತಿಮ್ಮಪ್ಪ ಈತನ ಪ್ರತಿ ರೂಪವೇ ಕನಕಗಿರಿಯ ಕನಕಾಚಲಪತಿ.ಈ ದೇವರಿಗೆ ಪ್ರತಿವರ್ಷ ಮಾಘಮಾಸ ಚರ್ತುಮಾಸ ದ್ವಾದಶಿಯಂದು ಜಾತ್ರೆಯು ಪ್ರಾರಂಭವಾಗುತ್ತದೆ.ಈ ಜಾತ್ರೆಯು ೯ ದಿನಗಳ ಕಾಲ ಪ್ರತಿದಿನ ಒಂದೊಂದು ಉತ್ಸವಗಳು ಜರಗುತ್ತವೆ. ಈ ಉತ್ಸವಕ್ಕೆ ಅರಸ ಮತ್ತು ರಾಣಿಯು ಕುಟುಂಬ ಸಮೇತ ಬಂದು ದರ್ಶನ ಪಡೆಯುವರು.ಇವರ ಹೆಸರಿನಲ್ಲಿ ಮೊದಲನೆ ಪೂಜೆಯು ಜರುಗುತ್ತದೆ.

- **ದೇವದುರ್ಗದ ನಾಯಕ ಸಂಸ್ಥಾನದ ರಾಣಿಯರು**

ದೇವದುರ್ಗದ ಸಂಸ್ಥಾನದ ರಾಣಿಯರು ಐತಿಹಾಸಿಕವಾಗಿ ಕಂಡುಕೊಳ್ಳಲು ತುಂಬ ವಿರಳವಾಗಿದೆ. ದೇವದುರ್ಗ ಅರಸ ರಾಜಾ ಕೊಳ್ಳಿರಂಗಪ್ಪನಾಯಕ ದುರ್ಮರಣದಿಂದ ತನ್ನ ಪತ್ನಿ ರಾಣಿ ಪಂದಿಕೋನಿ ಲಕ್ಷ್ಮಮ್ಮನವರು ತವರುಮನೆಯಲ್ಲಿ ಉಳಿಯುವರು ದೇವದುರ್ಗವನ್ನು ಸುರಪುರ ಸಂಸ್ಥಾನದ ಅರಸರು ಆಡಳಿತ ಮಾಡಿದರು.ಕಾಲಗಳ ನಂತರ ದೇವದುರ್ಗ ಅರಸರಿಗೆ ನೀಡಲಾಗಿದೆ ಪೂರ್ವದ ಆಡಳಿತದಲ್ಲಿ ರಾಣಿಯರನ್ನು ಕಾಣುವುದು ಇಲ್ಲ ಒಬ್ಬ ರಾಣಿ ಪಂದಿಕೋನಿ ಲಕ್ಷ್ಮಮ್ಮನಿಂದ ದೇವದುರ್ಗ ವಂಶಾವಳಿಯು ಬೆಳೆದು ಬಂದಿದೆ.

**೧. ರಾಣಿ ಅಮರಮ್ಮ**

"ಇವರು ದೇವದುರ್ಗದ ನಾಯಕ ಸಂಸ್ಥಾನದ ರಾಜ ವಾಸುದೇವ ನಾಯಕ ಪತ್ನಿ ಗೃಹಿಣಿಯಾಗಿ, ದೇವದುರ್ಗದ ಸಂಸ್ಥಾನದ ಜವಾಬ್ದಾರಿಯನ್ನು ಹೊಂದಿದ್ದರು. ರಾಣಿ ಅಮರಮ್ಮನವರು ಈ ಸಂಸ್ಥಾನಕ್ಕೆ ಬಂದ ಸಮಯದಲ್ಲಿ ಈ ಸಂಸ್ಥಾನದ ಸಂಪ್ರದಾಯಗಳು

ಕಟ್ಟುನಿಟ್ಟುವಾದ ಆಚರಣೆ ಅವರು ತಮ್ಮ ಕುಟುಂಬ ಹಾಗೂ ಸಂಸ್ಥಾನವನ್ನು ನೋಡಿಕೊಂಡು ಹೋಗುತ್ತಿದ್ದರು. ಈ ಸಂಸ್ಥಾನವು ಆರ್ಥಿಕವಾಗಿ ಉತ್ತಮ ಸ್ಥಾನದಲ್ಲಿದ್ದಾರೆ"[೧೮]. ರಾಣಿ ಅಮರಮ್ಮನವರು ಪೂರ್ವದಿಂದ ಇಂದಿನ ಪ್ರಸ್ತುತ ದಿನಮಾನಗಳಲ್ಲಿಯು ಇರುವರು. ರಾಣಿ ಅಮರಮ್ಮ ಮತ್ತು ಅರಸ ವಾಸುದೇವ ನಾಯಕರಿಗೆ ಮೂರುಜನ ಗಂಡು ಮಕ್ಕಳು ರಾಜಾಕಿಲಚನಾಯಕ, ದೇವದುರ್ಗದಲ್ಲಿ ಜನರ ಹತ್ತಿರ ಉತ್ತಮ ಸ್ನೇಹ ಸಂಬಂಧ ಹೊಂದಿರುವರು.

**೨. ರಾಣಿ ರಾಜಲಕ್ಷ್ಮಿದೇವಿ**

ಈಕೆ ರಾಜ ವೆಂಕಟಪ್ಪನಾಯಕ ಪತ್ನಿ ಈಕೆಯ ತವರುಮನೆ ಆಂಧ್ರಪ್ರದೇಶದ ಪ್ಯಾಪಲೇಯ ಮನೆತನದವರು. ಹೀಗೆ ಈ ಮನೆತನದವರು ಸುರಪುರದಲ್ಲಿ ಬಂದು ನೆಲೆಸಿರುವರು.ರಾಜ ವೆಂಕಟಪ್ಪನಾಯಕರು ದೇವದುರ್ಗದ ಜನರಿಗೆ ತುಂಬ ಹತ್ತಿರದ ವ್ಯಕ್ತಿಯಾಗಿದ್ದರು.

ಈ "ವಂಶದವರು ಜನಸೇವೆ ಜನಾರ್ಧನ ಸೇವೆ ಎಂಬ ಮೂಲ ತತ್ವ ಮೂಲಕ ಸೇವೆ ಮಾಡುವಂತಹ ವ್ಯಕ್ತಿತ್ವ ಇದಕ್ಕೆ ಸಾತ್ ಕೊಡುತ್ತಿದ್ದರು ರಾಣಿ ಲಕ್ಷ್ಮಿದೇವಮ್ಮನವರು"[೧೯]. ಇವರು ಹೆಚ್ಚಾಗಿ ಧಾರ್ಮಿಕ ಆಚರಣೆಯಲ್ಲಿ ಭಾಗವಹಿಸುತ್ತಿದ್ದರು. ಹಬ್ಬ, ಜಾತ್ರೆ, ಉತ್ಸವಗಳಿಗೆ, ಪ್ರಮುಖವಾಗಿ ತಮ್ಮದೇಯಾದ ಆಚರಣೆಗಳ ಮೂಲಕ ಮಾಡುವ ಪದ್ಧತಿ ಇರುತ್ತಿತ್ತು. ರಾಣಿ ಲಕ್ಷ್ಮಿದೇವಮ್ಮನವರು ತಮ್ಮ ಅತ್ತೆಯಿಂದ ಕಲಿತ ಸಂಪ್ರದಾಯ ಆಚಾರ ವಿಚಾರವನ್ನು ಪಾಲಿಸಿಕೊಂಡು ಮತ್ತು ಮುಂದಿನ ಪೀಳಿಗೆ(ಸೊಸೆಯರಿಗೆ) ಅದನ್ನು ತಿಳಿಸಿ ಆಚರಣೆಗಳು ಹಾಗೂ ಸಂಸ್ಥಾನವನ್ನು ನಿಭಾಯಿಸಿಕೊಂಡು ಹೋಗುವ ಬಗ್ಗೆ ತಿಳಿಸುತ್ತಿದ್ದರು

- **ಆನೆಗೊಂದಿಯ ರಾಣಿಯರು**

ತಿರುಮಲದೇವರಾಯಲು ಸಹೋದರಿಯ ಮಗ ಪೆದ್ದನರಸಿಂಹರಾಜು ಆನೆಗೊಂದಿಯ ಅರಸನಾದ.ಈತನ ಮರಣದ ನಂತರ ಈತನ ರಾಣಿ ನರಸಿಂಗಮ್ಮ ಕ್ರಿ.ಶ.೧೮೮೫ರಲ್ಲಿ ಆನೆಗೊಂದಿ ರಾಣಿಯಾಗುತ್ತಾಳೆ.ಕ್ರಿ.ಶ.೧೮೮೯ರಲ್ಲಿ ಈಕೆ ತೀರಿಕೊಂಡ ನಂತರ ಸಹೋದರಿ ರಾಣಿಕುಪ್ಪಮ್ಮ ಪ್ರಭಾರಿ ರಾಣಿಯಾಗುತ್ತಾಳೆ. ಆನೆಗೊಂದಿ ಅರಸ ವೀರ ವೆಂಕಟಪತಿರಾಯಲು ಮಗಳಾದ ರಾಣಿ ಚೆಲ್ಲಮ್ಮನ ಮಗನ ಮಗಳಾದ ರಾಣಿ ಕುಪ್ಪಮ್ಮಳು ಆನೆಗೊಂದಿ ಪಟ್ಟದ ರಾಣಿಯಾಗಿ ಆಡಳಿತ ನಡೆಸುವ ಮುನ್ನ ಈಕೆ ತನ್ನ ಕಿರಿಯ ಸಹೋದರ ಪಂಪಾತಿ ಅರಸನನ್ನು ದತ್ತು ತೆಗೆದುಕೊಂಡು, ಉತ್ತರಾಧಿಕಾರಿಯಾಗಿ ನೇಮಕ ಮಾಡಿದಳು."ಈತನು ಕ್ರಿ.ಶ.೧೮೮೯-೯೧೮ರಲ್ಲಿ ಮರಣ ಹೊಂದಿದನು. ಇವನ ಹಿರಿಯ ಮಗ ಶ್ರೀಕೃಷ್ಣದೇವರಾಯ ಆಗಿನ್ನು

ಸಣ್ಣವನಾಗಿದ್ದರಿಂದ ರಾಣಿ ಕುಪ್ಪಮ್ಮ ಸಂಸ್ಥಾನದ ರಾಜಪ್ರತಿನಿಧಿಯಾಗಿ ಆಡಳಿತ ಮುಂದುವರಿಸಿದಳು.ಮಗ ವಯಸ್ಕನಾದಾಗ ಸಂಸ್ಥಾನದ ಅಧಿಪತಿಯಾದನು.ನಿಜಾಮ ರಾಜ್ಯದ ಭಾಗವಾಗಿದ್ದ ಆನೆಗೊಂದಿಯ ಸಂಸ್ಥಾನ ಭಾರತ ಸ್ವಾತಂತ್ರ್ಯದ ನಂತರ ೧೯೪೮ ಸೆಪ್ಟೆಂಬರ್ ೧೭ರಲ್ಲಿ ಭಾರತದ ಒಕ್ಕೂಟಕ್ಕೆ ಸೇರಿತು"[೨೦]. ಶ್ರೀ ಕೃಷ್ಣದೇವರಾಯ ಅರಸನಿಗೆ ಪಟ್ಟದ ರಾಣಿ ಕುಪ್ಪಮ್ಮಳಾಗಿದ್ದಳು. ಇನ್ನೊಬ್ಬ ಹೆಂಡತಿ ಇರುವುದನ್ನು ರಾಣಿ ಕುಪ್ಪಮ್ಮನವರು ಉರ್ದುಭಾಷೆಯಲ್ಲಿ ಹೊರಡಿಸಿದ ಶಾಸನ ಕನ್ನಡದ ವಿವರದಲ್ಲಿ ರಾಣಿ ಕುಪ್ಪಮ್ಮ ತಮ್ಮ ಪತಿಯ ಕಿರಿಯ ರಾಣಿ ಬಿಜ್ಜಮ್ಮನನ್ನು ತನ್ನ ಸಹೋದರಿ ಸರಿಸಮಾನಳು ಎಂದು ಭಾವಿಸಿ ರಾಣಿ ಕುಪ್ಪಮ್ಮ ಪಟ್ಟದ ರಾಣಿ ಎಂಬ ಅಧಿಕಾರ ಚಲಾಯಿಸದೇ ಬಿಜ್ಜಮ್ಮನನ್ನು ಎಲ್ಲ ಹಿರಿಯರ ಮುಂದೆ ಹಲವು ಗ್ರಾಮಗಳು ಹಾಗೂ ತನ್ನ ಪಟ್ಟದರಾಣಿಯ ಸರಿಸಮಾನಳಾಗಿ ಅಧಿಕಾರ ನೀಡುತ್ತಾಳೆಎಂದು ಶಾಸನದಲ್ಲಿ ಉಲ್ಲೇಖಿಸಿದ್ದಾಳೆ.

**೧. ರಾಣಿ ತಿರುಮಲಮ್ಮ ಮತ್ತು ರಾಣಿ ವೆಂಗಲಮ್ಮ**

ಆನೆಗೊಂದಿ ನಾಯಕ ಸಂಸ್ಥಾನದ ರಾಣಿಯರು ರಾಜಕೀಯ ಕ್ಷೇತ್ರದಲ್ಲಿ ಅವರ ಹೆಸರುಗಳು ಲಭ್ಯವಾಗಿದ್ದರು.ಐತಿಹಾಸಿಕ ವಿವರಣೆಯ ಹಿನ್ನೆಲೆಯಲ್ಲಿ ಬಹಳ ವಿರಳವಾಗಿ ಲಭ್ಯವಾಗಿ ಕಂಡುಬರುತ್ತದೆ. ಅವರಲ್ಲಿ ರಾಣಿ ತಿರುಮಲ್ಲಮ್ಮ, ರಾಣಿ ಐಂಗಲಮ್ಮ ಇವರು ನರಸಿಂಹ ಅರಸನ ದ್ವಿತೀಯ ಪುತ್ರನಾದ ಕೃಷ್ಣರಾಯಲು ಮಕ್ಕಳು.ರಾಣಿ ತಿರುಮಲ್ಲಮ್ಮನ ಪತಿ ಗಂಡ ರಾಮರಾಯಲು ಇವರಿಗೆ ನಾಲ್ಕು ಜನ ಮಕ್ಕಳಲ್ಲಿ ಮೊದಲನೆಯ ಮಗನಾದ ರಾಜ ೪ನೇ ರಂಗನ ವಂಶಾವಳಿಯಿಂದ ಆನೆಗೊಂದಿ ಸಂಸ್ಥಾನ ಅರಸೊತ್ತಿಗೆ ಮುಂದುವರಿಯುತ್ತದೆ. ರಾಣಿ ವೆಂಗಲಮ್ಮ ಪತಿ ೧ನೇ ಗಂಡ ತಿರುಮಲನಿಗೆ ಮಕ್ಕಳು ಇರುವುದಿಲ್ಲ. ರಾಣಿ ತಿರುಮಲಮ್ಮನ ಮಗ ನಾಲ್ಕನೇ ರಂಗ ಆನೆಗೊಂದಿ ಸಂಸ್ಥಾನದ ಉತ್ತರಾಧಿಕಾರಿಯಾದನು.

**೨. ರಾಣಿ ಕೇಶವಮ್ಮ**

ಆನೆಗೊಂದಿ ನಾಯಕ ಅರಸ ರಾಜ ತಿರುಮಲರಾಯ ಕ್ರಿ.ಶ. ೧೮೨೪ರಲ್ಲಿ ಅರಸನಾಗಿದ್ದನು. ಈತನ ಮರಣದ ನಂತರ ಮಗ ವೀರವೆಂಕಟಪತಿ ಉತ್ತರಾಧಿಕಾರಿಯಾದನು. ವೀರವೆಂಕಟಪತಿ ವಿವಾಹವಾಗದೆ ಮರಣ ಹೊಂದಿದನು.ತನ್ನ ಸಹೋದರಿ ರಾಣಿ ಕೇಶಮ್ಮನ ಮಗನಾದ ತಿರುಮಲರಾಯನು ಉತ್ತರಾಧಿಕಾರಿಯಾದನು. ಇಂಗ್ಲಿಷರಿಂದ ವಿಶ್ರಾಂತಿ ವೇತನದೊಂದಿಗೆ ನದಿಯ ದಕ್ಷಿಣದ ದಂಡೆಯ ಮೇಲಿರುವ ಭೂಮಿಗಳು ಮಂಜೂರಾದವು. "ಕ್ರಿ.ಶ.೧೮೬೬ರಲ್ಲಿ ತಿರುಮಲರಾಯನ ಮಗ ವೆಂಕಟರಾಮರಾಯನು ಉತ್ತರಾಧಿಕಾರಿಯಾದನು.ನಂತರ ಆತನ ಸಹೋದರ ಕೃಷ್ಣದೇವರಾಯ ಕ್ರಿ.ಶ.೧೮೭೧–೧೮೭೨ರವರೆಗೆ ಮಾಸಾಶನರಾಗಿದ್ದರು ಹಾಗೂ

ನಿಜಾಮ ಸರಕಾರ ಈತನ ಇಬ್ಬರು ಪತ್ನಿಯರಿಗೆ ಚಿಕ್ಕ ಮೊತ್ತದ ಮಾಶಸನವನ್ನು ಹತ್ತು ವರ್ಷಗಳವರೆಗೆ ನೀಡಿತು"[೨೨]. ನಂತರ ಕೃಷ್ಣದೇವರಾಯನ ಚಿಕ್ಕಮ್ಮಳಾದ ರಾಣಿ ಲಕ್ಷ್ಮೀದೇವಮ್ಮ ಹೀಗೆ ರಾಣಿ ಕೇಶಮ್ಮನ ಮಗಳು ಹಾಗೂ ಎಂಬುವುದು ಉರ್ದುಭಾಷೆಯ ಶಾಸನದಿಂದ ರಾಣಿ ಬಿಜ್ಜಮಳು ಕೃಷ್ಣದೇವರಾಯನ ಪತ್ನಿ ಎಂದು ಐತಿಹಾಸಿಕ ದಾಖಲೆಮೂಲಕ ತಿಳಿದುಬರುತ್ತದೆ.

- **ಗುಡಗುಂಟಿ ನಾಯಕ ಸಂಸ್ಥಾನದ ರಾಣಿಯರು**

ಗುಡಗುಂಟಿ ನಾಯಕ ಸಂಸ್ಥಾನದ ರಾಣಿಯರು ರಾಜಕೀಯ ಕ್ಷೇತ್ರದಲ್ಲಿ ರಾಜನ ಪತ್ನಿಯಾಗಿರುವರು, ಹಾಗೂ ಕೆಲವು ರಾಣಿಯರು ಸಾಂದರ್ಭಿಕವಾಗಿ ಆಡಳಿತ ಮಾಡಿರುವ ರಾಣಿ ಕಾಟಮ್ಮ, ರಾಣಿ ಗೌರಮ್ಮಾಜಿ ನವರು ರಾಜಕೀಯ ಕ್ಷೇತ್ರದಲ್ಲಿ ಗುಡಗುಂಟಿಯ ಸಂಸ್ಥಾನದ ರಾಜ ಸರ್ಜಾ ಜಡಿಸೋಮಪ್ಪ ನಾಯಕನ ಪತ್ನಿಯರು ರಾಣಿಜಯಲಕ್ಷ್ಮಿದೇವಿ ಈಕೆ ತವರುಮನೆ ಆಂಧ್ರಪ್ರದೇಶದ ಹೈದರಾಬಾದ್, ೨ನೇ ಪತ್ನಿ ರಾಣಿಲಲಿತಾದೇವಿ, ಈಕೆಯ ತವರುಮನೆ ಆಂಧ್ರಪ್ರದೇಶ ಬ್ರಾಹ್ಮಣ ಅರಸನ ಮಗಳು, ೩ನೇ ಪತ್ನಿ ರಾಣಿ ಕೃಷ್ಣಮ್ಮ. ಈಕೆಯ ತವರುಮನೆ ಗುಂತಗೋಳ. ರಾಜ ಸರ್ಜಾ ಜಡಿಸೋಮಪ್ಪ ನಾಯಕನಿಗೆ ಮೂರುಜನ ಪತ್ನಿಯರು. ಈತನಿಗೆ ರಾಣಿ ಗೌರಮ್ಮಾಜಿಯ ಮೊಮ್ಮಗ ರಾಜ ಅಮರಪ್ಪನಾಯಕ ರಾಣಿ ಬಸಮ್ಮಾಜಿಯ ಪುತ್ರನಾಗಿದ್ದನು. ಈತನ ಕಾಲದಲ್ಲಿ ಉತ್ತಮ ಆಡಳಿತ ಮಾಡಿದನು.

ಸರ್ಜಾ ಜಡಿಸೋಮಪ್ಪ ನಾಯಕ ತನ್ನ ಅಧಿಕಾರವಧಿಯಲ್ಲಿ ೪೪ ಹಳ್ಳಿಗಳನ್ನು ಆಡಳಿತ ಮಾಡಿದನು. ಈತನ ಕಾಲಾವಧಿಯಲ್ಲಿ ಆಡಳಿತದಿಂದ ಆರ್ಥಿಕವಾಗಿ ಗುಡಗುಂಟಿ ಸಂಸ್ಥಾನ ಉತ್ಕೃಷ್ಟ ಸ್ಥಾನದಲ್ಲಿತ್ತು. ಎನ್ನುವುದಕ್ಕೆ ರಾಣಿ ಬಸಮ್ಮಾಜಿಯು ತನ್ನ ಮಗನ ಆಡಳಿತ ಕುರಿತು ಕಣ್ಣಾರೆ ಕಂಡಿರುವ ಹಾಗೂ ತನ್ನ ತಾಯಿಯಾದ ರಾಣಿಗೌರಮ್ಮಾಜಿ ಜೊತೆಯಲ್ಲಿ ಆಡಳಿತ ಕಾರ್ಯದಲ್ಲಿ ಸಹಾಯಗೊಂಡಿದ್ದರು ಎಂದು ತಮ್ಮ ವಂಶಿಕರಿಗೆ (ಮಗ, ಸೊಸೆ, ಮೊಮ್ಮಗ) ಹೇಳಿಕೊಟ್ಟಿದ್ದಾರೆ. ಸರ್ಜಾ ಜಡಿಸೋಮಪ್ಪನ ಪತ್ನಿಯರು ವೈಭವದ ರೀತಿಯಲ್ಲಿ ಅಲಂಕಾರ ಮಾಡಿಕೊಳ್ಳುವುದು, ದರ್ಬಾರ್‌ನ್ನು ನಿರ್ವಹಣೆ ಹಾಗೂ ಯಾವುದೇ ವ್ಯಾಜ್ಯಗಳನ್ನು ನ್ಯಾಯ ನಿರ್ಣಯದ ನಿರ್ಧಾರ ಮಾಡುವ ಹಕ್ಕು ಬಾಧ್ಯತೆಗಳನ್ನು ಹೊಂದಿದ್ದರು ಎಂದು ತಿಳಿದುಬರುತ್ತದೆ. ರಾಜ ಜಡಿಸೋಮಪ್ಪ ನಾಯಕನು ತನ್ನ ಪತ್ನಿಯರಿಗೆ ಅಲಂಕಾರದ ಆಭರಣಗಳನ್ನು ಹೈದರಾಬಾದಿನಿಂದ, ವಿದೇಶದಿಂದ ತಂದುಕೊಡುತ್ತಿದ್ದರು. ಹಾಗೂ ಆಭರಣಗಳಿಗಾಗಿ ಮನೆಯಲ್ಲಿ ಅಕ್ಕಸಾಲಿಗರನ್ನು ಇಟ್ಟುಕೊಳ್ಳುತ್ತಿದ್ದರು, ಇಂದಿಗೂ ಇದ್ದಾರೆ. ಅವರು ಈ ಸಂಸ್ಥಾನದ ಅರಸುಮನೆತನದವರಿಗೆ ಮಾತ್ರ ಆಭರಣಗಳನ್ನು ಮಾಡುವರು. ಪ್ರಮುಖವಾಗಿ ಈ ರಾಣಿಯರು ಬೆಲೆ ಬಾಳುವಂತಹ ರೇಷ್ಮೆ ಸೀರೆಗಳನ್ನು ತೊಡುತ್ತಿದ್ದರು, ಧರ್ಮಾವರಂ, ಕಾಂಚೀಪುರಂ, ಮಕ್ಮಮಾಲ್ ಬಟ್ಟೆ, ಈ ತರಹದ ಸೀರೆಯನ್ನು ತೊಡುವರು.

ಈ ರಾಣಿಯರನ್ನು ನೋಡಿಕೊಳ್ಳಲು ಸೇವಕಿಯರನ್ನು ನೇಮಕ ಮಾಡಲಾಗುತ್ತಿತ್ತು. ಇವರನ್ನು 'ಮತನ್ದಾರ್' ಎಂದು ಕರೆಯುವರು. ದರ್ಬಾರಿನಲ್ಲಿ ಕೆಲಸ ಮಾಡುವ ಪ್ರಧಾನರಿಂದ ಹಿಡಿದು ಸೇವಕ ಕೆಲಸ ಮಾಡುವವರಿಗೆ 'ಮತನ್ದಾರ್' ಎಂದು ಕರೆಯುವರು. ಈ ಮತನ್ದಾರ್‌ರಿಗೆ ಕೊಟ್ಟು ಅದನ್ನು ನಿರ್ವಹಣೆ ಮಾಡಿಸುವ ಜವಾಬ್ದಾರಿಯು ರಾಣಿಯರು ವಹಿಸಿಕೊಂಡಿದ್ದರು. ಮತನ್ದಾರ್‌ರ ಮಕ್ಕಳಿಗೆ ವಿದ್ಯಾಭ್ಯಾಸ ಹಾಗೂ ಕುಟುಂಬದ ಆಗು-ಹೋಗುಗಳ ಜವಾಬ್ದಾರಿಯನ್ನು ರಾಣಿಯರೇ ನಿಭಾಯಿಸುವುದು ಮುಖ್ಯವಾಗಿದೆ. ಮತನ್ದಾರರಿಗೆ ನೀಡುವ ವೇತನವನ್ನು ಭೂಮಿಯ ರೂಪದಲ್ಲಿ ನೀಡುತ್ತಿದ್ದರು ಹಾಗೂ ಅವರಿಗೆ ಬಟ್ಟೆ, ನಾಣ್ಯಗಳ ರೂಪದಲ್ಲಿ(ಬೆಳ್ಳಿ-ತಾಮ್ರ)ನೀಡುವುದನ್ನು ನೋಡಿ ಕೊಳ್ಳುವುದು ರಾಣಿಯರ ಕೆಲಸವಾಗಿತ್ತು.

ರಾಣಿಯರು ಯಾವುದೇ ಸಾರ್ವಜನಿಕಸ್ಥಳದಲ್ಲಿ ಸಂಚಾರಕ್ಕೆ ನಿಷೇಧವಿರುವುದರಿಂದ ತಾವು ಕುದುರೆಯ ಗಾಡಿಯಲ್ಲಿ ಪ್ರಯಾಣ ಬೆಳಸಬೇಕಿತ್ತು. ರಾಣಿಯರು ವಿಶ್ರಾಂತಿ ಸಮಯದಲ್ಲಿ ಹಾಗೂ ಯಾವುದೇ ಹಬ್ಬಗಳಲ್ಲಿ ಮನರಂಜನೆಗಾಗಿ ಒಂದು ಚಿಕ್ಕ ರಂಗಮಂದಿರವನ್ನು ನಿರ್ಮಿಸಲಾಗಿತ್ತು. ಒಂದು ಭಾಗದಲ್ಲಿ ಪುರುಷರು ಇನ್ನೊಂದು ಭಾಗದಲ್ಲಿ ಸ್ತ್ರೀಯರು ಇರುವರು. ಇವರ ಜಾಗದಲ್ಲಿ ಕಾಮಾನುಗಳನ್ನು ನಿರ್ಮಿಸಲಾಗಿತ್ತು. ಇಲ್ಲಿ ಬೇರೆ ಬೇರೆ ಪ್ರದೇಶದ ಕಲಾವಿದರು ಬಂದು ಈ ರಂಗಮಂದಿರದಲ್ಲಿ ನಾಟಕ, ನೃತ್ಯ ಪ್ರದರ್ಶನ ಮಾಡಿ ಮನೆತನದವರಿಂದ ಉಡುಗೊರೆಯನ್ನು ಪಡೆಯುವ ಮೂಲಕ ಸತ್ಕಾರ ಪಡೆಯುವರು. ಈ ಮನರಂಜನೆಯ ರಂಗಮಂದಿರ ಇಂದಿಗೂ ಹಾಗೆಯೇ ದರ್ಬಾರ್‌ನಲ್ಲಿ ಮನೆಯಲ್ಲಿ ಇದೆ. ರಾಣಿಯರಿಗೆ ಸಾಂಸ್ಕೃತಿಕ ಮನರಂಜನೆಗೆ ನೋಡಲು ಅವಕಾಶ ಕಲ್ಪಿಸಿ ಕೊಟ್ಟಿರುವುದು ಉತ್ತಮ ಸಂಗತಿ. ರಾಣಿಯರು ಅರಮನೆಯ ಕೆಲಸ ಕಾರ್ಯ, ಜವಾಬ್ದಾರಿಯಿಂದ ಅವರ ವಿಶ್ರಾಂತಿ ಸಮಯವೂ ಸಹಾ ಉತ್ತಮ ರೀತಿಯಲ್ಲಿ ನಿಭಾಯಿಸಿರುವರು. ನಾಲ್ಕು ಗೋಡೆಯಲ್ಲಿ ಶಿಕ್ಷಣ, ಅವರ ಬೆಳವಣಿಗೆ, ಅವರ ವಿವಾಹವಾದ ನಂತರದಲ್ಲಿಯೂಸಹ ಸಂಸ್ಥಾನದ ಒಳಗೆ ಅವರ ಸಂಪೂರ್ಣ ಜೀವನವನ್ನು ಕಳೆಯುವರು ರಾಣಿಯರಿಗೆ ದರ್ಬಾರ್ ನೋಡಿಕೊಳ್ಳುವ ಜವಾಬ್ದಾರಿಯೊಂದಿಗೆ ಮನರಂಜನೆಯಿಂದ ಅವರಿಗೆ ಒಂದು ಉತ್ಸಾಹ ಹಾಗೂ ಸಂತೋಷಕರವಾಗುವ ಸಂಗತಿ ಎಂದು ಹೇಳಬಹುದು. ಆದರೆ ರಾಣಿಯರಿಗೆ ಶಿಕ್ಷಣ ನೀಡುವುದು ತಮ್ಮ ಅಕ್ಷರ ಜ್ಞಾನ ನೀಡುವಷ್ಟು ಮಾತ್ರ ತರಗತಿಗಳು ಇರಲಿಲ್ಲ. ಅಂದಿನ ಕಾಲದಲ್ಲಿ. ಆದರೆ ಇಂದು ಉನ್ನತ ಶಿಕ್ಷಣ ಪಡೆಯುತ್ತಿದ್ದಾರೆ. ಆದರೆ ರಾಣಿಗೌರಮ್ಮಾಜಿ ಯವರ ಆಡಳಿತ ನಿರ್ವಹಣೆಯನ್ನು ಮಾಡಿರುವಳು. ಹಾಗೂ ಅವಳು ಬೇಟೆ ಆಡುವ ಹವ್ಯಾಸವನ್ನು ಹೊಂದಿದ್ದರು ಎಂದು ತಿಳಿದು ಬರುತ್ತದೆ. ಇಲ್ಲಿ ಈ ರಾಣಿಯ ವ್ಯಕ್ತಿತ್ವ ಕಾಣಬಹುದು. ಜಾಡಿ ಸೋಮಪ್ಪ ಗೌರಮ್ಮಳ ಮೊಮ್ಮಗನಿಗೆ ತಕ್ಕಂತೆ ಕೆಲವು ದಾನ-ಧರ್ಮಗಳನ್ನು ಮಾಡಿರುವನು. ಕಿಕ್ಕೇರಿ ಸೋಮನಾಥನ ದೇವಾಲಯಕ್ಕೆ ೮೦೦ಎಕರೆಯಷ್ಟು ಭೂಮಿಯನ್ನು ದಾನವಾಗಿ ನೀಡಿರುವನು. ದಸರಾ ಹಬ್ಬದ ಪ್ರಯುಕ್ತವಾಗಿ ಸಜಾ ಜಡಿಸೋಮಪ್ಪನವರ ಸಹೋದರಿಗೆ ಸಮಾನಳಾದ ಚಿಕ್ಕ ಹೆಸರೂರಿನ ಲಿಂಗಾಯತ

ಹೆಣ್ಣುಮಗಳು ದಸರಾ ಹಬ್ಬದ ಸಮಯದಲ್ಲಿ ಪ್ರತೀ ವರ್ಷ ಬನ್ನಿಯನ್ನು ಅರಸನಿಗೆ ಕೊಟ್ಟು ಉಡುಗೊರೆ(ಆಭರಣ)ಯನ್ನು ಕೊಡುತ್ತಿದ್ದರು. ಅದರಬದಲಿಗೆ ಬೆಲೆಬಾಳುವ ವಸ್ತು ಬೇಕು ಎಂದು ಕೇಳಿದ ಕಾರಣಕ್ಕೆ ೮೦ ಎಕರೆ ಭೂಮಿಯನ್ನು ನೀಡಿರುವರು. ಆ ಭೂಮಿಯನ್ನು ಇಂದಿಗೂ ಬನ್ನಿ ಭೂಮಿ ಎಂದು ಕರೆಯುವರು. ಇದರಿಂದ ತಿಳಿದು ಬರುವುದು ರಾಜ ಜಡಿಸೋಮಪ್ಪ ನಾಯಕರು ತಮ್ಮ ಸಂಸ್ಥಾನದ ಹೆಣ್ಣು ಮಕ್ಕಳಿಗೆ ನೀಡುತ್ತಿದ್ದ ಗೌರವ, ಪ್ರೀತಿ ವಿಶ್ವಾಸ ಹೊರಗಿನ ಸ್ತ್ರೀಯರಿಗೂ ನೀಡುತ್ತಿದ್ದರು. ಎಂದು ತಿಳಿದುಬರುತ್ತದೆ. ಈತನ ಕಾಲದಲ್ಲಿ ಕೆರೆ ಬಾವಿ ಕಟ್ಟಿಸಿರುವರು. ದಂದಮ್ಮ ಕೆರೆ ಎಂದು ಕಾಶಿಭಾವು ಕೆರೆ, ಆದರೆ ಹೆಚ್ಚಾಗಿ ಬಾವಿಗಳನ್ನು ನಿರ್ಮಾಣ ಮಾಡಿರುವನು. ಈತನ ನಂತರ ತನ್ನ ಮಗ ರಾಜ ಅಮರಪ್ಪ ನಾಯಕನು ಅಧಿಕಾರಕ್ಕೆ ಬರುವರು. ಈತನು ರಾಣಿ ಕೃಷ್ಣಮ್ಮನವರ ಮಗನು. ಗುಡಗುಂಟಿ ಸಂಸ್ಥಾನ ಈತನ ಕಾಲದಲ್ಲಿ ಭಾರತ ಒಕ್ಕೂಟದಲ್ಲಿ ಸೇರುವುದಿಲ್ಲ. ಕೆಲವು ಕಾಲದ ನಂತರ ಒಕ್ಕೂಟಕ್ಕೆ ಸೇರುತ್ತದೆ. ರಾಜ ಅಮರಪ್ಪ ನಾಯಕನ ಪತ್ನಿ ರಾಣಿ ಜಯಕ್ಷ್ಮಿ. ಈಕೆ ಗುಂತಗೋಳ ಸಂಸ್ಥಾನದ ಹೆಣ್ಣುಮಗಳು. ಈಕೆಯನ್ನು ವಿವಾಹವಾಗುವ ಸಂದರ್ಭದಲ್ಲಿ ಈ ಸಂಸ್ಥಾನವು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿ ಇತ್ತು. ಇದೇ ಈಕೆಯನ್ನೂ ಸಹ ವಂಶಪಾರಂಪರ್ಯವಾಗಿ ನಡೆದು ಬಂದ ಸಂಪ್ರದಾಯಗಳನ್ನು ಹಾಗೂ ಸಂಸ್ಥಾನದ ಜವಾಬ್ದಾರಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಇವರ ಮಗ ಸೋಮನಾಥ ನಾಯಕ ಈ ಸಂಸ್ಥಾನದ ದೊರೆಯ ಪಟ್ಟ ಕಟ್ಟಲಾಗಿದೆ. ಈತನ ಪತ್ನಿ, ತಾರಾ. ಈಕೆ ಗುಡಗುಂಟಿ ಸಂಸ್ಥಾನದ ಜಾಗಿರ್ದಾರ್ ವಂಶದ ಹೆಣ್ಣು ಮಗಳು. ಅವಳನ್ನು ವಿವಾಹವಾಗಿರುವರು. ಈ ಸಂಸ್ಥಾನದ ರೀತಿ–ರಿವಾಜು ಮುಂದುವರಿಸಿಕೊಂಡು ಬಂದಿರುವರು. ಈಗಲೂ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಸೋಮನಾಥ ನಾಯಕರು ಪ್ರಜಾ ಸೇವೆಯನ್ನು ಮಾಡುವಲ್ಲಿ ಮುಂದಿದ್ದಾರೆ. ಅದಕ್ಕೆ ಕೈ ಜೋಡಿಸಿ ತನ್ನ ಪತ್ನಿ 'ತಾರಾ' ಸಹಕರಿಸುತ್ತಿದ್ದಾಳೆ.

ಪ್ರಮುಖವಾಗಿ ಗುಡಗುಂಟಿ ಸಂಸ್ಥಾನದಲ್ಲಿ ರಾಜಾ ಅಮರಪ್ಪನಾಯಕನ ಪತ್ನಿಯಾದ ರಾಣಿ ಶ್ರೀಮತಿ ಅವರು ಎರಡು ಸಲ ಜಿಲ್ಲಾ ಪಂಚಾಯ್ತಿಯ ಸದಸ್ಯರಾಗಿ ಆಯ್ಕೆಯಾದುದುಂಟು.(೭೯.ಕ.ಸಾ.ಅ) ರಾಜಾ ಅಮರಪ್ಪನಾಯಕನು ತಮ್ಮ ಪತ್ನಿಯನ್ನು ತಮ್ಮ ಸರಿಸಮಾನ ದೃಷ್ಟಿಯಿಂದ ನೋಡಿಕೊಂಡಿದ್ದನು. ಸ್ತ್ರೀಯರಿಗೆ ಎಲ್ಲಾ ರೀತಿಯ ಹಕ್ಕು ಬಾಧ್ಯತೆಗಳು ಇದ್ದವು ಎಂದು ತಿಳಿಸಿಕೊಡುತ್ತದೆ.

## ೩.೫ ಆಡಳಿತ ಕ್ಷೇತ್ರದಲ್ಲಿ ನಾಯಕ ರಾಣಿಯರು

### ೧. ರಾಣಿ ಈಶ್ವರಮ್ಮ

"ಈಕೆ ಸುರಪುರ ಸಂಸ್ಥಾನದ ಅರಸ ರಾಜಾ ಕೃಷ್ಣಪ್ಪನಾಯಕ(ಕ್ರಿ.ಶ. ೧೮೨೭-೧೮೪೩)ನು ಅನಾರೋಗ್ಯ ಪೀಡಿತನಾಗಿ ಕ್ರಿ.ಶ.೧೮೪೩ರಲ್ಲಿ ಮರಣ ಹೊಂದಿದನು. ಅನಂತರ ಈತನ ರಾಣಿ ಈಶ್ವರಮ್ಮಳು ಸುರಪುರ ಸಂಸ್ಥಾನದ ಆಡಳಿತವನ್ನು ಕೈಗೆತ್ತಿಕೊಂಡು ಅರಸರಂತೆಯೇ ಆಡಳಿತವನ್ನು ನಿರ್ವಹಣೆ ಮಾಡಲು ಮುಂದುವರಿಸಿದಳು.ಪಾಣಿನಿ ಹೇಳುವ ಹಾಗೆ ಕರ್ನಾಟಕದ ರಾಣಿಯರು 'ಅಸೂರ್ಯಂ ಪಶ್ಯೆ'ಯಾಗಿರಲಿಲ್ಲ. ರಾಜ್ಯದ ಸಾಮಾಜಿಕ ಮತ್ತು ಧಾರ್ಮಿಕ ಜೀವನಗಳಲ್ಲಿ ಮಾತ್ರವಲ್ಲ, ರಾಜಕೀಯ ಜೀವನದಲ್ಲೂ ಪ್ರಧಾನ ಪಾತ್ರವನ್ನು ಅವರು ವಹಿಸಿದ್ದಂತೆ ತಿಳಿದುಬರುತ್ತದೆ"[೨೨]. ರಾಜನು ತನ್ನ ರಾಣಿಯರನ್ನು ರಾಜ್ಯದ ಬೇರೆ ಬೇರೆ ಭಾಗಗಳನ್ನಾಳಲು ನೇಮಿಸುತ್ತಿದ್ದನು. ಆದರೆ ನಾಯಕ ಅರಸು ಮನೆತನಗಳಲ್ಲಿ ಘೋಷಪದ್ಧತಿ ಕಟ್ಟುನಿಟ್ಟಾಗಿರುವ ಸಂದರ್ಭದಲ್ಲಿಯೂ ರಾಣಿ ಈಶ್ವರಮ್ಮ ಸುರಪುರ ಸಂಸ್ಥಾನದ ಅಧಿಕಾರ ಗದ್ದುಗೆ ಏರಿ ಆಳ್ವಿಕೆ ಮಾಡಿದಳು. ಇದೇ ಸಂದರ್ಭದಲ್ಲಿ ಬಿಜಾಪುರದ ಆದಿಲ್‌ಶಾಹಿಗಳು ಹಾಗೂ ಬ್ರಿಟಿಷ್ ಸರಕಾರದ ಮಧ್ಯದಲ್ಲಿ ಸುರಪುರ ಸಂಸ್ಥಾನದ ಆಡಳಿತವನ್ನು ಕೈಗೆತ್ತಿಕೊಳ್ಳುವುದು ಆ ಸಂದರ್ಭದಲ್ಲಿ ಸುಲಭವಾಗಿರಲಿಲ್ಲ.

### ಉತ್ತರಾಧಿಕಾರಿಯ ನೇಮಕ

ರಾಣಿ ಈಶ್ವರಮ್ಮನಿಗೆ ಮೊಟ್ಟ ಮೊದಲು ಎದುರಾದ ಸಮಸ್ಯೆ ಉತ್ತರಾಧಿಕಾರಿಯನ್ನು ನೇಮಿಸುವುದು. ಈಕೆಯ ಪತಿ ಕೃಷ್ಣಪ್ಪನಾಯಕ ಗಂಡು ಸಂತಾನವಿಲ್ಲದ ಕಾರಣ ರಾಣಿ ಈಶ್ವರಮ್ಮ ಈ ಸಂದರ್ಭದಲ್ಲಿ ದತ್ತು ಮಗನನ್ನು ತೆಗೆದುಕೊಳ್ಳುವುದಕ್ಕೆ ನಿರ್ಧರಿಸಿದಳು.ತನ್ನ ತಮ್ಮ ಪಿಡ್ಡನಾಯಕನ ಮಗನನ್ನು ಉತ್ತರಾಧಿಕಾರಿಯೆಂದು ಘೋಷಿಸಿದಳು. ಆದರೆ ಕೃಷ್ಣಪ್ಪನಾಯಕನಿಗೆ ವೆಂಕಟಪ್ಪ ನಾಯಕ ಜನಿಸಿದ ಮೇಲೆ ಸಮಸ್ಯೆ ಪ್ರಾರಂಭವಾಯಿತು. "ಒಂದು ಕಡೆ ಕೃಷ್ಣಪ್ಪನಾಯಕನ ಮರಣ, ಇನ್ನೊಂದಡೆ ತನ್ನ ಮಗನನ್ನೇ ಉತ್ತರಾಧಿಕಾರಿಯಾಗಿ ನೇಮಿಸಬೇಕೆಂಬ ಪಿಡ್ಡನಾಯಕನ ಹಟ ರಾಣಿ ಈಶ್ವರಮ್ಮನನ್ನು ಸಮಸ್ಯೆಗೆ ಇಡು ಮಾಡಿತು.ಆದರೆ ಮಗ ವೆಂಕಟಪ್ಪನಾಯಕ ೭ ವರ್ಷದ ಅಪ್ರಾಪ್ತ ಬಾಲಕನಾಗಿದ್ದುದರಿಂದ ರಾಣಿ ಈಶ್ವರಮ್ಮಳೇ ಅಧಿಕಾರದ ಚುಕ್ಕಣಿ ಹಿಡಿದಳು"[೨೩]. ರಾಣಿಯವರಿಗೆ ಘೋಷಾಪದ್ಧತಿ ಕಟ್ಟುನಿಟ್ಟಾಗಿರುವುದರಿಂದ ರಾಣಿ ಈಶ್ವರಮ್ಮ ತನ್ನ ಆಡಳಿತ ಸಹಾಯಕ್ಕೆ ಆಗ ಚನ್ನಬಸಪ್ಪನೆಂಬ ನಿಷ್ಠಾವಂತನನ್ನು ಸಹಾಯಕನಾಗಿ ತೆಗೆದುಕೊಂಡಳು.ಈಗಾಗಲೇ ಆತ ದಕ್ಷ ಅಧಿಕಾರಿಯೆಂದು ಹೆಸರು ಮಾಡಿದ್ದನು.ಇದೆಲ್ಲವನ್ನು ಕಣ್ಣಾರೆ ಕಂಡ ಪಿಡ್ಡನಾಯಕ ನನ್ನ ಅಣ್ಣನ ಸ್ಥಾನಕ್ಕೆ ತಾನೇಕೆ

ವಾರಸುದಾರನಾಗಬಾರದೆಂದು ಯೋಚಿಸಿದನು. ಹುಟ್ಟುತ್ತ ಅಣ್ಣತಮ್ಮಂದಿರು ಬೆಳೆಯುತ್ತ ದಾಯಾದಿಗಳು ಎಂಬಂತೆ ಪಿಡ್ಡನಾಯಕ ಅಣ್ಣನ ಸ್ಥಾನಕ್ಕೆ ಬರಬೇಕು ಎಂದು ಯೋಚಿಸಿ ಬ್ರಿಟಿಷ್ ಸರಕಾರದ ರಾಜಕೀಯ ಪ್ರತಿನಿಧಿ ಕ್ಯಾಪ್ಟನ್ ಗ್ರೀಸ್ಲೆ ಹಾಗೂ ಈ ಸಂಸ್ಥಾನಕ್ಕೆ ಈಗಾಗಲೇ ಸಾಲ ನೀಡಿದ್ದ ಗೋಸಿಯಾನ ಬೆಂಬಲ ಈತನಿಗೆ ಸಿಕ್ಕಿತು. "ರಾಣಿ ಈಶ್ವರಮ್ಮ ಆಕೆಯ ಪತಿ ಕೃಷ್ಣಪ್ಪನಾಯಕನು ಕ್ಯಾಗ್ರಿಸ್ಲೆಯೊಂದಿಗೆ ಹಣದ ವ್ಯವಹಾರ ಮಾಡಿದ್ದನು"[೨೪]. ಆದರೆ ರಾಣಿ ಈಶ್ವರಮ್ಮ ಈ ವ್ಯವಹಾರದ ಒಪ್ಪಂದವನ್ನು ಈಗೆ ವಿರೋಧಿಸಿದಳು.ಆಗ ರೆಸಿಡೆಂಟನಾದಗ್ರೀಸ್ಲೆಯ ವಿರುದ್ಧ ತನ್ನ ೧೨,೦೦೦ ಬೇಡರ ಪಡೆಯನ್ನು ಅವರ ವಿರುದ್ಧ ಸಜ್ಜುಗೊಳಿಸಿದಾಗ, ಅಲ್ಲದೇ ವನದುರ್ಗದ ಬೇಡರು ಈಕೆಯ ಪ್ರತಿಯೊಂದು ಕಾರ್ಯಗಳಲ್ಲಿ ಬೆಂಗಾವಲಾಗಿ ನಿಂತರು.ಗ್ರೀಸ್ಲೆಯನ್ನು ಮಣಿಸುವುದೇನೂ ರಾಣಿಗೆ ಕಷ್ಟವೆನಿಸಲಿಲ್ಲ. ಗ್ರೀಸ್ಲೆ ಸೋತು ಸುರಪುರದಿಂದ ನಿರ್ಗಮಿಸಿದನು.

ಗ್ರೀಸ್ಲೆಯ ನಂತರ ಮೆಡೋಸ್ ಟೇಲರ್ ಸುರಪುರಕ್ಕೆ ಆಗಮಿಸುತ್ತಾನೆ. ನಯವಿನಯದಿಂದ ರಾಣಿ ಈಶ್ವರಮ್ಮನೊಂದಿಗೆ ನಡೆದುಕೊಳ್ಳುತ್ತಾನೆ. ಮಗ ನಾಲ್ವಡಿ ವೆಂಕಟಪ್ಪನಾಯಕನ ಜವಾಬ್ದಾರಿಯನ್ನು ಸ್ವತಃ ವಹಿಸಿಕೊಳ್ಳುತ್ತೇನೆಂದು ಹೇಳುತ್ತಾನೆ. ಆಕೆಯನ್ನು ತನ್ನ ತವರು ಮನೆಯಾದ ರತ್ನಗಿರಿಗೆ ಹೋಗುವಂತೆ ಮಾಡುತ್ತಾನೆ. ನಾಲ್ವಡಿ ವೆಂಕಟಪ್ಪನಾಯಕನ ಶಿಕ್ಷಣ, ರಾಜನೀತಿ, ಪ್ರಜಾಪ್ರತಿನಿಧಿಯಾಗಿ ಹೇಗೆ ಆಡಳಿತ ನಿರ್ವಹಣೆ ಮಾಡಬೇಕು, ವಿಚಾರವಂತಿಕೆಯಿಂದ ಬೆಳೆಸಿದರು. ರಾಣಿ ಈಶ್ವರಮ್ಮ ಸುರಪುರಕ್ಕೆ ಮರಳಿ ಆಗಮಿಸುವ ಹೊತ್ತಿಗೆ ಮೆಡೋಸ್ ಟೇಲರ್ ನಾಲ್ವಡಿ ವೆಂಕಟಪ್ಪನಾಯಕನನ್ನು ತನ್ನ ಅಧೀನದಲ್ಲಿಟ್ಟುಕೊಂಡು ಮರಳಿ ಬಂದ ರಾಣಿ ಈಶ್ವರಮ್ಮನನ್ನು ರಾಜಕೀಯ ಅಧಿಕಾರದಲ್ಲಿ ಕೈಹಾಕ ಕೂಡದೆಂದು ಆಕೆಗೆ ತಿಂಗಳಿಗೆ ಒಂದು ಸಾವಿರ ರೂಪಾಯಿಗಳನ್ನು ಖರ್ಚು ವೆಚ್ಚಕ್ಕಾಗಿ ಕೊಡುವುದಾಗಿ ಹೇಳಿದನು. ಇದನ್ನು ರಾಣಿ ಈಶ್ವರಮ್ಮ ಧಿಕ್ಕರಿಸಿದಳು.ತನ್ನ ಮಗನಲ್ಲಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯದ ಕಿಡಿ ಪ್ರಜ್ವಲಿಸುವಂತೆ ಮಾಡುತ್ತಾಳೆ. ತಾಯಿಯ ಪ್ರೇರಣೆಯಿಂದ ಮುಂದೆ ನಾಲ್ವಡಿ ವೆಂಕಟಪ್ಪ ನಾಯಕನು ದಕ್ಷಿಣ ಭಾರತದಲ್ಲಿಯೇ ಬ್ರಿಟಿಷರ ವಿರುದ್ಧ ಕ್ರಾಂತಿಯ ಕಹಳೆ ಊದಿದ.ಈ ಕ್ರಾಂತಿ ಕಹಳೆಯೂ ಮುಂದಿನ ಪೀಳಿಗೆ ಬಳುವಳಿಯಾಗಿ ನೀಡಿದನು.ಈ ಕ್ರಾಂತಿ ನಾಯಕ ಸಂಸ್ಥಾನದಿಂದ ರಾಣಿ ಈಶ್ವರಮ್ಮ ಪ್ರೇರಣೆ ಹಾಗೂ ನಾಲ್ವಡಿ ವೆಂಕಟಪ್ಪನಾಯಕ ತನ್ನ ತಾಯಿಯನ್ನು ಅನುಸರಿಸಿದ್ದರಿಂದ ಇಂದಿಗೂ ಕೀರ್ತಿಗೆ ಪಾತ್ರನಾಗಿದ್ದಾನೆ.

"ರಾಣಿ ಈಶ್ವರಮ್ಮ ತಾನು ಆಡಳಿತ ಚುಕ್ಕಣಿ ಹಿಡಿದ ದಿನದಿಂದ ಕೊನೆಯ ದಿನಗಳವರೆಗೆ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದಳು. ಈಕೆ ಮೇ ೨೭, ೧೮೫೨ರಲ್ಲಿ ತೀರ್ಥಯಾತ್ರೆಗೆ ತೆರಳುವಾಗ ಲಿಂಗಸೂಗೂರಿನಲ್ಲಿ ನಿಧನ ಹೊಂದುತ್ತಾಳೆ. ಅವಳನ್ನು ರಾಜ ಮರ್ಯಾದೆಯಿಂದ ಹೈದರಾಬಾದ್ ನಿಜಾಂನ ಸೈನಿಕರು ಲಿಂಗಸೂಗೂರು, ಸರ್ಕಾರಿ ತೋಟದಲ್ಲಿ ಸಮಾಧಿ ಮಾಡಿದ್ದಾರೆ. ಇಂದಿಗೂ ಇದೆ"[೨೫]. ರಾಣಿ ಈಶ್ವರಮ್ಮ ನಿಧನ ನಂತರ ನಾಲ್ವಡಿ ವೆಂಕಟಪ್ಪನಾಯಕ ಸ್ವಾತಂತ್ರ್ಯ ಹೋರಾಟ

ಮುಂದುವರಿಸಿದ ಕಾರಣ ಬ್ರಿಟಿಷರು ನಾಲ್ವಡಿ ವೆಂಕಟಪ್ಪನಾಯಕನನ್ನು ಕೊಲೆ ಮಾಡಿದರು. ಆದರೆ ಬ್ರಿಟಿಷ್ ಸರ್ಕಾರ ಮತ್ತು ನಿಜಾಮ ಸರ್ಕಾರ ಒಪ್ಪಲಿಲ್ಲ. ಇದನ್ನು ತಳ್ಳಿ ಹಾಕಿದರು.ಮುಂದೆ ಸುರಪುರ ಸಂಸ್ಥಾನಕ್ಕೆ ಉತ್ತರಾಧಿಕಾರಿ ಇಲ್ಲದ ಕಾರಣದಿಂದ ಬ್ರಿಟಿಷರ ಅಧೀನಕ್ಕೊಳಪಟ್ಟಿತು.ಇವರು ಕ್ರಿ.ಶ.೧೮೬೧ರಲ್ಲಿ ಸುರಪುರದ ಆಡಳಿತವನ್ನು ನೋಡಿಕೊಳ್ಳಲು ಹೈದರಾಬಾದ್ ನಿಜಾಮನಿಗೆ ಒಪ್ಪಿಸಿದರು.ನಾಲ್ವಡಿ ವೆಂಕಟಪ್ಪನಾಯಕನಿಗೆ ಎಂಟು ಜನ ರಾಣಿಯರು.ಅವರಲ್ಲಿ ಪಟ್ಟದ ರಾಣಿ ರಂಗಮ್ಮ.ರಾಣಿ ರಂಗಮ್ಮನಿಗೆ ಒಂದು ಹೆಣ್ಣು ಮಗು ಮಾತ್ರ ಇತ್ತು. ಈ ಎಂಟು ಜನ ರಾಣಿಯರಿಗೆ ನಿಜಾಮ ಸರಕಾರ ಸುಖ ವೇತನವನ್ನು ಜೀವಿತದ ಕಾಲದವರೆಗೂ ನೀಡಿತು.

**೨. ರಾಣಿ ರಂಗಮ್ಮ**

ತನ್ನ ಪತಿ ನಾಲ್ವಡಿ ವೆಂಕಟಪ್ಪನಾಯಕನ ಮರಣ ನಂತರ ಸುರಪುರ ಸಂಸ್ಥಾನವನ್ನು ಪುನಃ ಪಡೆಯಬೇಕೆಂದು ಸುರಪುರ ಸಂಸ್ಥಾನದ ಮುಖಂಡರೊಂದಿಗೆ ಸಮಾಲೋಚಿಸಿದ್ದಳು. ಇನ್ನೊಂದು ಕಡೆ ನಾಲ್ವಡಿ ವೆಂಕಟಪ್ಪನಾಯಕನ ಚಿಕ್ಕಪ್ಪ ರಾಜ ಪಿಡ್ಡನಾಯಕನ ಮಕ್ಕಳಾದ ಕೃಷ್ಣಪ್ಪನಾಯಕ, ವೆಂಕಟಪ್ಪನಾಯಕ, ಪಿಡ್ಡನಾಯಕರು ಸಂಸ್ಥಾನವನ್ನು ಮರಳಿ ಪಡೆಯುವ ಪ್ರಯತ್ನದಲ್ಲಿದ್ದರು.ಇವರಿಗೂ ಹೈದರಾಬಾದ್ ನಿಜಾಮ ಸರ್ಕಾರ ಸುಖ ವೇತನವನ್ನು ನೀಡುತ್ತಿತ್ತು.ಇವರೆಲ್ಲರೂ ಸಂಸ್ಥಾನವನ್ನು ಮರಳಿ ಪಡೆಯಲು ಪ್ರಯತ್ನಿಸಿದರೂ ಬ್ರಿಟಿಷರೂ ಸಂಸ್ಥಾನವನ್ನು ನೀಡಲು ನಿರಾಕರಿಸಿದರು.ನಾಲ್ವಡಿ ವೆಂಕಟಪ್ಪನಾಯಕನ ಚಿಕ್ಕಪ್ಪನ ಮಕ್ಕಳು ಹಾಗೂ ರಾಣಿ ರಂಗಮ್ಮ ಒಂದು ಹೆಣ್ಣು ಮಗು ಇರುವುದರಿಂದ ಉತ್ತರಾಧಿಕಾರಕ್ಕೆ ನಿರಾಕರಿಸಿದರು.ಆದರೆ ರಾಣಿ ರಂಗಮ್ಮ ಸಂಸ್ಥಾನ ಪಡೆಯಲು ಕ್ರಿ.ಶ.೧೮೯೦ರಲ್ಲಿ ಲಂಡನ್ನಿನ ಹೌಸ್ ಆಫ್ ಕಾಮನ್ಸ್‌ನಲ್ಲಿ ಸಂಸ್ಥಾನ ಪಡೆಯಲು ಪ್ರಶ್ನೆ ಕೇಳುವಂತೆ ಮುಜುಮದರ ವೆಂಕಟಪ್ಪನನ್ನು ಕಳುಹಿಸಿದಳು.ಆಗಲೂ ಇವಳ ಬೇಡಿಕೆ ತಿರಸ್ಕೃತಗೊಂಡಿತು.ನಂತರ ಬೇರೆ ಗತಿಯಿಲ್ಲದೆ ಪಟದ್ಪ ರಾಣಿ ರಂಗಮ್ಮನಿಗೆ ಒಂದು ಹೆಣ್ಣು ಮಗು ಮಾತ್ರ ಹಾಗೂ ಉಳಿದ ಏಳು ಜನ ರಾಣಿಯರಿಗೆ ಮಕ್ಕಳಿಲ್ಲದ ಕಾರಣ ವೆಂಕಟಪ್ಪನಾಯಕನ ಹಿರಿಯ ಪುತ್ರ ಕೃಷ್ಣಪ್ಪನಾಯಕನನ್ನು ದತ್ತು ತೆಗೆದುಕೊಂಡಳು.ಪೂರ್ವಜರ ಜಹಗೀರು ಗ್ರಾಮಗಳನ್ನು ಈತನಿಗೆ ನೀಡಿದಳು.ಕ್ರಿ.ಶ.೧೯೦೬ರಲ್ಲಿ ರಾಣಿ ರಂಗಮ್ಮ ಮರಣ ಹೊಂದಿದಳು.

**೩. ಇಮ್ಮಡಿ ವೆಂಕಟಪ್ಪನಾಯಕನಿಗೆ ೧೬ ಜನ ಪತ್ನಿಯರು. ಅದರಲ್ಲಿ ಪ್ರಮುಖರಾದವರು**

೧. ಪಟ್ಟದ ರಾಣಿ ಲಕ್ಷ್ಮಮ್ಮ
೨. ರಾಣಿ ಕಾಟಮ್ಮ
೩. ರಾಣಿ ನರಸಿಂಗಮ್ಮ

**ಪಟ್ಟದ ರಾಣಿ ಲಕ್ಷ್ಮಮ್ಮ**

ಸುರಪುರದ ಅರಸರಲ್ಲಿ ಈತನೇ ಅತಿ ಹೆಚ್ಚು ರಾಣಿಯನ್ನು ಹೊಂದಿದವನು. ಯಾವುದೇ ಅಂತಃಪುರದಲ್ಲಿ ಅಂತರ್ ಕಲಹ, ಸವತಿ ಮತ್ಸರ ರಾಣಿಯರಲ್ಲಿ ಸಾಮಾನ್ಯ ಸಂಗತಿ. ಆದರೆ ಪಟ್ಟದರಾಣಿಯು ಎಲ್ಲ ರಾಣಿಯರನ್ನು ಸಮಜಾಯಿಸಿಕೊಂಡು ಹೋಗುವ ಜವಾಬ್ದಾರಿ ಇವಳ ಮೇಲೆ ಇರುತ್ತಿತ್ತು. "ರಾಣಿ ಲಕ್ಷ್ಮಮ್ಮ ತನ್ನ ಪತಿ ಇಮ್ಮಡಿ ವೆಂಕಟಪ್ಪನಾಯಕನನ್ನು ಮದ್ಯಪಾನ ಸೇವನೆಯಿಂದ ಬಿಡಿಸುವಳು. ಅದು ತಮ್ಮ ಆಸ್ಥಾನದ ವಯಸ್ಸಾದ ಮಜುಮ್‌ದಾರನಿಗೆ ಹೇಳಿದಾಗ, ಮಜುಮ್‌ದಾರ ರಾಜನ ಕುಡಿತವನ್ನು ಬಿಡಿಸಿದ.ಆಗ ಅರಸ ಎಲ್ಲ ಕುಡಿಯುವ ಪದಾರ್ಥಗಳನ್ನು ಒಡೆಯಿಸಿ ತನ್ನ ಆಪ್ತರಾದ ಕುಡುಕರಿಗೆ ಬರಕೂಡದೆಂದು ಅಪ್ಪಣೆಗೈದನು. ಅರಸನು ಈ ದುಶ್ಚಟವನ್ನು ಬಿಟ್ಟಿದ್ದಕ್ಕಾಗಿ ಪಟ್ಟದರಾಣಿ ಲಕ್ಷ್ಮಮ್ಮ ಮಜುಮ್‌ದಾರನಿಗೆ ಉಡುಗೊರೆ ನೀಡಿ ಮರ್ಯಾದೆ ಮಾಡಿದಳು"[೨೬]. ಈ ರೀತಿ ಪಟ್ಟದ ರಾಣಿಯಾದವಳು ತನ್ನ ಕುಟುಂಬದ ಹಾಗೂ ಇನ್ನು ಉಳಿದ ರಾಣಿಯರು ಮತ್ತು ಮಕ್ಕಳ ಬಗ್ಗೆ ಅಪಾರ ಕಾಳಜಿ ವಹಿಸಬೇಕಾಯಿತು.

**ರಾಣಿ ಕಾಟಮ್ಮ**

ಈಕೆಯೂ ಸಹ ಇಮ್ಮಡಿ ವೆಂಕಟಪ್ಪನಾಯಕನ ಪತ್ನಿ(ಕ್ರಿ.ಶ.೧೭೭೩-೧೮೦೨) ರಾಣಿ ಕಾಟಮ್ಮ ತನ್ನ ಪತಿ ಕ್ರಿ.ಶ.೧೮೦೨ರಲ್ಲಿ ತೀರಿಕೊಂಡನು. ನಂತರ ಈ ಸಂಸ್ಥಾನದ ಅಧಿಕಾರಕ್ಕಾಗಿ ಕೋಲಾಹಲವೆದ್ದಿತು.ಇದ್ದೊಬ್ಬ ಮಗನನ್ನು ಕೈಯ್ಯಾರೆ ಕೊಂದು ಈತನಿಗೆ ರಾಘಮ್ಮಳೆಂಬ ಮಗಳಿದ್ದಳು. "ಈಕೆಯ ಕಾಟಮ್ಮ ತನ್ನ ಮಗ ಬಾಪುಸಾಹೇಬನ ಮಗಳಾದ ವೆಂಕಟರಂಗಮ್ಮಳನ್ನು ಸಿಂಹಾಸನದ ಮೇಲೆ ಕೂಡಿಸಿ ರಾಜ್ಯಭಾರವನ್ನು ಕಾಟಮ್ಮಳೆ ವಹಿಸಿಕೊಂಡಿದ್ದಳು.ಸುತ್ತಮುತ್ತ ವೈರಿಗಳಿರುವಾಗ ರಾಣಿ ಸಂಸ್ಥಾನದ ಸಂಬಂಧಿಕರು ಸಂಸ್ಥಾನದ ಆಡಳಿತಗಾರರು, ರಾಣಿ ಆಡಳಿತ ಬೇಡವೆಂದು ಇದರಿಂದ ತೊಂದರೆಯಾಗುತ್ತದೆಂದು ತಿಳಿಸಿದರಿಂದ ರಾಣಿ ಕಾಟಮ್ಮನು ಈ ಸಂಸ್ಥಾನವು ಸಾಕಷ್ಟು ಗೊಂದಲದಲ್ಲಿದ್ದಳು"[೨೭]. ಇಮ್ಮಡಿ ವೆಂಕಟಪ್ಪನಾಯಕ ಮರಣ ನಂತರ ಸುರಪುರ ಸಂಸ್ಥಾನಬಲವಾದ ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಿತ್ತು. ಆದ ಕಾರಣ ಸಂಬಂಧಿ ಮದನಗೋಪಾಲನಾಯಕ ಮಗನಾದ ಮುಮ್ಮಡಿ ಪಿಡ್ಡನಾಯಕ(ಕ್ರಿ.ಶ.೧೮೦೨-೧೮೧೮)ನನ್ನು ಸುರಪುರದ ಪಟ್ಟಕ್ಕೆ ಕೂರಿಸಲಾಯಿತು"[೨೮]. ಅದನ್ನು ಕಾಟಮ್ಮ ಮತ್ತು ದಿವಾನ ತಿಮ್ಮಪ್ಪನ ಕಡೆಯವರು ವಿರೋಧಿಸಿದರು.ಇಮ್ಮಡಿ ವೆಂಕಟಪ್ಪ ನಾಯಕನ ಮರಣದ ನಂತರ ಮಗ ಬಾಪುಸಾಹೇಬನ ಮರಣ.ಇಲ್ಲಿ ಇವರ ಮರಣದಿಂದ ಉತ್ತರಾಧಿಕಾರಿ ಇಲ್ಲದ ಕಾರಣ ರಾಣಿ ಕಾಟಮ್ಮ ತಮ್ಮ ಬಾಪು ಸಾಹೇಬನ ಮಗಳನ್ನು ಉತ್ತರಾಧಿಕಾರಿ ಮಾಡಿದ್ದನ್ನು ಸಂಬಂಧಿಕರು ವಿರೋಧ ವ್ಯಕ್ತಪಡಿಸಿದರು.ಆಗ ಅಪ್ಪನಾಯಕರು ಅದಕ್ಕೊಂದು

ಶಾಶ್ವತ ಪರಿಹಾರ ರೂಪಿಸಿದರು.ಅದೇನೆಂದರೆ ಮುಮ್ಮಡಿ ಪಿಡ್ಡನಾಯಕನು ಸುರಪುರದ ಪಟ್ಟವೇರಬೇಕು.ಪಟ್ಟವೇರಿದ ಪಿಡ್ಡನಾಯಕ ಕಾಟಮ್ಮ ಹೇಳಿದಂತೆ ರಾಜ್ಯಕಾರ್ಯ ನಡೆಸಬೇಕು ಎಂದು ನಿರ್ಣಯವನ್ನು ತೆಗೆದುಕೊಂಡರು.

**ರಾಣಿ ನರಸಿಂಗಮ್ಮ**

ಇಮ್ಮಡಿ ವೆಂಕಟಪ್ಪ ನಾಯಕನ ಹಲವು ರಾಣಿಯರಲ್ಲಿ ಮುಸ್ಲಿಂ ಜಾತಿ ರಾಣಿಯರು ಸಹ ಇದ್ದರು. ಸುರಪುರದ ಇಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ.೧೭೭೩-೧೮೦೨)ನು ತನ್ನ ಪತ್ನಿ ಕನಕಗಿರಿಯ ನರಸಿಂಗಮ್ಮನ ಉದರದಿಂದ ಬಾಪೂಸಾಹೇಬ ಮತ್ತು ಶ್ರೀನಿವಾಸನಾಯಕ ಎಂಬ ಮಕ್ಕಳನ್ನು ಪಡೆಯುತ್ತಾನೆ. ಕಿರಿಯನಾದ ಶ್ರೀನಿವಾಸ ನಾಯಕನ ಜವಳ ಕಾರ್ಯಕ್ರಮಕ್ಕೆ ಸೋದರಮಾವ ರಂಗಪ್ಪನಾಯಕನ್ನು ಮತ್ತು ಇತರ ಬಂಧು ಬಳಗವನ್ನು ಕರೆ ಕಳುಹಿಸಿದ್ದ. ಆದರೆ ಅವರಾರೂ ಬರಲಿಲ್ಲ. ಕಾರಣ ವೆಂಕಟಪ್ಪ ನಾಯಕ ಮುಸ್ಲಿಂ ಜಾತಿಯ ಕನ್ಯೆಯನ್ನು ಮದುವೆಯಾಗಿ ತನ್ನ ಕುಲದಲ್ಲಿ ಸೇರಿಸಿಕೊಂಡಿದ್ದನು.ಈ ವಿವಾಹ ಇಮ್ಮಡಿ ವೆಂಕಟಪ್ಪನಾಯಕ ನಿಜಾಮರ ಆಡಳಿತದ ಸರ್ಕಾರವು ಇರುವ ಕಾರಣ ಅಥವಾ ತನ್ನ ಮನೋಭಾವ ಸರ್ವಧರ್ಮಗಳ ಸಹಿಷ್ಣುತೆ ಹೊಂದಿರುವ ಮನೋಭಾವನೆ ತಿಳಿಸಲಾಗಿದೆ.

**೪. ರಾಣಿ ವೆಂಕಟಮ್ಮ**

ಕನಕಗಿರಿ ಸಂಸ್ಥಾನದ ಹುಲಿ ಹೈದರ್ ಸಂಸ್ಥಾನದ ೨ನೇ ದೊರೆ ರಂಗಪ್ಪನಾಯಕನ ಪಟ್ಟದರಾಣಿ ರಾಣಿ ವೆಂಕಟಮ್ಮ. ಈ ದಂಪತಿಗಳಿಗೆ ಗಂಡು ಮಕ್ಕಳು ಇರಲಿಲ್ಲ ರಾಣಿ ವೆಂಕಟಮ್ಮ ದೊರೆ ರಂಗಪ್ಪ ನಿಧನ ಹೊಂದಲು ಈತನ ಇನ್ನು ಮೂವರು ಉಪ ಪತ್ನಿಯ(ರಾಣಿಯರು)ರು ಒಪ್ಪಿಗೆಯ ಮೇಲೆ ತನ್ನ ಮೈದುನ ಸೋಮಸಾಗರದ ಚಿಕ್ಕ ನಾಯಕನ ಮಗ ಉಡನಾಯಕನನ್ನು ದತ್ತು ತೆಗೆದುಕೊಂಡಳು. ಉಡಚನಾಯಕ ಚಿಕ್ಕ ವಯಸ್ಸಿನಾಗಿದ್ದರಿಂದ ರಾಣಿ ವೆಂಕಟಮ್ಮ ತಾವೇ ಆಡಳಿತ ನಡೆಸಿದಳು.ಈಕೆ ದತ್ತು ತೆಗೆದುಕೊಂಡ ಮಗ ಚಿಕ್ಕ ವಯಸ್ಸಿನವನಾಗಿದ್ದಾನೆ ಎಂದರೆ ಧಾರ್ಮಿಕ ಪ್ರಕಾರ ಗಂಡನು ಮರಣ ಹೊಂದಿದ್ದರೆ ಆಗ ಚಿಕ್ಕವಯಸ್ಸಿನ ಮಗ ದತ್ತು ತೆಗೆದುಕೊಳ್ಳಬೇಕು, ದತ್ತು ಮಗನು ರಾಣಿಯ ಅಧೀನದಲ್ಲಿ ಅವಳ ಅವಳ ಎದುರಿಸುವಂತ ಮಗನು ಇರಬಾರದು.ಅಥವಾ ದತ್ತು ಮಗ ವಯಸ್ಕರನಾದರೆ ರಾಣಿಗೆ ವಿಧೇಯನಾಗಿರುವುದಿಲ್ಲ ಎಂಬುದು. ದತ್ತು ಪಡೆಯುವವರು ವೃದ್ಯಾಪ್ಯ (ವೃದ್ದರು) ಹೊಂದಿರುವ ವ್ಯಕ್ತಿಗಳ ಪಡೆಯಲು ಬರುವುದಿಲ್ಲ. ಏಕೆಂದರೆ ಪಾಲನೆ ಮಾಡುವ ಸಾಮರ್ಥ್ಯವಿರುವುದಿಲ್ಲ ಎಂಬ ಕಾರಣಕ್ಕೆ. ರಾಣಿ ವೆಂಕಟಮ್ಮ ತನ್ನ ದತ್ತು ಮಗನು ಚಿಕ್ಕ ವಯಸ್ಸಿನವನಾಗಿದ್ದರಿಂದ ರಾಣಿ ದತ್ತು ತೆಗೆದುಕೊಂಡು

ಅವಳೇ ಕೆಲವು ಕಾಲ ಆಡಳಿತ ನಡೆಸಿದಳು. ಜನಪರ ಕಾಳಜಿಯಿಂದ ಕೂಡಿತ್ತೆಂದು ಹೇಳಲಾಗುತ್ತಿದೆ.

**೫. ರಾಣಿ ಗೌರಮ್ಮ**

ಕನಕಗಿರಿ ಸಂಸ್ಥಾನ ಹುಲಿ ಹೈದರ್ ಸಂಸ್ಥಾನದ ೩ನೆಯ ದೊರೆ ಉಡಚನಾಯಕನ ರಾಣಿ ಗೌರಮ್ಮ. ಈಕೆಯ ಗಂಡನ ಮರಣ ನಂತರ ತನ್ನ ಮಗ ರಾಜಾ ರಂಗಪ್ಪ ನಾಯಕನನ್ನು ರಾಣಿ ಗೌರಮ್ಮ ಪಟ್ಟಕ್ಕೆ ಕುರಿಸಿದಳು. ಮಗ ಚಿಕ್ಕ ವಯಸ್ಸಿನವನು ಇರುವುದರಿಂದ ರಾಣಿ ಗೌರಮ್ಮ ಆಡಳಿತ ನಡೆಸಿದಳು. ರಾಣಿ ಗೌರಮ್ಮನ ಆಡಳಿತಕ್ಕೆ ನಿದರ್ಶನ ಎಂಬಂತೆ "ರಾಣಿ ಗೌರಮ್ಮ ರೈತರಿಗೆ ಹೆಚ್ಚಿನ ಅನುಕೂಲತೆಗಳನ್ನು ಒದಗಿಸಿದಳು, ಹೆಚ್ಚಿಗೆ ಧಾನ್ಯ ಬೆಳೆದ ರೈತನನ್ನು ಆಸ್ಥಾನಕ್ಕೆ ಕರೆಯಿಸಿ ತನ್ನ ಆಸನದ ಪಕ್ಕದಲ್ಲಿ ಮತ್ತೊಂದು ಆಸನ ಹಾಕಿಸಿ ರೈತರನ್ನು ಅಲ್ಲಿ ಕೂಡಿಸಿ ಗೌರವಿಸುತ್ತಿದ್ದಳು"[೯]. ರಾಣಿ ಗೌರಮ್ಮನವರು ಉತ್ತಮ ಆಡಳಿತ ಪ್ರಜಾಹಿತ ಕಾರ್ಯ ಮಾಡಿರುವರು. ರಾಣಿ ಗೌರಮ್ಮನವರು ಆಡಳಿತ ಮಾಡುವ ಸಂದರ್ಭದಲ್ಲಿ ಹೈದರಾಬಾದ್ ನಿಜಾಮ ಸರ್ಕಾರವು ಕನಕಗಿರಿ ಸಂಸ್ಥಾನವು ಆಡಳಿತ ಕುಸಿದಿದ್ದರಿಂದ ತನ್ನ ವಶಕ್ಕೆ ತೆಗೆದುಕೊಂಡನು. ಆಡಳಿತ ಕುಸಿಯಲು ಕಾರಣ ಕನಕಗಿರಿ ಸಂಸ್ಥಾನದ ಸುಬೇದಾರರು ದುರಪಯೋಗ ಮಾಡಿಕೊಂಡರು, ರಾಣಿಯರನ್ನು ಚಿಕ್ಕ ವಯಸ್ಸಿನಲ್ಲಿ (ಬಾಲ್ಯದಲ್ಲಿ) ವಿವಾಹ ಮಾಡುವುದು, ಶಿಕ್ಷಣದಲ್ಲಿ ಹೆಚ್ಚಿನ ಶಿಕ್ಷಣ ಪಡೆಯದೇ ಇರುವುದು, ಘೋಷ ಪದ್ಧತಿಯಲ್ಲಿ ರಾಣಿಯನ್ನು ಹುಟ್ಟಿನಿಂದ ಮತ್ತು ಕೊನೆಯವರೆಗೂ ಇದೆ ಈ ಕಟ್ಟುಪಾಡುಗಳಲ್ಲಿ ಬೆಳೆಸುತ್ತದೆ ಹೊರತು, ಈ ರಾಜಕುಮಾರಿ ಆಡಳಿತ ಮುಂದೆ ನಡೆಸುತ್ತಾಳೆ ಎಂಬ ಉದ್ದೇಶವಿರುವುದಿಲ್ಲ. ಸಬಲಳು ಆಗದೇ ಅಬಲಳು ಆಗುತ್ತಾಳೆ. ಆದರೂ ರಾಣಿ ಗೌರಮ್ಮನವರು ಕಾಲಕ್ಕೆ (ಸಮಯಕ್ಕೆ) ಹೊಂದಿಕೊಳ್ಳುತ್ತ ಕನಕಗಿರಿಯ ಆಡಳಿತ ನಡೆಸಿದಳು. ಆದರೆ ರಾಣಿ ಗೌರಮ್ಮನವರೂ ಘೋಷದಲ್ಲಿ ಇದ್ದುಕೊಂಡು ಆಡಳಿತ ವರ್ಗದ (ಸುಬೇದಾರರು)ವರಿಗೆ ಆಜ್ಞೆ ಮಾಡಬಹುದು ರಾಣಿ ಗೌರಮ್ಮನವರು ಹೊರಗಡೆ ಬಂದು ಶ್ರೀಸಾಮಾನ್ಯರಂತೆ ವ್ಯವಹಾರ ಮಾಡಲು ಸಾಧ್ಯವಿಲ್ಲ. "ಆಡಳಿತ ಕುಸಿದಿದ್ದರಿಂದ ಹೈದರಾಬಾದ್ ನಿಜಾಮ ಸರ್ಕಾರ ಕನಕಗಿರಿ ಸಂಸ್ಥಾನವನ್ನು ತನ್ನ ವಶಕ್ಕೆ ತೆಗೆದುಕೊಂಡನು. ರಾಣಿ ಗೌರಮ್ಮ ಮತ್ತು ಆಕೆಯ ದತ್ತು ಪುತ್ರ ರಂಗಪ್ಪನಾಯಕನಿಗೆ ಮಾಸಾಶನವನ್ನು ನೀಡಿದರು. ರಾಣಿ ಹೈದರಾಬಾದ್‌ನಲ್ಲಿಯೇ ನಿಧನಳಾದಳು"[೩೦]. ನಂತರ ಈ ಸಂಸ್ಥಾನ ಕ್ರಿ.ಶ. ೧೯೪೮ರಲ್ಲಿ ಭಾರತದ ಒಕ್ಕೂಟದೊಂದಿಗೆ ವಿಲೀನವಾಯಿತು.೧೯೫೨ರಲ್ಲಿ ಇವರ ಜಹಗೀರುಗಳೆಲ್ಲ ರದ್ದಾದವು.ನಂತರ ಉಳಿದ ಜಹಗೀರಿಯು ಮಗ ರಂಗಪ್ಪನಾಯಕನಿಗೆ ನೀಡಲಾಗಿತ್ತು.

## ೬. ರಾಣಿ ಸಾವಿತ್ರಮ್ಮಾಜಿ

ಗುಡೇಕೋಟೆ ಸಂಸ್ಥಾನದ ರಾಣಿ ಸಾವಿತ್ರಮ್ಮಾಜಿ, "ಈಕೆ ಜಟ್ಟಿಂಗ ರಾಜನ ಸಹೋದರ ಸದಾಶಿವರಾಜನ ಮಗಳು, ಜಟ್ಟಿಂಗರಾಜನು ಮರಣ ನಂತರ ಈತನ ಮಗ ಚಿಕ್ಕವಯಸ್ಸಿನವನಾದ ಕೃಷ್ಣ ರಾಜವರ್ಮ ನವರು, ಆದ ಕಾರಣ ರಾಣಿಸಾವಿತ್ರಮ್ಮ ನವರು ಗುಡೇಕೋಟೆ ಸಂಸ್ಥಾನವನ್ನು ನೋಡಿಕೊಂಡು ಹೋಗುವ ಜವಾಬ್ದಾರಿಯನ್ನು ಹೊಂದಿದ್ದರು"[೩೧]. ರಾಣಿ ಸಾವಿತ್ರಮ್ಮನವರ ವ್ಯಕ್ತಿತ್ವ ಹಾಗೂ ಗಂಭೀರ ಇವರು ಒಬ್ಬ ಅರಸನಂತೆ ಆಡಳಿತ ನಡೆಸುವ ಗುಣ ಹೊಂದಿದಳು. ಈಕೆಯ ಆಡಳಿತ ಸಮಯದಲ್ಲಿ ಗುಡೇಕೋಟೆ ಸಂಸ್ಥಾನ ಇವಳ ಅಧೀನದಲ್ಲಿ ಇತ್ತು.ಸರ್ಕಾರಿಯ ಪೋಲಿಸ್ ಕಛೇರಿ ಇತ್ತು.ಈ ಸಂಸ್ಥಾನದ ಸುತ್ತ ಮುತ್ತಲಿನ ಜನರು ಯಾವುದೇ ನ್ಯಾಯತೀರ್ಮಾನ, ಕೌಟುಂಬಿಕ ಕಲಹ ಯಾವುದೇ ಆದಲ್ಲಿ ರಾಣಿಸಾವಿತ್ರಮ್ಮ ನವರ ಹತ್ತಿರ ಬರುವ ಪದ್ಧತಿ ಇತ್ತು.ನ್ಯಾಯತೀರ್ಮಾನಗಳು ಮಾಡುತ್ತದೆ ಎಂದರೆ "ಊರು ಜನರಿಗೆ ತಮಟೆ ಬಾರಿಸುವ ಒಬ್ಬ ವ್ಯಕ್ತಿಯಿಂದ ಬಾಯಿಂದ ಸಾರು (ಹೇಳುವ) ಹಾಕುವ ಮೂಲಕ"[೩೨]ಜನರಿಗೆ ತಮಟೆ ಶಬ್ಧಕ್ಕೆ ಸಭೆಯನ್ನು ಸೇರಬೇಕು ಸೂಚನೆಯನ್ನು ಸಿಗುತ್ತದೆ.ಈ ಸಂಸ್ಥಾನ ದ್ವಾರದಲ್ಲಿಯೇ ನ್ಯಾಯನಿರ್ಣಯವನ್ನು ಮಾಡುತ್ತಿದ್ದರು ಮತ್ತು ಇವರ ಮನೆತನದಲ್ಲಿ ಈ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

"ರಾಣಿ ಸಾವಿತ್ರಮ್ಮನವರು ಹೊಲ, ಗದ್ದೆ, ಸಂಸ್ಥಾನದ ವ್ಯವಹಾರ ಸಹ ತಾವೇ ನಿಭಾಯಿಸುವ ಹೊಣೆ ಹೊಂದಿದರು. ಘೋಷ ಪದ್ದತಿಯು ಇದ್ದರೂ ರಾಣಿಯವರು ಜಮೀನನ್ನು ಉಳುಮೆ ಮಾಡಿಸುವ ಕಾರ್ಯ, ಅವರು ಸ್ವತಃ ನಿಂತು ಕೆಲಸ ಕಾರ್ಯಗಳನ್ನು ಮಾಡಿಸುವುದು ಹಾಗೂ ಬೇರೆ ಸಂಸ್ಥಾನಗಳೊಂದಿಗೆ ವ್ಯಾಪಾರ ಮಾಡುತ್ತಿದ್ದರು.ಸಂಸ್ಥಾನದಿಂದ ಹೊರಗಡೆ ಹೋಗಬೇಕಾದರೆ ಗಾಡಿಯಲ್ಲಿ ಅದಕ್ಕೆ ಪರದೆಯನ್ನು ಹಾಕಿರುವಂತಹದ್ದು ಇರುತ್ತಿತ್ತು"[೩೩]. ಹಾಗೆಯೇ ರಾಣಿ ಸಾವಿತ್ರಮ್ಮನವರು ಸಹೋದರಿಯು ರಾಣಿ ಸಿದ್ದಮ್ಮಾಜಿ ಸಂಸ್ಥಾನದ ಅರಮನೆ ಒಳಗೆ ಕೆಲಸ ಕಾರ್ಯಗಳು, ಕುಟುಂಬವನ್ನು ನಿಭಾಯಿಸುವುದು, ಇವರ ಜವಾಬ್ದಾರಿಯಾಗಿತ್ತು. ಸಂಸ್ಥಾನದಲ್ಲಿ ಕೆಲಸ ಮಾಡುವ ಜನರು ಹಾಗೂ ಸಂಸ್ಥಾನಕ್ಕೆ ಸಹಾಯ ಯಾಚಿಸಿ ಬಂದ ಜನರನ್ನು ಪರಿಹರಿಸುವುದು ಮತ್ತು ಇವರು ಬಿಡುವಿನ ವೇಳೆ ರಾಮಾಯಣ ಮತ್ತು ಮಹಾಭಾರತವನ್ನು ಪಾರಾಯಣ ಮಾಡಿ ಅದನ್ನು ಸಂಸ್ಥಾನದ ಕುಟುಂಬದವರಿಗೆ ವಿವರಿಸಿ ಹೇಳುತ್ತಿದ್ದರು.ಜೊತೆಗೆ ಕಾದಂಬರಿ, ಕಥೆ ಪುಸ್ತಕ ಓದುವ ಹವ್ಯಾಸ ಹೊಂದಿದ್ದರು. ಈ ಸಂಸ್ಥಾನದ ರಾಣಿ ಸಾವಿತ್ರಮ್ಮಾಜಿ, ರಾಣಿ ಸಿದ್ದಮ್ಮಾಜಿ ಇವರು ಆಡಳಿತ ವ್ಯಾಪಾರ, ವ್ಯವಹಾರ, ಓದುವ ಬರೆಯುವ ಸಾಮರ್ಥ್ಯ ಹೊಂದಿದರು ಇವರು ಶಿಕ್ಷಣವನ್ನು ಅರಮನೆಯಲ್ಲಿ ಶಿಕ್ಷಕರು ಬಂದು ಶಿಕ್ಷಣ ನೀಡುತ್ತಿದ್ದರು.ಘೋಷ ಪದ್ದತಿ ಇರುವುದರಿಂದ ಇವರು ಎಂಟನೇ ತರಗತಿ ಓದಿರುವರು ಎಂದು ಹೇಳಲೂ ಬರುವುದಿಲ್ಲ ಏಕೆಂದರೆ ಶಿಕ್ಷಣ ಅರಮನೆಯ ಒಳಗೆ ಶಿಕ್ಷಣ

ಪಡೆದಿದ್ದಾರೆ ಆದ ಕಾರಣ ಅಕ್ಷರ ಜ್ಞಾನ ಇದೆ, ವ್ಯವಹಾರ ಜ್ಞಾನ ಇದೆ, ಎಂದು ಹೇಳಬಹುದು.ಎಲ್ಲಾ ಜವಾಬ್ದಾರಿಯನ್ನು ವಹಿಸಿರುವ ಇವರು ರಾಜಕೀಯವಾಗಿ, ಸಮಾಜಕಾರ್ಯ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ತೊಡಗುತ್ತಿದ್ದರು.ರಾಣಿ ಸಾವಿತ್ರಮ್ಮಾಜಿಯವರ ನಂತರ ಕೃಷ್ಣವರ್ಮ ರಾಜರಿಗೆ ದೊರೆಯ ಪಟ್ಟ ಕಟ್ಟಲಾಯಿತು.

**೭. ರಾಣಿ ಪಂದಿಕೋನಿ ಲಕ್ಷ್ಮಮ್ಮ**

ದೇವದುರ್ಗ ನಾಯಕ ಸಂಸ್ಥಾನದ ಅರಸ ರಂಗಪ್ಪ ನಾಯಕ ಈತನಿಗೂ ಸುರಪುರದ ಅರಸರಿಗೂ ಕೆಲವು ಕಾರಣಾಂತರಗಳಿಂದ ವ್ಯಾಜ್ಯವಿತ್ತು. ಇದು ಮುಂದುವರಿದು ಸುರಪುರದ ಸೈನ್ಯ ದೇವದುರ್ಗ ಮುತ್ತಿತ್ತು.ರಂಗಪ್ಪನಾಯಕನು ತಲೆ ಮರೆಸಿಕೊಂಡನಾದರೂ ಆತನನ್ನು ಶೋಧಿಸಲು ಸುರಪುರ ಸೈನ್ಯ ಬೆನ್ನುಹತ್ತಿತ್ತು. "ಈತ ಉಳಿದ ಪರಿವಾರದವರೊಂದಿಗೆ ತಪ್ಪಿಸಿಕೊಳ್ಳುವ ಯತ್ನದಲ್ಲಿ ದೇವದುರ್ಗ ಬೆಟ್ಟದ ಪೂರ್ವಕ್ಕಿದ್ದ ಮದ್ದಿನ ಮನೆಗೆ ಹೋಗಿ ತಾನೂ ತನ್ನ ಪರಿವಾರವೂ ತನ್ನನ್ನೂ ಬೆನ್ನಟ್ಟಿದ್ದ ಸುರಪುರದ ಸೈನ್ಯವೂ ಸಿಡಿಮದ್ದಿಗೆ ಆಹುತಿಯಾಯಿತು.ಈ ಘಟನೆಯಿಂದ ಈತನಿಗೆ ಕೊಳ್ಳಿ ರಂಗಪ್ಪನಾಯಕನೆಂಬ ಹೆಸರು ಬಂದಿತು.ಈ ಘಟನೆಯಿಂದ ತನ್ನ ಪತ್ನಿಯು ಉಳಿದಿರುವಳು ಒಬ್ಬಳೆ ರಾಣಿ ಅದು ರಾಣಿ ಪಂದಿಕೋನಿ ಲಕ್ಷ್ಮಮ್ಮ ಅವರು ಹೆರಿಗೆಗೆ ಎಂದು ತವರು ಮನೆಗೆ ಹೋಗಿದ್ದ ಕಾರಣದಿಂದ ಇವಳ ಹೆಸರು. ಹಾಗೂ ಕೂಳ್ಳಿರಂಗಪ್ಪನ ಪತ್ನಿ ಎಂದು ಐತಿಹಾಸಿಕವಾಗಿ ಕಾಣಬಹುದಾಗಿದೆ"[೩೪]. ರಾಣಿ ಪಂದಿಕೋನಿ ಲಕ್ಷ್ಮಮ್ಮನವರಿಗೆ ಗಂಡು ಮಗು ಹುಟ್ಟಿತು. ಅವನೇ ಕೃಷ್ಣಪ್ಪನಾಯಕ.ಇವನು ಜನಿಸುವ ಮೊದಲೇ ದೇವದುರ್ಗ ಸಂಸ್ಥಾನವನ್ನು ಸುರಪುರದ ಅರಸರು ಆಡಳಿತ ಮಾಡುತ್ತಿದ್ದರು.ನಂತರದಲ್ಲಿ ಮುಂದೆ ದೇವದುರ್ಗ ಅರಸನಾದನು.ಕೃಷ್ಣಪ್ಪನಾಯಕನು ಚಿಕ್ಕವಯಸ್ಸಿನವನು ಆದ ಕಾರಣ ರಾಣಿ ಪಂದಿಕೋನಿ ಲಕ್ಷ್ಮಮ್ಮನ ಸ್ವಾಧೀನದಲ್ಲಿ ಸಂಸ್ಥಾನ ಕೆಲವು ಪ್ರದೇಶ ದೇವದುರ್ಗ, ಅರಕೇರಿ, ಕ್ಯಾದಿಗೆರಿ, ಜಾಲಿಬೆಂಚಿ, ಗೋನವಾಟ್ಲ, ಐದಭಾವಿ ಈ ಪರಗಣಗಳು ವೆಂಕಟಪ್ಪನಾಯಕನ ಅಧೀನಕ್ಕೆ ಒಳಪಟ್ಟವು.ಆಗ ನಿಜಾಮನು ಈ ಪರಗಣಗಳನ್ನು ವೆಂಕಟಪ್ಪನಾಯಕನಿಗೆ ಕೊಟ್ಟು ಸನದು ಬರೆದುಕೊಟ್ಟನು, ನಮಕವಾಸ್ಥೆ ದೇವದುರ್ಗದ ಅರಸು ಕೃಷ್ಣಪ್ಪನಾಯಕ, ಆಡಳಿತವೆಲ್ಲ ಸುರಪುರ ಸಂಸ್ಥಾನಕ್ಕೆ ನೀಡಲಾಗಿತ್ತು.

**೮. ಗುಡಗುಂಟಿ ರಾಣಿಯರು ಕಾಟಮ್ಮ, ರಾಣಿ ಗೌರಮ್ಮ ಮತ್ತು ರಾಣಿ ಲಕ್ಷ್ಮಿದೇವಿ**

**ರಾಣಿ ಕಾಟಮ್ಮ**

ಈಕೆ ಗುಡಗುಂಟಿ ಅರಸ ಸೋಮಲಿಂಗನಾಯಕನ ಪತ್ನಿ ಇವರಿಗೆ ಮಕ್ಕಳಿಲ್ಲರಲಿಲ್ಲ. ಆ ಸಮಯದಲ್ಲಿ ನಿಜಾಮ ಸರ್ಕಾರದ ಅಧೀನದಲ್ಲಿ ಇವರ ಸಂಸ್ಥಾನವು ಇತ್ತು. ರಾಣಿ ಕಾಟಮ್ಮ

ನಿಜಾಮ ಸರ್ಕಾರದಿಂದ ದತ್ತು ತೆಗೆದುಕೊಳ್ಳುವುದಕ್ಕೆ ಅನುಮತಿ ಕೋರಿ ಅವರಿಂದ ಒಪ್ಪಿಗೆ ಪಡೆದುಕೊಂಡಳು. ದತ್ತು ಮಕ್ಕಳನ್ನು ತನ್ನ ರಕ್ತ ಸಂಬಂಧಿಕರಲ್ಲಿಯೇ ಪಡೆಯಬೇಕು ಆದ ಕಾರಣ "ತನ್ನ ಮೈದುನನ (ಪಂಪಾತಿನಾಯಕ) ಮಗನಾದ ರಾಜಾ ಜಡಿಸೋಮಪ್ಪ ನಾಯಕನನ್ನು ದತ್ತು ತೆಗೆದುಕೊಂಡಳು"[೩೫]. ಈತ ಚಿಕ್ಕವನಿದ್ದ ಕಾರಣಕ್ಕೆ ಸಂಸ್ಥಾನವನ್ನು ನಿಜಾಮ ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡದ್ದರಿಂದ, ಅವರ ಅನುಮತಿಯತ್ತ ಆಡಳಿತ ನಡೆಸಿದಳು.ಜೊತೆಗೆ ನಿಜಾಮ ಸರ್ಕಾರ ಒಬ್ಬ ಸರ್ಕಾರಿ ಅಧಿಕಾರಿಯನ್ನು ನೇಮಿಸಿತು. "ಅವರಿಗೆ 'ನಾಜಿಮ್' ಎನ್ನುತ್ತಿದ್ದರು. ಸರ್ವೇಸಾಮಾನ್ಯವಾಗಿ ರಾಜಕುಮಾರನು ವಯಸ್ಕನು ಆದನಂತರ ಪಟ್ಟದ ಅರಸನಾಗುವನು. ಗುಡಗುಂಟಿ ನಾಯಕ ಸಂಸ್ಥಾನವನ್ನು ಆಡಳಿತ ಮಾಡಿದನು.ರಾಜಾ ಜಡಿಸೋಮಪ್ಪನಾಯಕನು ಕೆಲವು ದಿನಗಳು ಆಡಳಿತ ಮಾಡಿದ ನಂತರ ತೀರಿಕೊಂಡನು"[೩೬]. ಈತನ ಮರಣದ ಕಾರಣದಿಂದ ಹಾಗೂ ಇವನಿಗೆ ಮಕ್ಕಳಿಲ್ಲದ ಕಾರಣದಿಂದ ನಿಜಾಮ ಸರ್ಕಾರಕ್ಕೆ ಗುಡಗುಂಟಿ ಸಂಸ್ಥಾನವು ತನ್ನ ವಶಕ್ಕೆ ತೆಗೆದುಕೊಂಡಿತು.ಎಂಟು ತಿಂಗಳಿನ ನಂತರ ಈ ಮನೆತನದ ರಾಣಿಯರು ಸಂಸ್ಥಾನವನ್ನು ಮರಳಿ ಪಡೆಯಬೇಕು ಎಂದು ಪ್ರಯತ್ನಿಸಿದರು.ರಾಜ ಜಡಿಸೋಮಪ್ಪನಾಯಕನ ಪತ್ನಿಯರು ಪಟ್ಟದ ರಾಣಿ ಗೌರಮ್ಮ, ಉಪಪತ್ನಿಯರು ರಾಣಿ ಲಕ್ಷ್ಮಮ್ಮ, ರಾಣಿ ಚಿನ್ನಮ್ಮ ಇವರಿಗೆ ಮಕ್ಕಳಿಲ್ಲದ ಕಾರಣ ರಾಣಿ ಗೌರಮ್ಮ ನಿಜಾಮ ಸರ್ಕಾರದ ಅನುಮತಿಯ ಮೇರೆಗೆ ತನ್ನ ಮೊಮ್ಮಗನಾದ ರಾಜಾ ತಿಪ್ಪರಾಜ ಜಡಿಸೋಮ ನಾಯಕ (ಕ್ರಿ.ಶ. ೧೯೦೧ ರಿಂದ ೧೯೫೬)ನ್ನು ದತ್ತು ತೆಗೆದುಕೊಂಡಳು. ರಾಣಿ ಗೌರಮ್ಮ ಆಡಳಿತ ಮುಂದುವರಿಸಿದಳು. ನಂತರ ಅರಸ ವಯಸ್ಸಿಗೆ ಬಂದ ಮೇಲೆ ಪದ್ಧತಿಯಾಯಿತು. ದೊರೆಯ ಪಟ್ಟ ಕಟ್ಟಲಾಗುವುದು ಇತನು ಆಡಳಿತಕ್ಕೆ ಬಂದಮೇಲೆ ಗುಡಗುಂಟಿ ಸಂಸ್ಥಾನವನ್ನು ಜವಾಬ್ದಾರಿಯಿಂದ ನೋಡಿಕೊಂಡನು, ಈತನಿಗೆ ಪತ್ನಿಯರು ಮೂರುಜನ ರಾಣಿ ಲಕ್ಷ್ಮಿದೇವಿ, ರಾಣಿ ಲಲಿತಾದೇವಿ, ರಾಣಿ ಕೃಷ್ಣಮ್ಮ ಎಂಬುವರು ಇದ್ದರು. ರಾಣಿ ಲಕ್ಷ್ಮಿದೇವಿಗೆ ಮಕ್ಕಳಿಲ್ಲ, ರಾಣಿ ಲಲಿತಾದೇವಿಗೆ ಮಗ ರಾಜಾ ಗುರುರಾಜ ನಾಯಕ ಇದ್ದನು. ರಾಣಿ ಕೃಷ್ಣಮ್ಮನಿಗೆ ಮಗ ರಾಜಾ ಅರಪ್ಪನಾಯಕ, ಅರಸ ರಾಜ ತಿಪ್ಪರಾಜ ಜಡಿಸೋಮನಾಯಕನಿಗೆ ೪೪ ಹಳ್ಳಿಗಳನ್ನು ತನ್ನ ಅಧಿಕಾರಾವಧಿಯಲ್ಲಿ ಈ ಹಳ್ಳಿಗಳನ್ನು ಆಡಳಿತ ಮಾಡಿದನು. ಇವರನ್ನು 'ತಿಪ್ಪರಾಜ ಸರ್ಜಾಬಹದ್ದೂರ್' ಎಂದು ಕರೆಯುತ್ತಿದ್ದರು.ಇಲ್ಲಿಗೆ ರಾಣಿಯರ ಆಡಳಿತ ಕಂಡು ಬರುವುದಿಲ್ಲ.

### ೯. ರಾಣಿ ಕುಪ್ಪಮ್ಮ

ಆನೆಗೊಂದಿಯ ನಾಯಕ ಸಂಸ್ಥಾನದ ಅರಸ ಕೃಷ್ಣದೇವರಾಯನಿಗೆ ಕ್ರಿ.ಶ. ೧೮೬೭ರಲ್ಲಿ ಪಟ್ಟ ಕಟ್ಟಲಾಯಿತು. ಮರು ವರ್ಷವೇ ಆತನು ಮರಣ ಹೊಂದಿದ.ಹಾಗಾಗಿ ಅವನ ಸಹೋದರಿಯ ಮಗ ಪೆದ್ದು ನರಸಿಂಹನನ್ನು ಪಟ್ಟಕ್ಕೆ ತರಲಾಯಿತು.ಇವನು ಕೂಡ ಕ್ರಿ.ಶ.

೧೮೮೩ರಲ್ಲಿ ಮರಣ ಹೊಂದಿದನು. ಈತನ ತರುವಾಯ ರಾಣಿ ನರಸಿಂಗಮ್ಮ ತಾನೇ ಸಂಸ್ಥಾನದ ಜವಾಬ್ದಾರಿ ವಹಿಸಿಕೊಂಡಳು. ಆದರೆ ಕಾರಣಾಂತರದಿಂದ ರಾಣಿ ನರಸಿಂಗಮ್ಮನನ್ನು ಪದಚ್ಯುತಗೊಳಿಸಿ ರಾಣಿ ಕುಪ್ಪಮ್ಮ ಅಧಿಕಾರಕ್ಕೆ ಬರುತ್ತಾಳೆ.

ಆನೆಗೊಂದಿ ಸಂಸ್ಥಾನದ ಅರಸ ಕೃಷ್ಣದೇವರಾಯನಿಗೆ ಕ್ರಿ.ಶ. ೧೮೬೭ ರಲ್ಲಿ ಪಟ್ಟ ಕಟ್ಟಲಾಯಿತು. ಮರು ವರ್ಷವೇ ಮರಣ ಹೊಂದಿದ, ಹಾಗಾಗಿ ಅವನ ಸಹೋದರಿಯ ಮಗ ಪೆದ್ದ ನರಸಿಂಹನನ್ನು ಪಟ್ಟಕ್ಕೆ ತರಲಾಯಿತು. ಇವನೂ ಕೂಡ ಕ್ರಿ.ಶ. ೧೮೮೩ ರಲ್ಲಿ ಮರಣ ಹೊಂದಲು ಈತನ ರಾಣಿ ನರಸಿಂಗಮ್ಮ ತಾನೇ ಸಂಸ್ಥಾನದ ಜವಾಬ್ದಾರಿಯನ್ನು ವಹಿಸಿಕೊಂಡಳು. ಆದರೆ ಕೆಲವು ಕಾರಣಾಂತರಗಳಿಂದ ರಾಣಿ ನರಸಿಂಗಮ್ಮಳನ್ನು ಪದಚ್ಯುತಗೊಳಿಸಿ ರಾಣಿಕುಪ್ಪಮ್ಮ ಅಧಿಕಾರಕ್ಕೆ ಬರುತ್ತಾಳೆ.ಈಕೆಯ ಅಧಿಕಾರಾವಧಿಯಲ್ಲಿ ಅನೇಕ ನ್ಯಾಯಾಂಗದ ಸುಧಾರಣೆ ಮಾಡಿದಳು. "ಆನೆಗೊಂದಿಯ ಸಂಸ್ಥಾನದ ರೈತರು ಹಾಗೂ ಅಧಿಕಾರಿಗಳು ಭೂಮಿಗೆ ನೀರನ್ನು ಬಿಡುವುದರ ಕುರಿತಾಗಿ ಜಗಳವಾಯಿತು.ಆಗ ರಾಣಿ ಕುಪ್ಪಮ್ಮ ರೈತರ ಪರವಾಗಿ ನಿಂತು ಅವರ ಹೊಲಕ್ಕೆ ನೀರನ್ನುಣಿಸುವಲ್ಲಿ ಸಹಕಾರ ನೀಡಿದಳು. ಅಲ್ಲದೆ, ಈಕೆಯ ಅಧಿಕಾರಾವಧಿಯಲ್ಲಿ ಅನೇಕ ನ್ಯಾಯಗಳು ಇತ್ಯರ್ಥಗೊಂಡಿವೆ"[೩೭]. ಇಂದಿನ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಅರಕ್ಷಕಠಾಣೆಗಳು ಹಾಗೂ ನ್ಯಾಯಾಲಯಗಳು ವ್ಯಾಜ್ಯಗಳನ್ನು ಬಗೆಹರಿಸುವ ಕಾರ್ಯವನ್ನು ಮಾಡುತ್ತಿದ್ದರೂ ಆನೆಗೊಂದಿ ಅರಸರ ಸಮ್ಮುಖದಲ್ಲಿ ಸುತ್ತಮುತ್ತಲಿನ ಹಳ್ಳಿಯ ವ್ಯಾಜ್ಯಗಳು ಇಂದಿಗೂ ಬಗೆಹರಿಯುತ್ತಿರುತ್ತವೆ. ಇದಕ್ಕೆ ಇಲ್ಲಿಯ ಜನ ಸಾಮಾನ್ಯರು ಆನೆಗೊಂದಿ ಅರಸರ ಮೇಲಿಟ್ಟಿರುವ ಅಭಿಮಾನವೇ ಕಾರಣವೆನಿಸಿದೆ.

## ಟಿಪ್ಪಣಿಗಳು

೧. ಅಮರೇಶ ಯತಗಲ್, ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು, ಅನುಬಂಧ–೨.

೨. ಅದೇ, ಪು. ೫೩.

೩. ಕೊಟ್ರೇಶ್ ಎಂ. ಕಲ್ಯಾಣ ಕರ್ನಾಟಕದ ಅರಸು ಮನೆತನಗಳು, ಪು. ೧೫೩.

೪. ಅಮರೇಶ ಯತಗಲ್, ಪೂರ್ವೋಕ್ತ, ಪು.೭೧.

೫. ಇವರ ಹೇಳಿಕೆ, ಜರಿಮಲೆ ದೊರೆ ಸಿದ್ದಪ್ಪ ನಾಯಕ.

೬. ಇವರ ಹೇಳಿಕೆ, ಜರಿಮಲೆ ದೊರೆ ಸಿದ್ದಪ್ಪ ನಾಯಕ.

೭. ಕೊಟ್ರೇಶ್ ಎಂ. ಪೂರ್ವೋಕ್ತ, ಪು.೬೩.

೮. ಇವರ ಹೇಳಿಕೆ, ಗುಂತಗೋಳದ ದೊರೆ ಶ್ರೀನಿವಾಸ ನಾಯಕ.

೯. ಇವರ ಹೇಳಿಕೆ, ಗುಂತಗೋಳದ ದೊರೆ ಶ್ರೀನಿವಾಸ ನಾಯಕ.

೧೦. ಇವರ ಹೇಳಿಕೆ, ಗುಡೇಕೋಟೆ ರಾಣಿ ಪದ್ಮಾವತಿ.

೧೧. ಇವರ ಹೇಳಿಕೆ, ಗುಡೇಕೋಟೆ ರಾಣಿ ಪದ್ಮಾವತಿ.

೧೨. ಅಮರೇಶ ಯತಗಲ್, ಪೂರ್ವೋಕ್ತ, ಪು. ೯೫.

೧೩. ಇವರ ಹೇಳಿಕೆ, ರಾಜಾ ಶರತ್ ಚಂದ್ರಶೇಖರ್ ಕನಕಗಿರಿ.

೧೪. ಅಮರೇಶ ಯತಗಲ್, ಪೂರ್ವೋಕ್ತ, ಪು.೯೧.

೧೫. ಅದೇ, ಪು. ೯೧.

೧೬. ಇವರ ಹೇಳಿಕೆ, ರಾಜಾ ಶರತ್ ಚಂದ್ರಶೇಖರ್.

೧೭. ಇವರ ಹೇಳಿಕೆ, ರಾಜಾ ಶರತ್ ಚಂದ್ರಶೇಕರ್.

೧೮. ಇವರ ಹೇಳಿಕೆ, ದೇವದುರ್ಗ ರಾಜಾ ರವಿವರ್ಮನಾಯಕ.

೧೯. ಇವರ ಹೇಳಿಕೆ, ದೇವದುರ್ಗ ರಾಜಾ ರವಿವರ್ಮನಾಯಕ.

೨೦. ಅಮರೇಶ ಯತಗಲ್, ಪೂರ್ವೋಕ್ತ, ಪು.೭೧

೨೧. ಅದೇ, ಪು.೭೧

೨೨. ಅದೇ, ಪು.೫೧.

೨೩. ಅದೇ, ಪು.೫೨.

೨೪. ಅಮರೇಶ ಯತಗಲ್, ಚಾರಿತ್ರಿಕ ಸುರಪುರ ಅಧ್ಯಯನಾತ್ಮಕ ನೋಟಗಳು, ಪು.೫೩.

೨೫. ಅಮರೇಶ ಯತಗಲ್, ಇತಿಹಾಸ ಇಂಚನ, ಪು.೦೬.

೨೬. ಅಮರೇಶ ಯತಗಲ್, ಪೂರ್ವೋಕ್ತ, ಪು.೨೦೧.

೨೭. ಅದೇ, ಪು.೨೦೨.

೨೮. ಅದೇ, ಪು.೧೩.

೨೯. ತಾರಿಹಳ್ಳಿ ಹನುಮಂತಪ್ಪ, ಕನಕಗಿರಿ ನಾಯಕರು, ಪು.೫೩.

೩೦. ಅಮರೇಶ ಯತಗಲ್, ಪೂರ್ವೋಕ್ತ, ಪು.೯೧.

೩೧. ಇವರ ಹೇಳಿಕೆ, ರಾಣಿ ಪದ್ಮಾವತಿ.

೩೨. ಇವರ ಹೇಳಿಕೆ, ರಾಣಿ ಪದ್ಮಾವತಿ.

೩೩. ಇವರ ಹೇಳಿಕೆ ರಾಣಿ ಪದ್ಮವತಿ.

೩೪. ಅಮರೇಶ ಯತಗಲ್, ಪೂರ್ವೋಕ್ತ, ಪು.೮೬.

೩೫. ಅದೇ, ಪು.೭೮.

೩೬. ಅದೇ, ಪು.೭೮

೩೭. ಲಕ್ಷ್ಮಣ್ ತೆಲಗಾವಿ, ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಪು.೩೧೩.

# ಅಧ್ಯಾಯ : ನಾಲ್ಕು

## ನಾಯಕ ರಾಣಿಯರ ಸಾಂಸ್ಕೃತಿಕ ಕೊಡುಗೆಗಳು

---

೪.೧. ಧಾರ್ಮಿಕ ಕ್ಷೇತ್ರದಲ್ಲಿ ನಾಯಕ ರಾಣಿಯರು

೪.೨. ಸಾಮಾಜಿಕ ಕ್ಷೇತ್ರದಲ್ಲಿ ನಾಯಕ ರಾಣಿಯರು

೪.೩. ಸಾಹಿತ್ಯ ಕ್ಷೇತ್ರದಲ್ಲಿ ನಾಯಕ ರಾಣಿಯರು

೪.೪. ಶೈಕ್ಷಣಿಕ ಕ್ಷೇತ್ರದಲ್ಲಿ ನಾಯಕ ರಾಣಿಯರು

# ಅಧ್ಯಾಯ : ನಾಲ್ಕು

# ಕಲ್ಯಾಣ ಕರ್ನಾಟಕದ ಸಾಂಸ್ಕೃತಿಕ ಕ್ಷೇತ್ರಕ್ಕೆ ರಾಣಿಯರ ಕೊಡುಗೆಗಳು

## ೪.೧. ಧಾರ್ಮಿಕ ಕ್ಷೇತ್ರದಲ್ಲಿ ನಾಯಕ ರಾಣಿಯರು

- **ಆನೆಗೊಂದಿ ರಾಣಿಯರು**

ಆನೆಗೊಂದಿಯು ಗಂಗಾವತಿ ತಾಲ್ಲೂಕಿನ ಕೊಪ್ಪಳ ಜಿಲ್ಲೆಗೆ ಸೇರಿದ ಪ್ರದೇಶ. ತಾಲ್ಲೂಕುಕೇಂದ್ರದಿಂದ ಸುಮಾರು ೧೨ ಕಿ.ಮೀ. ದೂರದ ದಕ್ಷಿಣಕ್ಕಿದೆ. ತುಂಗಭದ್ರಾ ನದಿಯಉತ್ತರದಂಡೆಯ ಮೇಲಿದೆ. ಪ್ರಕೃತಿಯರಮಣೀಯವಾದ ಸ್ಥಳವಾಗಿದೆ. ಈ ಆನೆಗೊಂದಿಯನ್ನು ವಿದೇಶಿಯ ಪ್ರವಾಸಿಗರಾದ ನ್ಯೂನಿಜ್ಅವರು "ಆನೆಗೊಂದಿಯನ್ನು ವಿಜಯನಗರದ ಮಾತೃಸ್ಥಾನವೆಂದು ಹೇಳಿದ್ದಾರೆ", ಹರಿಹರನ ಕಾಲದಲ್ಲಿ ಆನೆಗೊಂದಿಯು ಕೇಂದ್ರಾಡಳಿತವಾಗಿತ್ತು(ರಾಜಧಾನಿ). ಹರಿಹರನ ನಂತರ ಅಧಿಕಾರಕ್ಕೆ ಬಂದ ಬುಕ್ಕರಾಯನು ಆದಿಲ್ಶಾಹಿ ಸುಲ್ತಾನರಿಂದ ವಿಜಯನಗರದ ಮೇಲೆ ಪದೇ ಪದೇ ದಾಳಿಯನ್ನು ತಡೆಯುವುದಕ್ಕಾಗಿ ಹಂಪಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಈ ವಿಚಾರವನ್ನು ವಿದೇಶಿ ಪ್ರವಾಸಿಗರಾದ ನ್ಯೂನಿಜ್ ಅವರು "ವಿಜಯನಗರ ತಾಯಿಯಂತೆ (ಮಾತೃಸ್ಥಾನ)"[೧]. ಎಂದು ಹೇಳಿದ್ದಾರೆ. ನಂತರದಲ್ಲಿ ವಿಜಯನಗರದ ಅರಸರು ಇಲ್ಲಿ ಆನೆಗಳನ್ನು ಕಟ್ಟುತ್ತಿದ್ದದ್ದರಿಂದ ಇದಕ್ಕೆ ಆನೆಗೊಂದಿ ಎಂದು ಹೇಳಲಾಗುತ್ತಿದೆ. ವಿಜಯನಗರದ ಪತನಾನಂತರ ಆನೆಗೊಂದಿಯನ್ನು ನರಪತಿ ಸಂಸ್ಥಾನವೆಂದು ಕರೆಯುತ್ತಿದ್ದರು. ಈ ಸಂಸ್ಥಾನ ೧೭ನೇ ಶತಮಾನದಲ್ಲಿ ಮೊಗಲರ ಚಕ್ರವರ್ತಿಯ ವಶದಲ್ಲಿದ್ದು ತದನಂತರ ಕೆಲವು ಕಾಲದವರೆಗೆ ಬೇರೆ ಬೇರೆ ರಾಜ ವಂಶಸ್ಥರು ಆಳ್ವಿಕೆ ಮಾಡಿದರು. ನಂತರ ಹೈದರಾಲಿ ಮತ್ತು ಟಿಪ್ಪುಸುಲ್ತಾನನ ವಶವಾಯಿತು. ಟಿಪ್ಪುಸುಲ್ತಾನನ ತರುವಾಯ ಆನೆಗೊಂದಿ ಸಂಸ್ಥಾನವನ್ನು ಪುನಃ ಪ್ರತಿಷ್ಠಾಪಿಸಲಾಯಿತು.

ಈ ಮೇಲ್ಕಂಡ ಮೂರು ಅರಸುಮನೆತನ ಬ್ರಿಟಿಷರು, ಹೈದರಾಬಾದಿನ ನಿಜಾಮ ಮತ್ತು ಪೇಶ್ವೆಯವರ ನಡುವೆಆದಒಪ್ಪಂದದಲ್ಲಿ ಸ್ಥಾಪಿಸಲಾದ "ಶ್ರೀಮದ್ರಾಜಾಧಿರಾಜ ಪರಮೇಶ್ವರ ಶ್ರೀವೀರಪ್ರತಾಪವೀರತಿರುಮಲವಿದ್ಯಾವಿಜಯನಗರನರಪತಿಸಂಸ್ಥಾನವೆಂದು"[೨]. ಮರು ನಾಮಕರಣ ಮಾಡಿ ೧೮೨೪ರಲ್ಲಿ ತಿರುಮಲನ ಮಗ ವೀರವೆಂಕಟಪತಿ ಪಟ್ಟಕ್ಕೆ ಬಂದನು. ಆದರೆ ಇವನು ಅವಿವಾಹಿತನಾಗಿ ೧೮೫೧ರಲ್ಲಿ ಮರಣ ಹೊಂದುತ್ತಾನೆ. ಆಗ ಅವನ ಸಹೋದರಿಯ ಮಗ ತಿರುಮಲ ದೇವರಾಯನಿಗೆ ಪಟ್ಟಕಟ್ಟಲಾಯಿತು. ಇವನ ನಂತರ ಇವನ ಮಗ ವೆಂಕಟರಾಮರಾಯನಿಗೆ "ಕ್ರಿ.ಶ. ೧೮೬೬ರಲ್ಲಿ ಪಟ್ಟಕಟ್ಟಲಾಯಿತು. ನಂತರತನ್ನ ಸಹೋದರನಾದ ಕೃಷ್ಣದೇವರಾಯನಿಗೆ ಕ್ರಿ.ಶ. ೧೮೬೭ರಲ್ಲಿ ಪಟ್ಟಕಟ್ಟಲಾಯಿತು. ಆದರೆ ಕೃಷ್ಣದೇವರಾಯನು

ಅಧಿಕಾರಕ್ಕೆ ಬಂದ ಮರುವರ್ಷವೇ ಮರಣ ಹೊಂದಿದ. ಹಾಗಾಗಿ ಅವನ ಸಹೋದರಿಯ ಮಗ ಪೆದ್ದ ನರಸಿಂಹನನ್ನು ಪಟ್ಟಕ್ಕೆ ತರಲಾಯಿತು. ಇವನು ಕೂಡ ೧೮೮೩ರಲ್ಲಿ ಮರಣ ಹೊಂದಲು ಈತನ ರಾಣಿ ನರಸಿಂಗಮ್ಮ ತಾನೇ ಸಂಸ್ಥಾನದ ಜವಾಬ್ದಾರಿ ವಹಿಸಿಕೊಂಡಳು"[೩]. ಅರಮನೆಯಷ್ಟೇ ಅಲ್ಲ ಇಡೀ ಸಂಸ್ಥಾನ ಆನೆಗೊಂದಿಯ ಜವಾಬ್ದಾರಿಯಾಗಿತ್ತು. ಹಾಗೆಯೇ ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಅರಸರಂತೆಯೇ ಅನೇಕ ರಾಣಿಯರೂ ಆಳ್ವಿಕೆ ಮಾಡಿದ ಕುರುಹುಗಳಿವೆ. ಆದರೆ ನಾಯಕ ಅರಸು ಮನೆತನದಲ್ಲಿ ರಾಣಿಯರು ಘೋಷಾ ಪದ್ಧತಿಯನ್ನು ಕಟ್ಟುನಿಟ್ಟಾಗಿರುವ ಸಂದರ್ಭದಲ್ಲಿಯೂ ಈ ಆಡಳಿತ ಮಾಡಿರುವುದು ನಿಜಕ್ಕೂ ಒಂದು ರೀತಿಯ ಶ್ಲಾಘನೀಯವಾದುದು.

ರಾಣಿಯರು ಘೋಷಾ ಪದ್ಧತಿ ಉಡುಪುಗಳನ್ನು ಧರಿಸುವುದು ಇಲ್ಲಿಯ ಸಂಪ್ರದಾಯವಾಗಿತ್ತು. ಈ ಪದ್ಧತಿಯು ಆನೆಗೊಂದಿ ರಾಣಿಯರು ಆಚರಿಸಬೇಕಾಗಿರುವುದು ಕಡ್ಡಾಯವಾಗಿತ್ತು. ಉದಾಹರಣೆಗೆ ಗಗನ ಮಹಲ್ ಆನೆಗೊಂದಿಯಲ್ಲಿನ ರಂಗನಾಥಸ್ವಾಮಿ ದೇವಾಲಯದ ಎದುರಿಗೆ ಕಂಡುಬರುವ  ಕಟ್ಟಡವು ಈ ಹಿಂದೆರಾಜ ಮಹಾರಾಜರುಗಳು ನಡೆಸುತ್ತಿದ್ದ ಮನರಂಜನ ಹಾಗೂ ಸಾಹಸಮಯ ಸ್ಪರ್ಧೆಗಳನ್ನು ರಾಣಿಯರು ವೀಕ್ಷಿಸುತ್ತಿದ್ದ ಸ್ಥಳವಾಗಿತ್ತು. ರಾಣಿಯರು ಅರಮನೆಯಿಂದ "ಗಗನ ಮಹಲ್"ಗೆ ಬರಲು ನೆಲಮಾಳಿಗೆಯಲ್ಲಿ ಇರುವ ಗುಪ್ತಮಾರ್ಗದ ಮುಖಾಂತರ ಬರುತ್ತಿದ್ದರು. ಕೋಳಿ ಕಾಳಗ, ಟಗರು ಕಾಳಗ, ಗೂಳಿ ಕಾಳಗ, ಪಂಜರದ ಹುಲಿಯನ್ನು ಭರ್ಜಿಯಿಂದ ಬೇಟೆಯಾಡುವ ಈ ರೀತಿಯಾಗಿ ಮನರಂಜನೆ ಮಾಡಲಾಗುತ್ತಿತ್ತು"[೪]. ಇದನ್ನು ವೀಕ್ಷಿಸಲು ರಾಣಿಯರಿಗೆ ಈ ತರಹದ ಯೋಜನೆಯ ಮೂಲಕ ಮಾಡಿದರು. ಹಾಗೆ ಅರಮನೆಯಲ್ಲಿ ಅನೇಕ ಸಮಸ್ಯೆಗಳ ಮಧ್ಯೆ ಸಿಲುಕಿದ್ದ ಆನೆಗೊಂದಿ ರಾಣಿಯರು ಆಡಳಿತವನ್ನು ಕೈಗೆತ್ತಿಕೊಳ್ಳುವುದು ಆ ಸಂದರ್ಭದಲ್ಲಿ ಸುಲಭವಾಗಿರಲಿಲ್ಲ.

ಇಂತಹ ಸಂದರ್ಭದಲ್ಲಿ ರಾಣಿ ಪೆದ್ದನರಸಿಂಗಮ್ಮಳು ಆಳ್ವಿಕೆಯಲ್ಲಿ ಒಂದು ವರ್ಷದವರೆಗೆ ಈ ಸಂಸ್ಥಾನದ ಜವಾಬ್ದಾರಿ ವಹಿಸಿಕೊಂಡಳು. ನಂತರ ಮದ್ರಾಸ್ ಸರಕಾರ ಈ ಘೋಷಣೆಯನ್ನು ಧಿಕ್ಕರಿಸಿತು. ಪಟ್ಟದರಾಣಿಯು ರಾಜನ ಅನುಪಸ್ಥಿತಿಯಲ್ಲಿ ರಾಜ್ಯವಾಳುವ ಅಧಿಕಾರವನ್ನು ಪಡೆದಿರುತ್ತಾಳೆ. ಆದರೆ ಪಟ್ಟದರಾಣಿಯನ್ನು ಮುಂದೆ ಆಯ್ಕೆ ಮಾಡುವಾಗ ರಾಜನು ಯುವರಾಜನಾಗಿದ್ದಾಗಲೇ ಯುವರಾಜನ ಪಟ್ಟಕಟ್ಟಿ ಆತನಿಗೊಬ್ಬಳು ಯುವರಾಣಿಯನ್ನು ಹಿರಿಯರು ಆಯ್ಕೆ ಮಾಡಿ, ಯುವರಾಣಿಗೆ ಪಟ್ಟಕಟ್ಟಿರುವರು. ಇವರೇ ಮುಂದೆ ಪಟ್ಟದರಸಿ ಹಾಗೂ ಪಟ್ಟದರಾಣಿಯಾಗುತ್ತಿದ್ದವರಲ್ಲಿ ರಾಣಿಕುಪ್ಪಮ್ಮ ಆ ಸ್ಥಾನ ಪಡೆದಿದ್ದಾಳೆ. "ಕೃಷ್ಣದೇವರಾಯ ಅರಸನಿಗೆ ಮಕ್ಕಳಿಲ್ಲದ ಕಾರಣ ತನ್ನ ಪತ್ನಿ ರಾಣಿಕುಪ್ಪಮ್ಮ ಮರಣದ ನಂತರ ತನ್ನ ಕಿರಿಯ ಸಹೋದರ ಪಂಪಾಪತಿ ರಾಜನನ್ನು ದತ್ತು ತೆಗೆದುಕೊಂಡು ಶ್ರೀರಂಗ ದೇವರಾಯನೆಂದು ನಾಮಕರಣ ಮಾಡಿ ಆನೆಗೊಂದಿ ರಾಜಮನೆತನದ ಅಧಿಕೃತ ವಾರಸುದಾರನೆಂದು ಘೋಷಿಸಿದಳು"[೫]. ಕ್ರಿ.ಶ.೧೮೮೧ರಿಂದಲೇ ಆಡಳಿತ ಸೂತ್ರ ವಹಿಸಿಕೊಂಡಿದ್ದ ರಾಣಿಕುಪ್ಪಮ್ಮ

ಅನೇಕ ಗ್ರಾಮಗಳ ವಾಲ್ಮೀಕಿ ಜನಾಂಗದ 'ಗುರುತ್ವ'ವನ್ನು ನಾಯಕತ್ವ ನೀಡುವುದರ ಮೂಲಕ ತನ್ನ ಅಧಿಕಾರವನ್ನು ಚಲಾಯಿಸುತ್ತಾಳೆ. ಕ್ರಿ.ಶ.೧೮೯೮ರವರೆಗೆ ನಂತರ ಮದ್ರಾಸ್ ಸರ್ಕಾರ ಶ್ರೀರಂಗದೇವರಾಯನಿಗೆ ವಾರ್ಷಿಕತೆರಿಗೆಯನ್ನು ವಿಧಿಸಿ ಅವನನ್ನು ದೊರೆಎಂದು ಮಾನ್ಯ ಮಾಡಲಾಯಿತು.

**ಉರ್ದು ಭಾಷೆ**

ಉರ್ದು ಭಾಷೆ ಪ್ರತ್ಯಕ್ಷ ಬದುಕಿನಿಂದ ಬಂದ ಫಲ ಹಿಂದೂ-ಮುಸಲ್ಮಾನರ ತ್ಯಾಗ ಬಾಂಧವ್ಯ ಪರಿಶ್ರಮ ಐಕ್ಯತೆಯ ಕುರುಹಾಗಿ ಜನ್ಮತಾಳಿ ಭಾಷೆ, ಕೆಲವು ಸಲ ತಮ್ಮ ತಮ್ಮ ಮೂಲ ಭಾಷೆಗಳನ್ನು ಬಲಿಗೊಟ್ಟು ಈ ಭಾಷೆಯನ್ನು ಬೆಳೆಸಿದರು.ಈ ಭಾಷೆ ಪುಣ್ಯಭೂಮಿಯಾದ ಭಾರತದಲ್ಲಿಯೇ ಜನ್ಮ ತಾಳಿತು.ಇಲ್ಲಿಯ ನೆಲದ ಸತ್ವ ಗಾಳಿ, ನೀರು ಬೆಳಕನ್ನುಂಡು ಪೋಷಣೆ ಹೊಂದಿತು. ಷಹಜಾನ್ ಮೊಗಲ್ ಚಕ್ರವರ್ತಿಯಾಗಿ ದಿಲ್ಲಿ ಸಿಂಹಾಸನ ಅಲಂಕರಿಸಿದಾಗ ಈ ಉರ್ದು ಎಂಬ ಪದವನ್ನು ಈ ಹೊಸ ಭಾಷೆಗೆ ಅಂಟಿಸಲಾಯಿತು.ಇದು ಸಾವಿರದ ಆರನೂರ ಇಪ್ಪತ್ತೇಳು – ಸಾವಿರದ ಆರನೂರ ಐವತ್ತೆಂಟರ ಕಾಲ 'ಉರ್ದು' ಎಂಬ ಪದದ ಶಬ್ದಶಃ ಅರ್ಥ ಸೈನ್ಯ ಅಥವಾ ಸೈನ್ಯವಿರುವ ಠಾಣೆ ಎಂದಾಗುತ್ತದೆ. 'ತಾರೀಖ-ಉ-ಉರ್ದು'ದಲ್ಲಿ ಉರ್ದು ಎಂಬ ಪದವನ್ನು ಈ ಅರ್ಥದಲ್ಲಿಯೇ ಉಪಯೋಗಿಸಿದ್ದಾರೆ. ಬಾಬರ್ ತನ್ನ ಸೈನ್ಯಕ್ಕೆ 'ಉರ್ದುಮೆ ನಸ್‌ರತೆ ಶಾಹಿ' ಅಂದರೆ ವಿಜಯಶಾಲಿ ಸೈನ್ಯ ಎಂದು ಕರೆದ.ಅಕ್ಬರನ ಕಾಲದಲ್ಲಿಯೂ ರಾಜಧಾನಿ ಹಾಗೂ ಸೈನ್ಯ ಠಾಣೆಗಳನ್ನು 'ಉರ್ದುಮೆ ಮುದಿಲ್ಲಾ' ಎಂದು ಕರೆಯಲಾಗುತ್ತಿತ್ತು.ಸೈನಿಕರ ಠಾಣೆಯಲ್ಲಿ, ತುಘಲಕ್‌ನ ಸೈನಿಕರಲ್ಲಿ ಕೇವಲ ಅವ್ಯವಸ್ಥಿತ ಹಾಗೂ ಆಡುಭಾಷೆಯಾಗಿದ್ದ ಈ ಭಾಷೆ ಕರ್ನಾಟಕದ ಬಿಜಾಪುರ, ಗುಲ್ಬರ್ಗ, ಗೋಲ್ಕೊಂಡಾದಲ್ಲಿ ಸುಸಂಸ್ಕೃತಗೊಂಡು ಸಾಹಿತ್ಯದ ಭಾಷೆಯಾಗಿ ಪರಿವರ್ತನೆಯಾಯಿತು."ಉರ್ದು ಹತ್ತೊಂಬತ್ತನೆಯ ಶತಮಾನದ ಹೊತ್ತಿಗೆ ತನ್ನ ಪರಿಪೂರ್ಣತೆಯ ಉಚ್ಛ ಶಿಖರವನ್ನು ತಲುಪಿತು. ರಾಣಿಕುಪ್ಪಮ್ಮನವರು ಉರ್ದುಭಾಷೆಯಲ್ಲಿ ಹೊರಡಿಸಿದ ಶಾಸನದಲ್ಲಿ ಕನ್ನಡದ ವಿವರ ಹೀಗಿದೆ"[೬]. ದಿನಾಂಕ ೧.೧.೧೮೯೮ರಂದು ಆನೆಗೊಂದಿ ಸಂಸ್ಥಾನದ ರಾಣಿಕುಪ್ಪಮ್ಮನವರು ಹೊರಡಿಸಿದ ಶಾಸನ ರಾಣಿ ಬಿಜ್ಜಮ್ಮಕುಪ್ಪಮ್ಮ ನಾವಿಬ್ಬರು ಕೃಷ್ಣದೇವರಾಯರ ಮಡದಿಯರಿದ್ದು, ಬಿಜ್ಜಮ್ಮ ರವರಿಗೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿಗೆ ಸೇರಿದ ಹಂಪೆಯಲ್ಲಿ ಸಂಸ್ಥಾನದ ಹಿರಿಯರುಗಳಿದ್ದು ಬಿಜ್ಜಮ್ಮರಾಣಿ ಇವರ ಸ್ವಾಧೀನಕ್ಕೆ ಕೊಟ್ಟಿರುತ್ತೇನೆ. ಹಂಪಿ ದೇವಸ್ಥಾನದಲ್ಲಿ ನವೀರ್ವರಿಗೂ ಸರಿಸಮಾನ ಮರ್ಯಾದೆಗಳಿವೆ. ಸರಿಸಮಾನ ಮರ್ಯಾದೆಗಳಿಗೆ ಎಂಬ ಮಾತನ್ನು ರಾಣಿಕುಪ್ಪಮ್ಮ ತಮ್ಮ ಪತಿಯ ಕಿರಿಯರಾಣಿ ಬಿಜ್ಜಮ್ಮನನ್ನು ತನ್ನ ಸಹೋದರಿ ಸರಿಸಮಾನಳು ಎಂದು ಭಾವಿಸಿ ರಾಣಿಕುಪ್ಪಮ್ಮ ಪಟ್ಟದರಾಣಿ ಎಂಬ ಅಧಿಕಾರಚಲಾಯಿಸದೇ ಬಿಜ್ಜಮ್ಮನನ್ನು ಎಲ್ಲ ಹಿರಿಯರ

ಮುಂದೆ ಹಲವು ಗ್ರಾಮಗಳು ಹಾಗೂ ತನ್ನ ಪಟ್ಟದರಾಣಿಯ ಸರಿಸಮಾನಳಾಗಿ ಅಧಿಕಾರ ನೀಡುತ್ತಾಳೆ.

"ಬಳ್ಳಾರಿ ಜಿಲ್ಲೆ ಹೊಸಪೇಟೆತಾಲ್ಲೂಕು ಕಮಲಾಪುರಗ್ರಾಮದಲ್ಲಿ ಇರುವ ವಾಲ್ಮೀಕಿಜನಾಂಗದ ಗುರುತ್ವವನ್ನು(ನಾಯಕತ್ವ) ರಾಣಿ ಬಿಜ್ಜಮ್ಮ ಇವರ ತಮ್ಮನಾದ ನಂದ್ಯಾಲನಾರಾಯಣರಾಜರವರಿಗೆ ವಹಿಸಿಕೊಟ್ಟಿರುತ್ತಾನೆ. ಅಲ್ಲದೆ ಕೆಲವು ವಂಶಸ್ಥರಿಗೆ ಪ್ರದೇಶಗಳನ್ನು ನೀಡುತ್ತಾಳೆ. ಅವು ಮುಂದಿನ ತನ್ನ ವಂಶಸ್ಥರು ಸ್ವಾಧೀನಪಡಿಸಿಕೊಳ್ಳದಂತೆ ಶಾಶ್ವತವಾಗಿ ಈ ಪ್ರದೇಶಗಳನ್ನು ದಾನವಾಗಿ ನೀಡಲಾಗಿತ್ತು. ರಾಣಿಕುಪ್ಪಮ್ಮ ಪ್ರಜಾಹಿತ ನಿರ್ಣಯಗಳು ತೆಗೆದುಕೊಳ್ಳುವುದು ಮುಖ್ಯವಾಗಿದೆ. ಬಳ್ಳಾರಿ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಮತ್ತು ಧಾರವಾಡ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಚಿತ್ರದುರ್ಗಜಿಲ್ಲೆಯ ತಾಲ್ಲೂಕುಗಳಲ್ಲಿ ವಾಲ್ಮೀಕಿ ಜನಾಂಗದ ಕೆಲವು ಗುರುತ್ವವನ್ನು ಮಾನ್ವಿ ತಾಲ್ಲೂಕುಗೊಲ್ಲರಗುರುತ್ವವನ್ನು ಕೊಪ್ಪಳ ತಾಲ್ಲೂಕಿನಲ್ಲಿ ಹಾಗೂ ಆಂಧ್ರಪ್ರದೇಶದ ಗುಂತಕಲ್ ಹತ್ತಿರದ ಕಸಾಪೂರಗ್ರಾಮದಲ್ಲಿ ಹರಿಜನಗುರುತ್ವವನ್ನು ಇವರಿಗೆ ವಹಿಸಿಕೊಟ್ಟಿರುತ್ತಾನೆ"[೭].

"ಸೂರ್ಯಚಂದ್ರಾದಿಗಳು ಇರುವವರೆಗೂ ಇವರ ವಂಶಸ್ಥರೇ ಇದಕ್ಕೆಅಧಿಕಾರಸ್ಥರಿರುತ್ತಾರೆ. ಮೇಲ್ಕಾಣಿಸಿದ ಜನಾಂಗದಯಾವತ್ತು ಸಿಕಾಯಿತಿಗಳು ಇಲ್ಲದಂತೆ ನೋಡಿಕೊಳ್ಳತಕ್ಕದ್ದು.

.......ಸಂಸ್ಥಾನ ಆನೆಗೊಂದಿ ರಾಣಿಕುಪ್ಪಮ್ಮ,.........

ಇವರರುಜು

ಶ್ರೀರಂಗದೇವರಾಯ ೧೦-೩-೧೯೧೮ರಲ್ಲಿ ಮರಣ ಹೊಂದಿದನು. ಹಾಗಾಗಿ ತಾಯಿರಾಣಿಕುಪ್ಪಮ್ಮ ಪುನಃ ತಾನೇ ಆಡಳಿತ ನಡೆಸುತ್ತಾಳೆ. ಈಗೆ ಕ್ರಿ.ಶ.೧೯೪೧ರಲ್ಲಿ ಕಂಪ್ಲಿಯಕಲ್ಲುಮಠದ ಶ್ರೀಗುರುಸಿದ್ಧಸ್ವಾಮಿಗಳಿಗೆ ಅವರು ಹಂಪಿ ಜಾತ್ರೆಯಲ್ಲಿ ನಡೆಸುವದಾಸೋಹಕ್ಕಾಗಿ ಹಿಂದಿನಿಂದ ಪಡೆದಿದ್ದಕಲ್ಲುಮಂಟಪವನ್ನು ಲಿಖಿತದಾಖಲೆ ನೀಡುವುದರ ಮೂಲಕ ಅದನ್ನು ಮಾನ್ಯ ಮಾಡಿದಳು.ರಾಣಿಯ ಉದಾರತೆ, ಸಾಮಾಜಿಕ, ಧಾರ್ಮಿಕವಾಗಿರಾಣಿಕುಪ್ಪಮ್ಮನವರ ವ್ಯಕ್ತಿತ್ವ ತಿಳಿಸುತ್ತದೆ. ೧೯.೮.೧೯೧೯ರಿಂದ ಮಾಸಾಶನದೊರೆಯಿತು.ಕೆಲವು ಕಾಲಗಳ ನಂತರರಾಣಿಕುಪ್ಪಮ್ಮ ೧೯.೭.೧೯೮೬ರಲ್ಲಿ ಮರಣ ಹೊಂದಿದಳು"[೮].

"ರಾಣಿಕುಪ್ಪಮ್ಮಕಲ್ಲುಮಂಟಪವನ್ನುತೆಲುಗಿನಲ್ಲಿ ಬರೆದಿರುವ ಲಿಖಿತ ದಾಖಲೆ ನೀಡಿದ ವಿವರ ಹೀಗಿವೆ.

ಲಾಂಛನ: ಶ.೧೮೬೩ ನೃಪ. ಸಂ. ಚೈತ್ರಬಹುಳ೧೧

ಶ್ರೀ ಮದ್ರಾಜಾಧಿರಾಜರಾಜ ಪರಮೇಶ್ವರ

ಶ್ರೀ ವೀರಪ್ರತಾಪ ವೀರತಿರುಮಲ

ವಿದ್ಯಾವಿಜಯನಗರ ನರಪತಿ

ಸಂಸ್ಥಾನ ಆನೆಗುಂದಿ ಶ್ರೀಮಂತ

ರಾಣಿ ಶ್ರೀ ರಾಣಿಕುಪ್ಪಮ್ಮಅಮ್ಮಯ್ಯನವರಕಡಿಯಿಂದಾ

ಶ್ರೀ ಮನ್ನಿರಂಜನ ನಿರಾಭಾರಿಯತಿವರಣ್ಯಕಂಪ್ಲಿಕಲ್ಲುಮಠದ ಗುರುಸಿದ್ಧ ಸ್ವಾಮಿಗಳವರಿಗೆ

ಶ್ರೀ ದಕ್ಷಿಣ ಕಾಶಿಯೆನಿಸುವ ಸುಪ್ರಸಿದ್ಧ ಶ್ರೀ ಹಂಪಿ ವಿರೂಪಾಕ್ಷೇಶ್ವರನರಥೋತ್ಸವದಕಾಲದಲ್ಲಿ ಹಂಪಿಗೆ ಬರತಕ್ಕಯಾತ್ರಿಕರು ದೀನಾನಾಥ ಭಕ್ತರಗಳಣರಿಗಳ ವಗೈರರಿಗೆತಮ್ಮ ಮಠದವರುದಾಸಂಗ ವರದಿಗಳಿಂದ ಅನ್ನದಾನಾದಿಗಳ ದಾನವಂ ಮಾಡಿ ಬಂದವರನ್ನು ಸಂತೃಪ್ತಿಗೊಳಿಸಿ ದೇವರ ಸೇವೆಯನ್ನು ಮಾಡುತ್ತಿರುವುದಾಗಿ ತಿಳಿದು ನೆರಳಿಗಾಗಿ ನಮಗೆ ಸಂಬಂಧಪಟ್ಟಲ್ಲಿಯೇ ಕಲ್ಲುಮಂಟಪಗಳಲ್ಲೊಂದನ್ನು ೭/೫ ಅಂಕಣ ವಿಸ್ತೀರ್ಣವುಳ್ಳ ಕಟ್ಟಡವನ್ನು ಪುರಾತನ ಕಾಲದಿಂದಲೂ ಈ ಪುಣ್ಯಕಾರ್ಯಕ್ಕಾಗಿ ನಮ್ಮ ಹಿರಿಯರುತಮ್ಮ ಸ್ವಾಧೀನ ಪಡಿಸಿರುವರು. ಅಂತರಾತ್ಮ ಲಿಖಿತ ಮೂಲಕ ಪತ್ರದಿಂದಲೂ ಮತ್ತು ಮಹನೀಯರುಗಳನೇಕರು ಬರೆದುಕೊಂಡಿರುವ ಲೇಖನದಿಂದಲೂ ತಾವುಅದೇ ಪುಣ್ಯಕಾರ್ಯವನ್ನುಕಾಲದಲ್ಲಿ ಅನುಚನವಾಗಿ ನಡೆಸಿಕೊಂಡು ಬಂದಅನ್ನದಾನಾದಿ ದಾನಗಳನ್ನು ಪೂರ್ಣಗೊಳಿಸಲು ಆ ಮಂಟಪವನ್ನು ಸರಿಯಾದರೀತಿಯಲ್ಲಿಟ್ಟುಕೊಂಡು ದಿನದಿನ ಅಭಿವೃದ್ಧಿಪಡಿಸುತ್ತಾ ನಮ್ಮ ಶ್ರೇಯೋಭಿಲಾಷಿಗಳಾಗಿಯಿರುವಿರೆಂಬ ಬಗ್ಗೆ ಸಂತೋಷಪೂರ್ವಕವಾಗಿಯೂ ಈ ಪ್ರಕಟನಾ ಪತ್ರವನ್ನು ವ್ಯಕ್ತಪಡಿಸಿರುತ್ತೇವೆ.

ಶ್ರೀ ಮತ್ತುರಾಣಿಕುಪ್ಪಮ್ಮಗಾರಿರುಜುವು".

"ಆನೆಗೊಂದಿ ವಂಶಸ್ಥರ ಬಗ್ಗೆ ಕ್ಷೇತ್ರಕಾರ್ಯದಿಂದ ಸಂಗ್ರಹಿಸಿರುವ ಮಾಹಿತಿಯ ಪ್ರಕಾರ, ಆನೆಗೊಂದಿ ವಂಶಸ್ಥರು ತಮ್ಮ ವಂಶವನ್ನು (ಮೂಲ)ವಿಜಯನಗರ ಸಾಮ್ರಾಜ್ಯದ ಅರಸುಮನೆತನಕ್ಕೆ ಸೇರಿದವರು ಎಂದು ಹೇಳಿಕೆ ನೀಡಿದರು. ನಾವು ನಾಯಕ ಜನಾಂಗಕ್ಕೆ ಸೇರಿದವರಲ್ಲ ಎಂದು ತಿಳಿಸಿದರು"[೧೦]. ಇವರ ಹೇಳಿಕೆಯ ಪ್ರಕಾರ ಆನೆಗೊಂದಿ ಸಂಸ್ಥಾನ ಇತಿಹಾಸಕ್ಕೆ ಸಂಬಂಧಿಸಿದಂತೆ ಮುಂದಿನ ದಿನಗಳಲ್ಲಿ ಈ ವಿಷಯದ ಬಗ್ಗೆ ಸಂಶೋಧಕರು ಚರಿತ್ರೆಯನ್ನು ರಚಿಸಲು ಈ ಕ್ಷೇತ್ರಕಾರ್ಯದ ಮೂಲಕ ತಿಳಿಯಬಹುದು.

- **ಗುಡಗುಂಟಿ ನಾಯಕ ಸಂಸ್ಥಾನದ ರಾಣಿಯರು**

ಹಿಂದಿನಿಂದಲೂ ಬೆಳೆದು ಬಂದ ರಾಜಪದ್ಧತಿಯಲ್ಲಿ ರಾಜನೇ ಸರ್ವತಂತ್ರ ಸ್ವತಂತ್ರ ಸರ್ವಾಧಿಕಾರಿ ಎಂಬುದು ಸತ್ಯವಾದರೂ ಕರ್ನಾಟಕ ಇತಿಹಾಸದಲ್ಲಿ ರಾಣಿಯರೂ ರಾಜನಂತೆ ಸ್ವತಂತ್ರ ಆಳ್ವಿಕೆ ಮಾಡಿದ ಉಲ್ಲೇಖವಿದೆ. ರಾಜನು ತನ್ನ ರಾಣಿಯರನ್ನು ರಾಜ್ಯದ ಬೇರೆ ಬೇರೆ ಭಾಗಗಳನ್ನು ಆಳಲು ನೇಮಿಸುತ್ತಿದ್ದನು. ರಾಜರ ಪ್ರಭುತ್ವವನ್ನು ಆಡಳಿತ ವ್ಯವಸ್ಥೆಯಲ್ಲಿ ಆಗು-ಹೋಗುಗಳಿಗೆ ರಾಣಿಯರೂ ಕೂಡ ಕಾರಣೀಭೂತರಾಗಿದ್ದಾರೆ. 'ಶಿಷ್ಟರ ರಕ್ಷಣೆ', 'ದುಷ್ಟರ

ದಂಡನೆ' ಎಂಬ ಉಕ್ತಿಯು ಕೇವಲ ರಾಜಮಹಾರಾಜರಿಗೆ ದಂಡಾಧಿಪತಿಗಳಿಗೆ ಮತ್ತು ವೀರರಿಗೆ ಮಾತ್ರ ಸೀಮಿತವಾಗಿರದೇ ಈ ನುಡಿಯು ಕರ್ನಾಟಕದ ರಾಣಿಯರಿಗೂ ಅನ್ವಯವಾಗುವಂಥದ್ದಾಗಿದೆ.

ಆಡಳಿತ ವ್ಯವಸ್ಥೆ, ಕರ್ತವ್ಯನಿರ್ವಹಣೆ, ಅಧಿಕಾರವರ್ಗನೇಮಕ ನ್ಯಾಯಾಡಳಿತ, ರಕ್ಷಣಾವ್ಯವಸ್ಥೆ, ರಾಜನೈತಿಕ ಸಂಬಂಧಗಳನ್ನು ರಾಣಿಯರು ಮೈಗೂಡಿಸಿಕೊಂಡಿದ್ದರು. ರಾಜ್ಯದ ಒಡೆಯ ರಾಜನಾಗಿದ್ದು ಒಂದು ರಾಜ್ಯದ ಜನತೆ ಸುಖವಾಗಿರಲು ಪ್ರೇರಕವಾದ ಶಕ್ತಿ ರಾಜ್ಯ ಒಡೆಯನೇ ಆಗಿರುತ್ತಾನೆ.ಗ್ರಾಮಗಳ ಒಕ್ಕೂಟವೇ ರಾಜ್ಯ. ಒಂದು ರಾಜ್ಯದ ಒಡೆತನವನ್ನು ರಾಜನಂತೆಯೇ ರಾಣಿಯರು ದಕ್ಷವಾಗಿ ನಿರ್ವಹಿಸುವುದು ಗಮನಾರ್ಹವಾದ ಸಂಗತಿಯಾಗಿದೆ. ಹೀಗಾಗಿ ಅದು ರಾಣಿಯರು ಆಡಳಿತ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು.

**೧. ರಾಣಿ ಗೌರಮ್ಮ**

ದೊರೆ ಉಡಚನಾಯಕನ ಪತ್ನಿ ರಾಣಿ ಗೌರಮ್ಮ ಈಕೆಯ ತವರುಮನೆ ಲಿಂಗಸೂಗೂರು ತಾಲ್ಲೂಕಿನ ಗುಡಗುಂಟಿ. ಈ ಸಂಸ್ಥಾನದ ಮನೆತನದ ಹೆಣ್ಣುಮಗಳನ್ನು ಹುಲಿ ಹೈದರ್ ಸಂಸ್ಥಾನ (ಕನಕಗಿರಿ) ಅರಸನಿಗೆ ಕೊಟ್ಟು ವಿವಾಹ ಮಾಡಲಾಗಿತ್ತು. "ರಾಣಿ ಗೌರಮ್ಮನವರು ತನ್ನ ಪತಿ ಉಡಚನಾಯಕನ ಮರಣ ಹೊಂದಲು ಇವರ ತರುವಾಯ ತನ್ನ ದತ್ತು ಮಗನಾದ ರಾಜಾರಂಗಪ್ಪ ನಾಯಕನಿಗೆ ಪಟ್ಟಕ್ಕೆ ಕೂರಿಸಿದಳು"[೧೧]. ಈತನಿಗೆ ಅಪ್ರಾಪ್ತ ವಯಸ್ಸಿನಾಗಿದ್ದರಿಂದ ತಾನೇ ಆಡಳಿತ ನಡೆಸುತ್ತಾಳೆ ಮತ್ತು ಇದರ ಜೊತೆಗೆ ಘೋಷ ಪದ್ಧತಿ ಇತ್ತು.ಈ ಪದ್ದತಿಯಲ್ಲಿಯೂ ರಾಣಿ ಗೌರಮ್ಮ ತನ್ನ ಸಂಸ್ಥಾನದ ಆಳ್ವಿಕೆಯನ್ನು ತಮ್ಮ ಅಧೀನದಲ್ಲಿ ಮುಂದುವರಿಸುತ್ತಾಳೆ. ಈಕೆಯು ಆಡಳಿತದ ಸಮಯದಲ್ಲಿ ಬ್ರಿಟಿಷರ ಸರ್ಕಾರ ಹೈದರಾಬಾದ್ ನಿಜಾಮ್ ಸರ್ಕಾರದ ಅಧೀನದಲ್ಲಿ ತಮ್ಮ ಕನಕಗಿರಿ ಸಂಸ್ಥಾನದ ಆಡಳಿತದ ಜವಾಬ್ದಾರಿ ಹೊತ್ತಿದ್ದ ರಾಣಿ ಗೌರಮ್ಮನವರು ತಮ್ಮ ಸಂಸ್ಥಾನದ ಸ್ತ್ರೀಯರಿಗೆ (ರಾಣಿಗೆ) ಘೋಷ ಪದ್ಧತಿ ಹೊಂದಿದ್ದೂ ಸಹ ಸಾಮಾಜಿಕವಾಗಿ ದಾನ ಧರ್ಮದ ಕೆಲಸವನ್ನು ರಾಣಿ ಗೌರಮ್ಮನವರು ಮಾಡಿರುವ ಕನಕಗಿರಿಯ ಕನಕಾಚಲಪತಿ ದೇವಾಲಯ ರಥದ ನಿಲುಗಡೆಗಾಗಿ ರಥ ಶಾಲವನ್ನು (ತೇರುಮನೆ) ನಿರ್ಮಿಸಿದಳು. ರಾಣಿ ಗೌರಮ್ಮನವರ ನೆನಪಿಗಾಗಿ ಈಕೆಯ ಹೆಸರಿನಲ್ಲಿ ಊರು ಸಹ ಇದೆ ಹಾಗೂ ರಾಣಿ ಗೌರಮ್ಮನವರು ತಮ್ಮ ಆಡಳಿತ ಅವಧಿಯಲ್ಲಿ ತಮ್ಮ ಪೂರ್ವಿಕರಾದ ರಾಣಿಯರು ಹಾಗೆಯೇ ಕೃಷಿಗೆ ಸಹಕರಿಸಿದಳು. ಹೆಚ್ಚಿನ ಅನುಕೂಲತೆಗಳನ್ನು ಈಕೆಯ ಆಡಳಿತ ಅವಧಿಯಲ್ಲಿ ಮಾಡಿಕೊಟ್ಟಳು.

* **ಕನಕಗಿರಿ ನಾಯಕ ಸಂಸ್ಥಾನದ ರಾಣಿಯರು**

**೧. ರಾಣಿ ಕಾಟಮ್ಮ**

ಈಕೆ ಕನಕಗಿರಿಯನ್ನಾಳಿದ ಮೂರನೆಯ "ದೊರೆ ಕೆಲವಡಿ ಉಡಚನಾಯಕನ (ಕ್ರಿ.ಶ.೧೫೩೩-೧೫೭೮) ಧರ್ಮ ಪತ್ನಿಯಾಗಿದ್ದಳು. ಈಕೆ ಧಾರ್ಮಿಕ ಕ್ಷೇತ್ರದಲ್ಲಿ ತಮ್ಮದೆಯಾದ ಕೊಡುಗೆಯನ್ನು ನೀಡಿರುವಳು.ಈಕೆಯ ಕುರಿತಾಗಿ ಶಂಕರ ಕವಿಯು ಶರಣ ಮೋನಪ್ಪಯ್ಯನ ಚರಿತ್ರೆ (ಅಪ್ರಕಟಿತ) ಕೃತಿಯಲ್ಲಿ ಉಲ್ಲೇಖವಿದೆ.ತಿಂಥಿಣಿಯ ಶರಣರಾದ ಮೋನಪ್ಪಯ್ಯನವರು ಲೋಕ ಸಂಚಾರಿತಳಾಗಿ ಕನಕನಿಗೆ ಆಗಮನದ ವಿಷಯ ತಿಳಿದ ರಾಣಿ ತನ್ನ ಮಗ ಕನಕಪ್ಪ ನಾಯಕನೊಂದಿಗೆ ಸಕಲ ವೈಭವದೊಂದಿಗೆ ಮೋನಪ್ಪಯ್ಯನವರಲ್ಲಿಗೆ ಬಂದು, ಭಕ್ತಿಯಿಂದ ಪೂಜಿಸಿ ಗೌರವಿಸುತ್ತಾಳೆ"[೧೨]. ಈಕೆಯ ಸೇವೆಗೆ ಮೆಚ್ಚಿ ಸಂತೃಪ್ತನಾದ ಮೋನಪ್ಪಯ್ಯನವರು ಕಾಟಮ್ಮಳಿಗೆ ಬಹುದಿನ ಇದ್ದ ವ್ಯಾಧಿಯನ್ನು ನಿವಾರಿಸಿದರು. ಹಾಗೂ ರಾಣಿಯ ಮಗ ಕನಕಪ್ಪನಾಯಕನಿಗೆ ಭರ್ಜಿಯನ್ನು ಕೊಟ್ಟು ಆಶೀರ್ವದಿಸುತ್ತಾರೆ. ಈ ಕಾಣಿಕೆಗಳನ್ನು ಪಡೆದುಕೊಂಡ ಕಾಟಮ್ಮ, ಕೃತಜ್ಞತಾ ಭಾವದಿಂದ ಗೌರವಪೂರ್ವ(ಪೂಜ್ಯ ಸ್ವರೂಪ)ದಲ್ಲಿ, ಕನಕಗಿರಿಯಲ್ಲಿ ಶರಣ ಮೋನಪ್ಪಯ್ಯನವರಿಗಾಗಿ ಒಂದು ಮಠವನ್ನು ನಿರ್ಮಿಸಿದರು. ಬಳಿಕ ಮೋನಪ್ಪಯ್ಯನವರನ್ನು ಕನಕಗಿರಿಯಲ್ಲಿಯೇ ಉಳಿಯಬೇಕೆಂದು ಬಿನ್ನವಿಸಿಕೊಂಡು, ಸಕಲ ವ್ಯವಸ್ಥೆಯನ್ನು ಮಾಡಿದಳು. "ಕನಕಗಿರಿಯ ಪ್ರವೇಶದಲ್ಲಿರುವ ಮೋನಪ್ಪಯ್ಯನ ಮಠ (ಮಹಂತರ ಮಠ) ವಿಶಾಲವಾಗಿದ್ದು, ಈ ಮಠದೊಳಗೆ ಮೋನಪ್ಪಯ್ಯನವರು ತಮ್ಮ ಏಕಾಗ್ರತೆಗಾಗಿ ಕೂಡುತ್ತಿದ್ದ ನೆಲಮಾಳಿಗೆ ಇದೆ"[೧೩].ಅಂತೆಯೇ ಈ ಮಠವು ದೀಪಸ್ತಂಭ, ಮೂರು ಪುಟ್ಟ ಗುಡಿಗಳು ಮತ್ತು ಭಾವ, ಪುಷ್ಕರಣಿಗಳನ್ನು ಹೊಂದಿವೆ ಹೀಗೆ ರಾಣಿ ಕಾಟಮ್ಮ ಕನಕಗಿರಿ ಸಂಸ್ಥಾನದ ರಾಣಿಯಾಗಿ ಮಾಡಿದ ಧಾರ್ಮಿಕ ಕೆಲಸವು ಸ್ಮರಣೀಯವಾದ ಕೊಡುಗೆ ಮಾಡಿರುವಂತಹದು.

**೨. ರಾಣಿ ಲಕ್ಷ್ಮಿನಾಗತಿ**

ರಾಣಿ ಲಕ್ಷ್ಮಿನಾಗತಿ ಕನಕಗಿರಿಯ ನಾಲ್ಕನೆಯ ದೊರೆ ಒಂದನೆಯ ಕನಕಪ್ಪ ಉಡಚನಾಯಕ ಪತ್ನಿ ಮಹಾರಾಣಿಯಾದ ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಿರುವನು. ಈ ಕೆರೆಯೂ ಈಗಲೂ ಇದೆ.ಈ ಕೆರೆಯು ಕನಕಗಿರಿಯ ಪಶ್ಚಿಮಕ್ಕೆ ಇದ್ದು, ಲಕ್ಷ್ಮಿದೇವಿ ಕೆರೆ ಎಂದು ಕರೆಯಲಾಗುತ್ತದೆ.ಈ ಕೆರೆಯ ಹತ್ತಿರದಲ್ಲಿ ಕಾಣಿಸುವ ಗುಡ್ಡದ ಇಳಿಜಾರಿನಲ್ಲಿ ಗುಡ್ಡದ ಮೇಲೆ ಗಾಳಿ ಮಂಟಪವನ್ನು ನಿರ್ಮಿಸಿದನು.ಅಂದಿನಿಂದ ಈ ಗುಡ್ಡವು ಲಕ್ಷ್ಮಿದೇವಿ ಗುಡ್ಡವೆಂದೇ ಹೆಸರಾಗಿದೆ.ಈ ಕೆರೆ ಹಾಗೂ ಗಾಳಿ ಮಂಟಪ ಕಟ್ಟಿಸಲು ಒಂದು ಕಥೆಯನ್ನು ಇಂದಿಗೂ ಹೇಳುವರು. "ರಾಣಿ ಲಕ್ಷ್ಮಿನಾಗತಿಯು

ಸಾಕ್ಷಾತ್ ಲಕ್ಷ್ಮಿದೇವಿಯ ಸನ್ನಿಧಿಗೆ ಪಾತ್ರಳಾಗಿದ್ದಳಂತೆ, ಕನಕಗಿರಿಯ ಕನಕಚಲಪತಿ ದೇವರು (ಶ್ರೀಮಾನ್ ಲಕ್ಷ್ಮಿನರಸಿಂಹ) ಇವಳ ಭಕ್ತಿಯನ್ನು ಮೆಚ್ಚಿ ಅವಳ ಕುಶಲೋಪರಿ ವಿಚಾರಿಸಲು ಬಂದಿರುವೆ"[೧೪] ಎಂದು ಹೇಳಿದನು. ಈ ಕಥೆಯು ಒಂದು ಐತಿಹ್ಯ ಆಚರಣೆ ಅವಿನಾಭಾವ ಸಂಬಂಧವೂ ಅಲ್ಲದೇ ಈ ಕಥೆ ಸಾರ್ವಜನಿಕರಿಗೆ ಕೆರೆಯನ್ನು ನಿರ್ಮಿಸಿರುವುದು ಗುಡ್ಡದ ಮೇಲೆ ಮಂಟಪ ಉಪಯೋಗವಾಗಿದೆ.ರಾಜ ಕನಕಪ್ಪ ಉಡಚನಾಯಕ ತನ್ನ ಪತ್ನಿಯ ವ್ಯಕ್ತಿತ್ವವನ್ನು ಗೌರವಿಸಿ, ತನ್ನ ಮಹಾರಾಣಿ ಎಂದು ಆ ಕೆರೆಯನ್ನು ಹಾಗೂ ಮಂಟಪವನ್ನು ಕಟ್ಟಿಸಿರಬಹುದು ಇಲ್ಲಿ ರಾಣಿಯ ಹೆಸರೇ ರಾಣಿ ಲಕ್ಷ್ಮಿನಾಗತಿ ಎಂದು ಹೆಸರಿನಲ್ಲಿಯೇ ದೈವಿಕ ಹೆಸರು ಇದೇ. ಈಕೆಯ ಮಗ ಐದನೆಯ ದೊರೆ "ಇಮ್ಮಡಿ ಉಡಚನಾಯಕ (ಕ್ರಿ.ಶ.೧೬೧೮-೧೬೪೯)ನ ಕಾಲದಿಂದ ಮುಂದಿನ ಎಲ್ಲ ಅರಸರು ತಮ್ಮ ಹೆಸರಿನ ಮುಂದೆ ಲಕ್ಷ್ಮಿನಾಗತಿ ಹೆಸರನ್ನು ಬಿರುದಿನಲ್ಲಿ ಸೇರ್ಪಡೆಗೊಳಿಸಿಕೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ ಶ್ರೀಮಾನ್ ಮಹಾನಾಯಕಚಾರ್ಯ, ನಾಯಕ ಶಿರೋಮಣಿಗಳಾದ ಕನಕಗಿರಿ ಲಕ್ಷ್ಮಿನಾಗತಿ ಇಮ್ಮಡಿ ಉಡಚನಾಯಕ, ರಾಣಿಯ ಬಗ್ಗೆ ಪೂಜ್ಯ ಭಾವನೆ ಇದ್ದುದರಿಂದ ಆಕೆಯ ಹೆಸರನ್ನು ಎಲ್ಲ ದೊರೆಗಳು ತಮ್ಮ ಹೆಸರಿನ ಜೊತೆ ಸೇರಿಸಿಕೊಂಡಿರುವುದು ವಿದಿತವಾಗುತ್ತದೆ"[೧೫]. ಹೀಗೆ ಕನಕಗಿರಿ ಚರಿತ್ರೆಯಲ್ಲಿ ರಾಣಿ ಲಕ್ಷ್ಮಿನಾಗತಿಗೆ ಒಂದು ವಿಶೇಷ ಸ್ಥಾನವಿದೆ.

**ರಾಣಿ ಚೆನ್ನಮ್ಮ**

ಈಕೆ ಇಮ್ಮಡಿ ಉಡಚನಾಯಕ ಪತ್ನಿಯರಲ್ಲಿ ರಾಣಿಚೆನ್ನಮ್ಮನವರು ಒಬ್ಬರು. ಈಕೆ ಧಾರ್ಮಿಕ ಕ್ಷೇತ್ರದಲ್ಲಿ ತಮ್ಮ ಕೊಡುಗೆ ಅಪಾರ ಶಾಸನೋಕ್ತವಾಗಿ ಸಹ ಕಾಣಬಹುದು. "ಲಕ್ಷ್ಮಿನರಸಿಂಹ ಗುಡಿಯ ಮುಂಭಾಗದ ಗರುಡ ಗುಡಿಯ ಬಲದಲ್ಲಿ ಹಾಸುಗಲ್ಲಿನ ಮೇಲೆ ಬರೆಯಲಾಗಿದೆ. ಶಾಲಿವಾಹನಶಕ ೧೫೫೫ನೆಯ ಆನಂದ, ಫಾಲ್ಗುಣ, ಶು.೧೪ ಅಂದರೆ ಕ್ರಿ.ಶ೨೮-೨-೧೬೭೫ರಲ್ಲಿ ಕನಕಗಿರಿಯ ಗುಜ್ಜಲವಂಶದ ಇಮ್ಮಡಿ ಉಡಚನಾಯಕನ ಪತ್ನಿ ರಾಣಿಚೆನ್ನಮ್ಮನು ಕನಕಗಿರಿನಾಥ ಸ್ವಾಮಿಯ ಪೌಳಿಗೆ ಕಲ್ಲು ಹಾಸಿಗೆ"[೧೬]. ರಾಣಿಯು ಇದು ಒಂದೇ ಅಲ್ಲದೆ, ಇನ್ನೊಂದು ಶಾಸನ ತಿಳಿಸುವಂತೆ ಕನಕಗಿರಿ ಮುಖ್ಯ ಬಜಾರಿನಲ್ಲಿ ರಾಣಿಯು ಬಸವಣ್ಣ ದೇವರ ದೇವಾಲಯವನ್ನು ಕಟ್ಟಿಸಿದಳು. ಈ ಶಾಸನ ಹೇಳುತ್ತದೆ. ಪೇಟೆ ಬಸವಣ್ಣ ದೇವರ ಗುಡಿಯ ಗರ್ಭಗೃಹ ಬಾಗಿಲುವಾಡದ ಎಡವಟ್ಟಿಕೆಯ ಮೇಲೆ ಇದೇ."ಶಾಲಿವಾಹನ ಶಕ ೧೬೦೧, ಸಿದ್ಧಾರ್ಥಿ, ಮಾಘ, ಸು, ೭, ರಥಸಪ್ತಮಿಯಂದು ಅಂದರೆ ಕ್ರಿ.ಶ.೨೭-೧-೧೬೮೦ ರಂದು ಕನಕಗಿರಿಯ ಉಡಚನಾಯಕನ ರಾಣಿ ಚೆನ್ನಮ್ಮ ಬಸವಣ್ಣ ದೇವರ ಗುಡಿಯನ್ನು ಕಟ್ಟಿಸಿದಂತೆ ಹೇಳಿದೆ.ನಾಯಕ ಅರಸು ಮನೆತನದಲ್ಲಿ ಕನಕಗಿರಿ ರಾಣಿಯರೂ ಶಾಸನೋಕ್ತವಾಗಿ

ಪ್ರಜೆಗಳಿಗಾಗಿ ಕೆಲಸ ಮಾಡಿರುವಂತಃ ಮನೆತನ ಎಂಬುದು ತಿಳಿಯಬಹುದು ಧಾರ್ಮಿಕ ಕ್ಷೇತ್ರದಲ್ಲಿ ಮಹತ್ವ ಕೊಡುಗೆ ನೀಡಿರುವುದು ಸ್ಮರಣೀಯವಾಗಿದೆ.

### ೪. ೨. ಸಾಮಾಜಿಕ ಕ್ಷೇತ್ರದಲ್ಲಿ ನಾಯಕ ರಾಣಿಯರು

- **ಕನಕಗಿರಿಯ ಕೃಷಿ**

ಈಗಲೂ ಕನಕಗಿರಿ ಭಾಗದಲ್ಲಿ ಕಂಡುಬರುವ ಅವಶೇಷಗಳು, ಶಾಸನಗಳು ಕೆರೆ ಬಾವಿಗಳು ಕನಕಗಿರಿ ನಾಯಕರ ಕಾಲಕ್ಕೆ ಸೇರಿದವುಗಳು ಎಂಬುದಕ್ಕೆ ಸಾಕಷ್ಟು ನಿದರ್ಶನಗಳಿವೆ, ಕನಕಗಿರಿಯ ಜಯಂತಿ, ಪುಷ್ಪಾ ಮತ್ತು ಗೋಪಿಕಾ (ಗುಪ್ತಗಾಮಿನಿ) ಎಂಬ ನದಿಗಳ ಸಂಗಮ ತೀರದಲ್ಲಿ ಕನಕಮುನಿ ಎಂಬ ಸನ್ಯಾಸಿ ತಪಸ್ಸನ್ನು ಕೈಗೊಂಡನು ಮತ್ತು ಈ ಪರಿಸರದಲ್ಲಿ ಹೊನ್ನಿನ ಮಳೆಯನ್ನು ಸತತವಾಗಿ ಸುರಿಸಿದನು ಎಂಬ ಮಹತ್ವವಾದ ಐತಿಹ್ಯ ಹೊಂದಿದೆ. ಹೊನ್ನಿನ ಮಳೆಯು ಬೀಳುವುದು ಸಾಧ್ಯವಿದೆಯೇ ಹೀಗೆ ಪ್ರಸ್ತುತ ದಿನಗಳಲ್ಲಿ ಮಳೆಯ ಕೊರತೆ ಧಾನ್ಯಗಳ ಬೆಳೆಯುವುದು ಕಡಿಮೆಯಾಗಿದೆ ಭೂಮಿಯಿಂದ ಬೋರ್‌ವೆಲ್ ಮೂಲಕ ನೀರು ನೀರಾವರಿಗೆ ಉಪಯೋಗಿಸಿದರು ನೀರಿನ ಕೊರತೆ ಇದೆ. ಇದನ್ನು ನೀಗಿಸುವಂತಹ ಮಳೆ ಚೆನ್ನಾಗಿ ಬಂದರೆ ಬೆಳೆಯು ಸಹ ಚೆನ್ನಾಗಿ ಬೆಳೆದರೆ ನಾವು ಮುತ್ತುಗಳನ್ನು ಬೆಳೆದವು ಎಂಬುದು ರೈತರು ಮಾತನಾಡುವುದು ವಾಡಿಕೆ. ಅಥವಾ ಬಂಗಾರದಂಥ ಮಳೆ ಬಂತು ಚಿನ್ನದಂಥ ಬೆಳೆ ಬೆಳೆದನು ಎನ್ನುವುದು ಶ್ರೀಸಾಮಾನ್ಯವಾಗಿ ಮಾತನಾಡುವುದು ವಾಡಿಕೆ. ಹಾಗೆಯೇ ಆ ಸಮಯದಲ್ಲಿ ಮಳೆಯ ಕೊರತೆಯಿಂದಿರುವ ಕನಕಗಿರಿ ಕನಕಮುನಿ ಎಂಬ ಮಹಾ ತಪಸ್ವಿ ಕಾಲದಲ್ಲಿ ಅಲ್ಲಿಗೆ ಬಂದ ಸಮಯದಲ್ಲಿ ಮಳೆ ಚೆನ್ನಾಗಿ ಬಂದಿದೆ ಬೆಳೆಯೂ ಸಹ ಚೆನ್ನಾಗಿ ಬಂದಿರಬಹುದು. ಇದು ಕಾಲಘಟ್ಟಗಳಲ್ಲಿ ಉರಳಿ ಬಂದಂತೆಲ್ಲ ಒಬ್ಬರಿಂದ ಒಬ್ಬರಿಗೆ ವಿಷಯ ಉಕ್ತಿಯು ಬದಲಾಗುವುದು ಸಹಜ. "'ಕನಕಗಿರಿ' ಎಂದು ಉಲ್ಲೇಖಿತವಾಗಿರುವುದು ಕಂಡುಬರುತ್ತದೆ.೧೦ನೇ ಶತಮಾನಕ್ಕಾಗಲೇ ಕನಕಗಿರಿ ಒಂದು ಪುಣ್ಯಕ್ಷೇತ್ರವೆಂದು ಪ್ರಖ್ಯಾತಿಯನ್ನು ಹೊಂದಿತು.ಬಂಗಾರ ಗಿರಿವಾಸನ ಈ ಸನ್ನಿಧಿ ನಾಯಕ ಜನಾಂಗದ ಮಹಾಸಾಧು ಸಂತರಾದ ಕನಕದಾಸರ ಪಾದಾರ್ಪಣೆಯಿಂದ ಸರ್ವಜನರ ಸರ್ವಾಭಿವೃದ್ಧಿ ಸನ್ನಿಧಿಯಾಗಿ ಹೆಸರಾಗಿರುವುದು ಮಾತ್ರ ಸತ್ಯ"[೧೭]. ಕನಕಗಿರಿಯ ಹೆಸರು ಪ್ರಸಿದ್ದಿ ಪಡೆದಿದೆ.ಕನಕಗಿರಿಯಲ್ಲಿ ೭೦೧ ದೇವಾಲಯಗಳು, ೨೦೧ ಬಾವಿಗಳು, ಮತ್ತು ೭೦೧ ಗುಡಿಸಲುಗಳು ಇದ್ದವೆಂಬ ಬಗ್ಗೆ ಐತಿಹ್ಯವೊಂದಿದೆ.ಪ್ರಾಚೀನ ಕಾಲದಿಂದ ನಂತರದ ನಾಯಕ ಜನಾಂಗ ಆಡಳಿತದಲ್ಲಿ ಕೃಷಿಗೆ ಉತ್ತಮ ರೀತಿಯಲ್ಲಿ ನಡೆಯುತ್ತಿತ್ತು ಎಂದು ತಿಳಿದು ಬರುತ್ತದೆ.

### ೧. ಚೆನ್ನಾದೇವಿ ಕೆರೆ

ಕನಕಗಿರಿ ಸಂಸ್ಥಾನ ಇಮ್ಮಡಿ ಉಡಚನಾಯಕ ಪತ್ನಿ ಚೆನ್ನಾದೇವಿ ಈಕೆ ಸಾಮಾಜಿಕ ಸೇವಾ ಕಾರ್ಯಗಳಲ್ಲಿ ತುಂಬಾ ಆಸಕ್ತಿ ಹೊಂದಿದ್ದಳು. ಈ ಸಾಮಾಜಿಕ ಸೇವೆಯನ್ನು ಕನಕಗಿರಿಯ ಶಿಲಾಶಾಸನವಾದ "ಕನಕಗಿರಿ ಚಿಕ್ಕ ಮಾದಿನಾಳ ರಸ್ತೆಯಲ್ಲಿ ಮಡಿವಾಳಪ್ಪನ ಹೊಲದಲ್ಲಿ ತ್ರುಟಿತ ಶಾಲಿವಾಹನ ಶಕವರ್ಷ ೧೫೯೨. ಶಾರ್ವರಿ, ಚಯಿತ್ರ....., ಅಂದರೆ ಕ್ರಿ.ಶ.೧೬೬೦ರಲ್ಲಿ ಗುಜ್ಜಲ ಇಮ್ಮಡಿ ಉಡಚನಾಯಕನ ಪತ್ನಿ ಚೆಣ್ಣಮ್ಮನು ಕನಕರಾಯನ ಕೆರೆಯನ್ನು ಕಟ್ಟಿಸಿದಂತೆ ತೋರುತ್ತದೆ"[೧೮]. ಚೆನ್ನಮ್ಮದೇವಿ ಕೆರೆಯ ಹೆಸರೇ ಸೂಚಿಸುವಂತೆ ಇದು ಕನಕಗಿರಿಯ ರಾಣಿ ಚೆನ್ನಾದೇವಿ ನಿರ್ಮಿಸಿದ ಕೆರೆಯಾಗಿದೆ. "ಗೌರಿಪುರ ಹಾಗೂ ಲಕಮಾಪುರ ಹಳ್ಳಿಗಳಿಂದ ಬರುವ ನೀರು ಈ ಕೆರೆಯಲ್ಲಿ ಸಂಗ್ರಹವಾಗುತ್ತಿತ್ತು. ಈ ಕೆರೆಯಿಂದ ಕನಕಗಿರಿ ಉತ್ತರ ಮತ್ತು ಪೂರ್ವದ ಜಮೀನುಗಳಿಗೆ ನೀರನ್ನು ಒದಗಿಸಲಾಗಿತ್ತು"[೧೯]. ಇಂದು ಈ ಕೆರೆಯು ಬಹುಮಟ್ಟಿಗೆ ನಾಶವಾಗಿದೆ.

### ೨. ರಾಣಿ ಅಚ್ಚಮ್ಮನ ಬಾವಿ

ಕನಕಗಿರಿ ಸಂಸ್ಥಾನದ ದೊರೆ ಇಮ್ಮಡಿ ಉಡಚನಾಯಕನ ರಾಣಿ ಅಚ್ಚಮ್ಮಳು. ಬಾವಿಯನ್ನು ನಿರ್ಮಿಸಿದ್ದು ಅದಕ್ಕಾಗಿ "ಅಚ್ಚಮ್ಮ ಬಾವಿ" ಎಂದು ಕರೆಯಲ್ಪಡುತ್ತದೆ.ಈ ಬಾವಿಯು ಕೃಷಿಗೆ ಉಪಯೋಗವಾಗಲಿ ಎಂದು ನಿರ್ಮಿಸಿರುವರು. ಇದು "ಕನಕಗಿರಿಯಿಂದ ಆಗ್ನೇಯಕ್ಕೆ ಸುಮಾರು ೬ಕಿ.ಮೀ ದೂರದಲ್ಲಿ ಇದೆ. ಸುತ್ತಲೂ ಜಮೀನುಗಳಿದ್ದು ಈ ಬಾವಿಯು ೧೦.೨ಮೀ. ಹಾಗೂ ೯.೬ಮೀ ಅಳತೆಯಲ್ಲಿದ್ದು, ಅದಕ್ಕೆ ಒಳಭಾಗದಲ್ಲಿ ಸಮಗೊಳಿಸಿದ ಕಲ್ಲಿನಿಂದ ಕಟ್ಟಲಾಗಿದೆ. ಬಾವಿ ಸುತ್ತಲೂ ನೆಲದಿಂದ ೧.೭೫ ಮೀ. ಎತ್ತರದ ಕಟ್ಟೆ ಇದೆ. ಈ ಬಾವಿಗೆ ದಕ್ಷಿಣ ಬದಿಯಲ್ಲಿ ಮೆಟ್ಟಿಲುಗಳ ಪ್ರವೇಶ ಹಾದಿ ಇದೆ.ಈ ಹಾದಿಯ ಇಕ್ಕೆಲಗಳಲ್ಲಿ ಶಿವಲಿಂಗ, ನಂದಿ ಹಾಗೂ ಅನಂತಶಯನ ಮಾಡುಗಳಿವೆ. ಬಾವಿಯ ಉತ್ತರದ ಬದಿಯಲ್ಲಿ ಏತ ವ್ಯವಸ್ಥೆಯಕಟ್ಟೆ ಮತ್ತು ಕೊಳದ ಅವಶೇಷಗಳನ್ನು ಕಾಣಬಹುದು"[೨೦].

### ೨. ಕನಕಮ್ಮ ರಾಣಿ ಬಾವಿ

ಈಕೆ ಉಡಚನಾಯಕನ ಮತ್ತೊಬ್ಬ ರಾಣಿಯಾದ ಕನಕಮ್ಮ. "ಕನಕಗಿರಿಯ ಉತ್ತರಕ್ಕೆ ಲಕ್ಷ್ಮಿಗುಡ್ಡದ ಬುಡದಲ್ಲಿನ ಬಾವಿಯ(ಬಸ್ತಿಹಾಳ) ಗೋಡೆಯ ಮೇಲೆ ಇರುವ ಶಾಸನವಾಗಿದೆ. ಶಾಲಿವಾಹನ ಶಕವರ್ಷ೧೫೯೦ ನೆಯ........ಆಶ್ವಿಜ,ಶು ೧೦ರಲ್ಲಿ ಅಂದರೆ ಸುಮಾರು ೫/೧೦/೧೬೬೮ರಲ್ಲಿ ಇಮ್ಮಡಿ ಉಡಿಸಿನಾಯಕ ಹೆಂಡತಿ ಕನಕಮ್ಮನು ಬಾವಿಯನ್ನು ಕಟ್ಟಿಸಿದಂತೆ

ತಿಳಿಯುತ್ತದೆ"[೧೧]. ರಾಣಿ ಕನಕಮ್ಮನವರ ಬಗ್ಗೆ ಶಾಸನೋಕ್ತವಾಗಿ ತಿಳಿಯಬಹುದು ಈಕೆ ಗುಜ್ಜಳ ವಂಶೋದ್ಭವ ಸಾಮಾಜಿಕವಾಗಿ ಸಂಸ್ಥಾನಕ್ಕೆ ನೀಡಿದ ಕೊಡುಗೆಯಾಗಿದೆ.

**೪. ೩. ಸಾಹಿತ್ಯ ಕ್ಷೇತ್ರದಲ್ಲಿ ನಾಯಕ ರಾಣಿಯರು**

ಜನರ ವೈವಿಧ್ಯಮಯ ಬದುಕಿನ ಪ್ರತಿಬಿಂಬವೇ ಜನಪದ ಸಾಹಿತ್ಯ. ಅವರು ತಮ್ಮ ಬದುಕಿನ ಸಂದರ್ಭದಲ್ಲಿದ್ದಂತಹ ಸಾಮಾಜಿಕ ಮೌಲ್ಯಗಳನ್ನು ನಂಬಿ ಬದುಕಿದವರು.ಔದ್ಯೋಗಿಕ ಸಂಸ್ಕೃತಿಗಿಂತಲೂ ಕೃಷಿ ಸಂಸ್ಕೃತಿಯೇ ಜನಪದ ಸಾಹಿತ್ಯದಲ್ಲಿ ಪ್ರಧಾನಸ್ಥಾನ ಪಡೆಯಿತು.ಅವನು ಸುಖ, ಶಾಂತಿ, ನೆಮ್ಮದಿಯಿಂದ ಬದುಕಬೇಕಾದರೆ ಶೀಲ, ಪಾತಿವ್ರತ್ಯ, ನೀತಿಯಂತಹ ಸಾಮಾಜಿಕ ಮೌಲ್ಯಗಳ ಜೊತೆಯಲ್ಲಿ ಪ್ರೀತಿ, ತ್ಯಾಗ ಸಹನೆಯಂತಹ ಮಾನವೀಯ ಮೌಲ್ಯಗಳನ್ನು ಸ್ವೀಕರಿಸಬೇಕಾಯಿತು. ಈ ಮೂಲಕ ಜನಪದ ಸಾಹಿತ್ಯವು ಐತಿಹಾಸಿಕ ಚರಿತ್ರೆಯನ್ನು ತಿಳಿಸುತ್ತದೆ.

ಜನಪದ ಸಾಹಿತ್ಯದ ಮೂಲಕ ನಾಯಕ ಸಂಸ್ಥಾನದ ರಾಣಿಯರ ಐತಿಹಾಸಿಕ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರವಹಿಸಿದೆ.

**೧. ಸುರಪುರ ನಾಯಕ ಸಂಸ್ಥಾನದ ರಾಣಿ ಈಶ್ವರಮ್ಮ**

ಜನಪದ ಸಾಹಿತ್ಯವು ಈ ಸಂಸ್ಥಾನದ ರಾಣಿಯ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರವಹಿಸಿದೆ.ಜನಪದ ಸಾಹಿತ್ಯದ ಮೂಲಕ ಸುರಪುರ ಸಂಸ್ಥಾನದ ರಾಣಿ ಈಶ್ವರಮ್ಮ(ಕ್ರಿ.ಶ.೧೮೪೩-೧೮೫೪)ರವರೆಗೆ ಆಳ್ವಿಕೆ ನಡೆಸಿ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ. ಕೆಲವರು ರಾಣಿ ಈಶ್ವರಮ್ಮನವರ ಚಾರಿತ್ರ್ಯವಧೆಯನ್ನು ಹಾಳುಮಾಡಲು ಯತ್ನಿಸಿದ್ದರೆ, ಅದು ತನ್ನ ಪತಿ ರಾಜಾ ಕೃಷ್ಣಪ್ಪನಾಯಕನ ಮರಣದ ನಂತರ ಆಡಳಿತದ ಚುಕ್ಕಣಿ ಹಿಡಿದಳು. ಇದನ್ನು ಸಹಿಸದ ಕೆಲವು ಸಂಬಂಧಿಕರು ಗ್ರಿಸ್ಲೆ ಮೆಡೋಸ್ ಟೇಲರ್ 'The Stay of my life' ಕೃತಿಯಲ್ಲಿ 'Conduct of Rani' ಈ ಲೇಖನದಲ್ಲಿ ಈಕೆಯ ಕುರಿತು ಕೆಟ್ಟದ್ದಾಗಿ ಬರೆಯುತ್ತಾನೆ. ಅಲ್ಲದೇ ಅನೇಕ ಬ್ರಿಟಿಷ್ ದಾಖಲೆಗಳು ಇವೆ. ಉದಾಹರಣೆಗೆ ಸುರಪುರ ನಾಯಕ ಸಂಸ್ಥಾನದ ದಿವಾನ್ ಚನ್ನಬಸಪ್ಪ ಹಾಗೂ ಸೈನ್ಯಾಧಿಕಾರಿ ಕಾಮಿಮನೊಂದಿಗೆ ರಾಣಿಯ ಸಂಬಂಧ ಅನೈತಿಕತೆಯಿಂದ ಕೂಡಿತ್ತು" ಎಂಬುದು ಮೂಲದಲ್ಲಿ ಆರೋಪಗಳನ್ನು ಮಾಡಿದ್ದು. ಆದರೆ ಜನಪದ ಸಾಹಿತ್ಯ ಅವುಗಳನ್ನು ತಳ್ಳಿ ಹಾಕಿದೆ.ಇಲ್ಲಿ ಮುಖ್ಯವಾಗಿ ನಾಯಕ ಸಂಸ್ಥಾನದ ರಾಣಿಯರಿಗೆ ಘೋಷಾಪದ್ಧತಿ ಕಟ್ಟುನಿಟ್ಟಾಗಿ ಆಚರಣೆಯಲ್ಲಿತ್ತು. ಇದನ್ನು ರಾಣಿ ಈಶ್ವರಮ್ಮ ಸಹ ಪಾಲಿಸುತ್ತಿದ್ದಳು.ಈ ಸಂದರ್ಭದಲ್ಲಿ ತನ್ನ ಪತಿ ರಾಜಾ ಕೃಷ್ಣಪ್ಪನಾಯಕ ಮರಣ ನಂತರ ಆಡಳಿತದ ಸಹಾಯಕ್ಕಾಗಿ ದಿವಾನರು, ಸೈನ್ಯಾಧಿಕಾರಿ ಸಹಾಯದಿಂದ ಆಡಳಿತ ವಿಭಾಗಗಳಲ್ಲಿ

ಬೇರೆ ಬೇರೆ ಅಧಿಕಾರಿಗಳನ್ನು ನೇಮಿಸುತ್ತಿದ್ದಳು.ಇದನ್ನು ಅರಿಯದೇ ಚಾರಿತ್ರ್ಯವಧೆಯನ್ನು ಮಾಡಿರುವರು.

**ಜನಪದ ಸಾಹಿತ್ಯ ರಾಣಿ ಈಶ್ವರಮ್ಮನ ಸಚ್ಚಾರಿತ್ರ್ಯ**

"ಪಟ್ಟದ ರಾಣಿ ಅರಗಿಣಿ, ಮಾತಿ ಜಾಣಿ
ಸುಗುಣಿ ಸಂಪನ್ನಿ। ರಾಣಿ ಈಶ್ವರಮ್ಮ
ಬಲು ಜಾಣಿ ನಮ್ಮ ನಾಡಿಗೆ
ಮಾವಿನ ಹೂ ಚೆಂದ, ಮಾವಿನ ಕಾಯಿ ಚೆಂದ
ನಡೆ–ನುಡಿ ಚೆಂದ। ಈಶ್ವರಮ್ಮನ
ಸ್ವಾಭಿಮಾನದ ಗುಣ ಬಲು ಚೆಂದ"[೨೨.]

ರಾಣಿ ಈಶ್ವರಮ್ಮ ಅರಸೊತ್ತಿಗೆ ಹೊಂದಿದ್ದು, ಸಂಪನ್ನಿ ಜಾಣಿ ಸುಗುಣವಂತಳು, ಸೂಕ್ಷ್ಮತೆ, ಸಹನಶೀಲಳು, ಎಲ್ಲ ಶ್ರೀಮಂತಿಕೆಯ ಗುಣದವಳು ಈಕೆ. ಜೊತೆಗೆ ಗಂಡನ ಮರಣದ ನಂತರ ಸುರಪುರವನ್ನು ಸಂಘಟಿಸಿದ್ದು, ಹಾಗೆಯೇ ಅದರ ಅಭ್ಯುದಯಕ್ಕಾಗಿ ಶ್ರಮಿಸಿದ ರಾಣಿ ಈಶ್ವರಮ್ಮ ಕುರಿತಾಗಿ ಮಾಹಿತಿಯನ್ನು ನೀಡುತ್ತದೆ.

ವಸಂತಕಾಲದಲ್ಲಿ ಊಹಿಸಲಾಗದ ರೀತಿಯಲ್ಲಿಯೇ ಕಾರ್ಯನಿರ್ವಹಿಸುತ್ತವೆ ಎಂಬುದನ್ನು ಸೂಚಿಸುತ್ತದೆ.ಇದು ಒಂದು ಪ್ರಮುಖವಾಗಿ ರಾಣಿ ಈಶ್ವರಮ್ಮನವರ ವ್ಯಕ್ತಿತ್ವವನ್ನು ಪ್ರಕೃತಿಯಲ್ಲಿ ಬದಲಾದಂತೆ ವಿಸ್ಮಯವನ್ನು ತೋರಿಸುವ ಈಕೆಯ ಬುದ್ಧಿ ಸಾಮರ್ಥ್ಯ ಆಡಳಿತ ನಿರ್ವಹಣೆ ಈ ಜನಪದ ಸಾಹಿತ್ಯದಲ್ಲಿ ತಿಳಿಸಲಾಗಿದೆ.

ರಾಣಿ ಈಶ್ವರಮ್ಮ ಮೆಡೋಸ್ ಟೇಲರ್‌ನಿಗೆ ಯಾವ ರೀತಿ ನಡುಕ ಹುಟ್ಟಿಸಿದಳು ಎಂಬುದನ್ನು ಈ ಕೆಳಗಿನ ಪದ್ಯದಿಂದ ತಿಳಿಯುತ್ತದೆ

"ರಾಣಿ ಈಶ್ವರಮ್ಮ ನಾಡಿ ತಕ್ಕವಳು
ನಡುಕ ಹುಟ್ಟಿಸಿದಳೋ। ಟೇಲರಸಾಯ್ಬಾಗ
ಬೈಗುಳದ ಸುರಿಮಳೆ ಸುರಿಸಿದಲೋ"[೨೩.]

ಮಿಡೋಸ್ ಟೇಲರ್‌ನ್ನು ರಾಣಿ ಈಶ್ವರಮ್ಮಳನ್ನು ಗಡಿಪಾರು ಮಾಡಿದನು.ಈಶ್ವರಮ್ಮನ ಮಗ ಚಿಕ್ಕ ವಯಸ್ಸಿನವನು.ಮಗನ ಮುಖ ನೋಡದೆ ಪರಿವಾರದ ಅಳು, ದುಃಖಗಳ ಮಧ್ಯ ತನ್ನ ತವರು ಮನೆ ರತ್ನಗಿರಿಗೆ ತೆರಳಿದಳು.ಪುನಃ ರಾಣಿ ೧೮೫೦ ಮೇ ೨೦ರಂದು ಸುರಪುರಕ್ಕೆ ಮರಳಿ ಆಗಮಿಸಿದಳು.ಈಗಾಗಲೇ ಸಾಲ, ಜಹಗೀರು, ಬೇಡಿಕೆಗಳನ್ನಿಟ್ಟು ಆಡಳಿತ

ನಿರ್ವಹಣೆಯನ್ನು ಮುಂದುವರಿಸಿದಳು.ಮೊದಲ ಕಾರಣದಿಂದ ಟೇಲರ್‌ನಿಗೆ ಬೈಗುಳದ ಮೂಲಕ ನಡುಕ ಹುಟ್ಟಿಸಿದಳು.

ಈಶ್ವರಮ್ಮನ ಸೈನಿಕರು ಮೆಡೋಸ್ ಟೇಲರ್‌ನನ್ನು ಮುತ್ತಿಗೆ ಹಾಕಿದ ಅಂಶವನ್ನು ಪ್ರತಿಬಿಂಬಿಸುವ ನುಡಿಯೊಂದು ಇಂತಿದೆ.

"ಗುಡ್ಡಾದ ವಾರೀಲೆ, ಬಂದಾರೋ ಸೈನಿಕರು
ಟೀಲರ್‌ನ ಬಂಗಲಿಗೆ ಇಳಿದಾರೋ। ಟೀಲರಸಾಯ್ಬ
ನೀರಿಗೆ ಬಾಯ ಬಿಡುತಾನ"[೨೪].

ಟೀಲರ್‌ಸಾಯ್ಬನ ಬಂಗಲೆಗೆ ರಾಣಿ ಈಶ್ವರಮ್ಮನ ಸೈನಿಕರು ಗುಡ್ಡದ ಮೂಲೆಯಿಂದ ಬಂದು ಬಂಗಲೆಗೆ ಮುತ್ತಿಗೆ ಹಾಕಿದರು. ಟೀಲರನನ್ನು ನಡುಕ ಹುಟ್ಟಿಸಿ ಜೀವ ಬೆದರಿಕೆ ಹಾಕಿದಳು. ಇದರಿಂದ ಸುರಪುರ ಸಂಸ್ಥಾನದ ಆಡಳಿತ ಸಂಪೂರ್ಣವಾಗಿ ತನ್ನ ಸ್ವಂತ ಇಚ್ಛೆಯಿಂದ ಬ್ರಿಟಿಷ್ ಸರಕಾರದ ಸಹಾಯದಿಂದ ಕೈಗೆತ್ತಿಕೊಳ್ಳಲು ಪ್ರಯತ್ನಿಸಿದಳು.

ಪಿಡ್ಡನಾಯಕ ಈ ಸಂಸ್ಥಾನಕ್ಕೆ ಮಾಡಿದ ಅನ್ಯಾಯವನ್ನು ಹಾಗೂ ಟೀಲರ್‌ನೊಂದಿಗಿದ್ದ ಸಂಬಂಧವನ್ನು ಅಲ್ಲದೆ ಈಶ್ವರಮ್ಮನ ವಿರುದ್ಧ ಆತನು ಹೂಡುತ್ತಿದ್ದ ಕುತಂತ್ರವನ್ನು ವಿವರಿಸುತ್ತದೆ.

"ಗಡಗಡ ನಡುಗ್ಯಾನೋ ಟೀಲರ ಸಾಯ್ಬಾಗ ಹೇಳ್ಯಾನೋ
ನನಗಿನ್ನು ಕಾಲ ಇಲ್ಲೆಂದಾನೋ। ಪಿಡ್ಡನಾಯಕ
ಮತ್ತೊಂದು ಮಸಲತ್ತು ಮಾಡ್ಯಾನೋ"[೨೫]

ಗ್ರಿಸ್ಲೆ ಹಾಗೂ ನಿಜಾಮ ಸರಕಾರವು ಪಿಡ್ಡನಾಯಕನನ್ನು ದಿವಾನ್‌ನನ್ನಾಗಿ ನೇಮಿಸಬೇಕೆಂದು ಆಲೋಚಿಸಿ ಜೊತೆಗೆ ಕೈಗೊಂಬೆಯನ್ನಾಗಿ ಮಾಡಿಕೊಳ್ಳಬೇಕೆಂಬ ಆಸೆಯೂ ಇತ್ತು.ಗ್ರೀಸ್ಲೆ ರಾಣಿ ಈಶ್ವರಮ್ಮನ ಮನವೊಲಿಸಿ ಇವರ ಒಪ್ಪಿಗೆಯ ಮೇರೆಗೆ ಪಿಡ್ಡನಾಯಕನನ್ನು ದಿವಾನನನ್ನಾಗಿ ನೇಮಿಸುವಲ್ಲಿ ಯಶಸ್ವಿಯಾದನು.

ಗ್ರೀಸ್ಲೆ, ನಿಜಾಮ್ ಸರಕಾರ ಹಾಗೂ ಪಿಡ್ಡನಾಯಕ ರಾಣಿಯ ವಿರುದ್ಧ ಮಸಲತ್ತು ಮಾಡಲು ಮುಂದಾದರು. ಮಗನಾದ ನಾಲ್ವಡಿ ವೆಂಕಟಪ್ಪನಾಯಕನನ್ನು ಕಣ್ಣಲ್ಲಿ ಕಣ್ಣಿಟ್ಟು ಸಲುಹಿದ್ದಾಳೆ.

"ಹದ್ದಿನ ಕಣ್ಣಿಟ್ಟು ಮುದ್ದುಕಂದನ ಸಾಕಿ
ಮೈದುನನ ಎದಯಾಗ ನಡುಕ। ಹುಟ್ಟಿಸಿದಳು
ಸ್ವಾಭಿಮಾನದ ಕಿಚ್ಚು ಬೆಳೆಸಿದಳೋ
ಚಿನ್ನದ ಗುಣದವಳು, ದಿಟ್ಟ ನಿಲುವಿನವಳು
ಭಾಷೆಗೆ ತಪ್ಪಿದವಳು। ಈಶ್ವರಮ್ಮ
ಮಗನ ರಕ್ಷಣೆಗೆ ನಿಂತವಳು"[೨೬]

ಕಂಪನಿ ಸರಕಾರದ ಈ ಕುಟಿಲ ನೀತಿ ಅರಿಯದ ನಾಲ್ವಡಿ ವೆಂಕಟಪ್ಪನಾಯಕ ಮರುಳಾಗಿ ತಾಯಿಯನ್ನು ಗಡಿಪಾರು ಶಿಕ್ಷೆಗೆ ಒಪ್ಪಿಕೊಂಡನು.ಅರಮನೆಯಿಂದ ಹೊರಟ ರಾಣಿ ದುಃಖಗಳ ಮಧ್ಯೆ ತನ್ನ ತವರು ಮನೆಗೆ ತೆರಳಿ ಪುನಃ ರಾಣಿ ಸುರಪುರಕ್ಕೆ ಮರಳಿ ಆಗಮಿಸಿದಳು. ಆಕೆ ತನ್ನ ಮಗನಲ್ಲಿ ಸ್ವಾತಂತ್ರ್ಯದ ಕಿಡಿ ಪ್ರಜ್ವಲಿಸುವಂತೆ ಮಾಡುತ್ತಾಳೆ. ತಾಯಿಯ ಪ್ರಭಾವವೇ ಮುಂದೆ ನಾಲ್ವಡಿ ವೆಂಕಟಪ್ಪನಾಯಕನಿಗೆ ಪ್ರೇರಣೆಯಾಗಿ ಬ್ರಿಟಿಷರ ವಿರುದ್ಧ ಕಹಳೆ ಊದಿದ ಕೀರ್ತಿಗೆ ಪಾತ್ರನಾಗುತ್ತಾನೆ.

ಚನ್ನಬಸಪ್ಪ ಹಾಗೂ ಕಾಸೀಮನ ಜೊತೆಗೆ ಅನೈತಿಕ ಸಂಬಂಧವಿತ್ತು ಎಂಬ ಹೇಳಿಕೆಗಳನ್ನು ಜನಪದ ನುಡಿಯೊಂದು ಸಂಪೂರ್ಣ ತಳ್ಳಿ ಹಾಕುತ್ತದೆ.

"ಕಾಸೀಮ ನನ್ನಣ್ಣ, ಚನ್ನಬಸವ ನನ್ನ ತಮ್ಮ
ಎಸೆ ತುಂಬ ಆಸೆ ಇಟ್ಟವರೋ। ಕ್ಯಾಮಲಸಾಯ್ಬಗಾ
ಬೆಳ್ಳಿಹಣ್ಣು ತಿನಿಸಿದವರೋ"[೨೭]

ಗಂಡನ ಮರಣದ ನಂತರ ಸುರಪುರವನ್ನು ಸಂಘಟಿಸಿ ಅದರ ಅಭ್ಯುದಯಕ್ಕಾಗಿ ಶ್ರಮಿಸುತ್ತಿದ್ದ ರಾಣಿ ಈಶ್ವರಮ್ಮನ ಕುರಿತಾಗಿ ಗ್ರೀಸ್ಲೆ, ಮೆಡೋಸ್ ಟೇಲರ್ ಹಾಗೂ ಅನೇಕ ಬ್ರಿಟಿಷ್ ದಾಖಲೆಗಳು ಆಕೆಯ ಚಾರಿತ್ರ್ಯವಧೆಯನ್ನು ಮಾಡಿವೆ. "ದಿವಾನ್ ಚನ್ನಬಸಪ್ಪ ಹಾಗೂ ಸೈನ್ಯಾಧಿಕಾರಿ ಕಾಸೀಮನೊಂದಿಗೆ ರಾಣಿಯ ಸಂಬಂಧ ಅನೈತಿಕತೆಯಿಂದ ಕೂಡಿತ್ತು" ಎಂಬ ಮುಂತಾದ ಆರೋಪಗಳನ್ನು ಮಾಡುತ್ತವೆ. ಜನಪದ ನುಡಿಯೊಂದು ಮೇಲೆ ತಿಳಿಸಿರುವಂತೆ ಸಂಪೂರ್ಣ ತಳ್ಳಿ ಹಾಕುತ್ತದೆ.

ರಾಣಿ ಈಶ್ವರಮ್ಮ ಸಚ್ಚಾರಿತ್ರ್ಯವಂತಳಾಗಿರುವುದರಿಂದಲೇ ಸುರಪುರ ಸಂಸ್ಥಾನದ ಜನತೆ ಹಾಗೂ ಬೇಡ ಸೈನಿಕರು ಈಕೆಯ ರಕ್ಷಣೆಗಾಗಿ ನಿಂತಿದ್ದರು. ಈಕೆಯ ಆಜ್ಞೆಯನ್ನು ಚಾಚೂ ತಪ್ಪದೇ ಪಾಲಿಸುತ್ತಿದ್ದರು.ಜೀವಕೊಡಲು ಸನ್ನದ್ದರಾಗುತ್ತಿದ್ದರು.ಆ ಊರಿನ ಜನತೆ ರಾಣಿ ಈಶ್ವರಮ್ಮ, ರಾಜಾ ವೆಂಕಟಪ್ಪನಾಯಕರು ತಮ್ಮ ತಮ್ಮ ಮನೆಯಲ್ಲಿ ಹುಟ್ಟಿಬರಲಿ ಎಂಬ ಆಶಾಭಾವನೆಯನ್ನು ಹೊಂದಿದ್ದರು ಎಂಬ ಅಂಶವನ್ನು ಜನಪದ ನುಡಿ ಹೀಗೆ ಹೇಳುತ್ತದೆ.

"ಉಪ್ಪರಿಗೆ ಮನೆಬೇಕು, ಕೊಪ್ಪರಿಗೆ ಹಣಬೇಕು
ರಾಣಿ ಈಶ್ವರಮ್ಮನಂಥ ಸೊಸೆಬೇಕು। ನಮ್ಮನೆಗೆ
ಸುರಪುರ ರಾಜನಂಥ ಮಗಬೇಕು"[೨೮]

ಅಂತಸ್ತಿನ ಮನೆ ಬೇಕು, ನಾಲ್ಕೈದು ತಲೆಮಾರಿಗಾಗುವಷ್ಟು ಸಂಪತ್ತು ಬೇಕು, ಈಶ್ವರಮ್ಮನಂತಹ ದಿಟ್ಟ ಹೆಣ್ಣು ಮನೆಯ ಸೊಸೆಯಾಗಬೇಕು.ನಮ್ಮ ಮನೆಗೆ ಸುರಪುರ ರಾಜನಂತೆ ಅಧಿಕಾರವಹಿಸುವ, ಆಡಳಿತ ಮಾಡುವ ಮಗಬೇಕು ಎಂಬುದು ಜನಪದರ ಅಭಿಪ್ರಾಯ.

**ಆರತಿ ಪದ್ಯ**

"ಚಿನ್ನದಾರುತಿ ಬೆಳಗಿರೆ
ರಾಣಿ ಈಶ್ವರಮ್ಮನಿಗೆ
ರನ್ನದಾರುತಿ ಬೆಳಗಿರೆ
ನಾಡ ಹುಟ್ಟಿದ ಮ್ಯಾಲೆ
ನೋಡಿಲ್ಲ ಇಂಥವರ
ಸ್ವಾಭಿಮಾನದ ತಾಯಿಗೆ
ಚಿನ್ನದಾರುತಿ ಬೆಳಗಿರೆ
ರಾಣಿ ಈಶ್ವರಮ್ಮನಿಗೆ
ರನ್ನದಾರುತಿ ಬೆಳಗಿರೆ"[೨೯]

ಸುರಪುರದ ಊರಿನ ಜನತೆ ರಾಣಿ ಈಶ್ವರಮ್ಮ, ರಾಜಾವೆಂಕಟಪ್ಪ ನಾಯಕರ ಗುಣ, ವೀರತನ, ಹೊಗಳುತ್ತ ರಾಣಿ ಈಶ್ವರಮ್ಮನಂಥ ಸೊಸೆಬೇಕು, ಮನೆಯನ್ನು ಬೆಳಗುವಂತಹ, ಬೆಳೆಸುವ ಮನೋಭಾವ ಇರುವಂಥ ಸೊಸೆಬೇಕು. ಉತ್ತಮ ಗುಣವುಳ್ಳವ ಮಗಬೇಕು ಎಂದು ಜನಪದ ಹಾಡು ಹಾಗೂ ಆರತಿ ಪದ್ಯದಮೂಲಕ ರಾಣಿ ಈಶ್ವರಮ್ಮನನ್ನು ದೇವತೆಯ ರೂಪದಲ್ಲಿ ಆರಾಧಿಸುತ್ತಾರೆ. ಸುರಪುರದ ಜನ ಇಂದಿಗೂಈ ಹಾಡನ್ನು ಹೇಳುವರು.

**೨. ನಾಲ್ವಡಿ ವೆಂಕಟಪ್ಪನಾಯಕನ ಪತ್ನಿ ರಾಣಿ ಈಶ್ವರಮ್ಮನ ಬಗ್ಗೆ ಲಾವಣಿ ಸಾಹಿತ್ಯದಲ್ಲಿ**

"ನಾನ್ಹೆಂಗೆ ಇರಲಿ ಸಣ್ಣಾಕಿ। ಅರಮನೆಯೊಳಗೆ ಒಬ್ಬಾಕಿ
ದೇವರಿಗೆ ಮಾಡತಾಳ ಹರಕಿ। ದೊರೆಯ ನವನಾಯ್ಕಿ"[೩೦]

ಸುರಪುರ ಸಂಸ್ಥಾನದ ಅರಸ ನಾಲ್ವಡಿ ವೆಂಕಟಪ್ಪನಾಯಕನನ್ನು ಅಂಗ್ಲರು ಮೋಸದಿಂದ ಕೊಂದಾಗ ಆತನ ರಾಣಿಯು ನಿಸ್ಸಹಾಯಕ ಅಳಲಿನ ಚಿತ್ರಣವನ್ನು ಹಾಲ್ಗೇರಿ ಚನ್ನಬಸವಯ್ಯನವರ ಬಂಡಾಯ ಲಾವಣಿ ಮಾಹಿತಿಯನ್ನು ನೀಡುತ್ತದೆ.

ಈ ಒಂದೊಂದು ಸಾಲುಗಳು ನಮ್ಮನ್ನು ನಮ್ಮ ಮನಸ್ಸು ಕಲಿಸುತ್ತದೆ.ಅರಮನೆಯ ರಾಣಿಯಾದರೂ ಗಂಡನಿಲ್ಲದ ನೆಲೆಯ ಬಾಳು, ಮುತ್ತೈದೆತನವು ಕಳಚಿನ ಬಾಳು ಅದರಲ್ಲಿಯೂ ಅರಮನೆಗೆಲ್ಲ ಇರುವ ಚಿಕ್ಕ ವಯಸ್ಸಿನ ತರುಣಿಯಾದ ತನ್ನನ್ನು ದುಷ್ಟರ ಕಣ್ಣಿಗೆ ಬೀಳದಂತೆ ಕಾಯೋ ದೇವ ಇಲ್ಲವಾದರೆ ಬಾಳೆಲ್ಲ ಗೋಳು, ಅಂತೇ ದೇವನೊಬ್ಬನೆ ಆಧಾರ ಎಂದು ದೇವರನ್ನು ಪರಿಪರಿಯಾಗಿ ಬೇಡಿಕೊಳ್ಳುತ್ತಾಳೆ.ನಾಲ್ವಡಿ ವೆಂಕಟಪ್ಪನಾಯಕ ಈಶ್ವರಮ್ಮನ ದತ್ತು ಮಗ ಇವರ ಆಡಳಿತದಲ್ಲಿ ಹಲವು ತೊಂದರೆ ಅನುಭವಿಸಿದರು, ಇದನ್ನು ಕಣ್ಣಾರೆ ಕಂಡ ರಾಣಿ

ರಂಗಮ್ಮ, ದಾಯಾದಿಗಳು, ಬ್ರಿಟಿಷ್ ಹಾಗೂ ನಿಜಾಮ್ ಸರ್ಕಾರದ ಅಧಿಕಾರಿಗಳ ಭಯದಿಂದ ತನ್ನ ಅಳಲನ್ನು ತೋಡಿಕೊಳ್ಳುವಳು.

**೩. ರಾಣಿ ರಂಗಮ್ಮ(ಕ್ರಿ.ಶ.೧೮೧೮-೧೮೨೭)**

ಮುಮ್ಮಡಿ ರಾಜದೇವೇಂದ್ರ ವೆಂಕಟಪ್ಪ ನಾಯಕನ ಪತ್ನಿ ರಾಣಿ ರಂಗಮ್ಮ.ಈಕೆ ತಿರುಪತಿಯ ವೆಂಕಟರಮಣನ ಅನನ್ಯ ಭಕ್ತಳು.ಆತನ ಕೃಪೆಗೆ ಪಾತ್ರಳಾಗಿದ್ದವಳು.

"ಮಂಗಳಮನಿ ಪಾಡರೆ ಅಂಗನುಲಾರ
ರಂಗುಗನು ಸುರಪುರ ಮುನೇಲಿನ
ಕುರಂಗ ಲೋಚ ನುಡೈನ ಮನಶ್ರೀ
ರಂಗಮಾಂಬನು ಬ್ರೋಚು ಗರುಡ
ತುರಂಗುಡೌ ಗೋಪಾಲ ಸಾಮಿಕಿ"
"ಕರಿರಾಜ ವರದುನಕು, ಕರುಣಾಸಾಗರುಡನ ಬಿರುದನಕು
ಸರಸ ಕೌಲಿಕ ಕಂಠಿ ಚಾವರ ಮುಲಿಚಚಿನ ರಂಗಮಾಂಬನು
ತಿರುಪತಿ ಶುಂಡಗುಚು ಬ್ರೋಚಿನ ಮುರಲಿಧ
ರುನ ಕುದಿದಿತಕ ಹರುನಕು ಮಖಗಳ ಮನಿ"[೩೧]

ಮಂಗಳವೆಂದು ಹಾಡಿರೆ ಮಂಗಳಾಗಿಯರು ಸೇರಿ ಹಾಡಿರೆ ಸುರಪುರವನ್ನು ಬಣ್ಣಗಳಿಂದ ತುಂಬಿರುವ ಬಗ್ಗೆ ವರ್ಣನೆಯ ಮಾಡುತ್ತ ಶ್ರೀರಂಗನನ್ನು ನೆನೆಯುತ್ತ, ಹಲವು ವಿಧದಲ್ಲಿ ವರ್ಣಿಸಿ ಅವನು ಜಿಂಕೆಯ ಕಣ್ಣಿನವನು ಆ ಕಣ್ಣಿನಿಂದ ರಂಗಮಾಂಬಳನು ಸಲಹುವ, ನವಿಲಿನ ಗರಿಯ ಕಿರೀಟ ಧರಿಸಿರುವ ಗೋಪಾಲ ಕೃಷ್ಣನಿಗೆ ನಿನ್ನ ವಾಹನ ಗರುಡ ಸಲುಹುವಂತೆ ರಮಾಂಬನನ್ನು ಗಜ ಎಂಬ ಋಷಿ(ಕರಿರಾಜ ವರದನು)ಯಿಂದಕರುಣಾಸಾಗರ ಎಂಬ ಬಿರುದನ್ನು ನೀಡಿದನು. ಶ್ರೀರಂಗನ ಅಲಂಕಾರಕ್ಕೆ ಕಂಠಿಕಾಲಿಕ (ಕಿರೀಟದ ಎಡಭಾಗದ ಅಥವಾ ಬಲಭಾಗದಲ್ಲಿ ಮುತ್ತಿನ ಗುಚ್ಛ) ಇವುಗಳನ್ನು ನೀಡಿರುವ ರಂಗಮಾಂಬನನ್ನು ತಿರುಪತಿ ಕಾಯುವ ಹಾಗೆಯೇ ರಂಮಾಂಬನನ್ನು ಕಾಯೋ ತಂದೆ ಎಂಬ ಉಕ್ತಿ ಇದೆ.

**೪.೪. ಶೈಕ್ಷಣಿಕ ಕ್ಷೇತ್ರದಲ್ಲಿ ನಾಯಕ ರಾಣಿಯರು**

ನಾಯಕ ಜನಾಂಗದವರು ಮೂಲತಃ ಆಂಧ್ರಪ್ರದೇಶದ ಶ್ರೀಶೈಲದ ಬಳಿಯ ಕರಿಮಲೆ ಕೊಮ್ಮ ಮಲೆಗಳ ಕಡೆಯಿಂದ ಮತ್ತು ತಿರುಪತಿ ಬಳಿಯ ಜಡೇಕಲ್ಲುದುರ್ಗದವರು.ಇದು ಆಂಧ್ರದ ಕಡಪ ಜಿಲ್ಲೆಯಲ್ಲಿ ಇದೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.ಇವರು ಮೂಲತಃ ಬೇಟೆಗಾರರೂ, ಪಶುಪಾಲಕರೂ ಆದ ಈ ಜನ ಹುಲ್ಲು, ನೀರು ಹುಡುಕುತ್ತಾ ದೇಶಾಂತರ

ಬಂದವರು.ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ನಂತರ ಕರ್ನಾಟಕದತ್ತ ವಲಸೆ ಬರ ತೊಡಗಿದರು.ಈ ಜನ ವೀರಯೋಧರಾಗಿದ್ದರು, ಯುದ್ಧ ಪ್ರೇಮಿಗಳಾಗಿದ್ದರು. ಹೀಗಾಗಿ ಇವರಿಗೆ ಸಮಾಜದಲ್ಲಿ ಹೆಚ್ಚಿನ ಸ್ಥಾನಮಾನಗಳು ಸಹಜವಾಗಿ ದೊರೆತವು.ಇವರ ಮನೆಯು ತೆಲುಗು. ಈ ಜನಾಂಗದ ಚರಿತ್ರೆಗೆ ಸಂಬಂಧಿಸಿದ ಎಷ್ಟೋ ದಾಖಲೆಗಳು ತೆಲುಗಿನಲ್ಲಿ ಸಿಗುತ್ತವೆ. ಆದರೆ ಇವರು ಕನ್ನಡ ಪ್ರಾಂತ್ಯಗಳಲ್ಲಿ ನೆಲೆಸಿದ ನಂತರ ದಾಖಲೆಗಳು ಕನ್ನಡದಲ್ಲಿ ಸಿಗುತ್ತವೆ. ಇಂದು ಕನ್ನಡ ಪ್ರಾಂತ್ಯಗಳಲ್ಲಿ ನೆಲೆಸಿರುವ ಇವರ ತೆಲುಗು ಬಹುಪಾಲು ಕನ್ನಡ ಮಿಶ್ರವಾಗಿದ್ದು, ತನ್ನದೇ ಆದ ವಿಚಿತ್ರ ಶೈಲಿಯಲ್ಲಿ ಹೊಂದಿದೆ. ಸುರಪುರ ನಾಯಕ ಸಂಸ್ಥಾನ, ಆನೆಗೊಂದಿ ನಾಯಕ ಸಂಸ್ಥಾನಗಳ ಜನಪದ ಸಾಹಿತ್ಯ ಶಾಸನಗಳು ಲಭ್ಯವಾಗಿದೆ.ರಾಣಿಯರು ಐತಿಹಾಸಿಕವಾಗಿ ಮತ್ತು ಸಾಮಾಜಿಕವಾಗಿ, ಧಾರ್ಮಿಕವಾಗಿ ಸಾಧನೆಗಳನ್ನು ಮಾಡಿರುವ ಉಲ್ಲೇಖಗಳು ಸಿಗುತ್ತವೆ.

ಸ್ತ್ರೀಯರಿಗೆ ಎಂಟರಿಂದ ಹನ್ನೆರಡು ವರ್ಷಗಳೊಳಗೆ ವಿವಾಹ ಪದ್ಧತಿಯಿತ್ತು. ಈ ಪದ್ಧತಿಯು ಪೂರ್ವ ಪಾಳೆಯಗಾರರ ಕಾಲದಿಂದ ನಡೆದುಬಂದ ಪದ್ಧತಿಯಾಗಿದೆ. ಸ್ತ್ರೀಯರಿಗೆ ವಿದ್ಯಾಭ್ಯಾಸಕ್ಕೆ ಸಮಯವಿರುತ್ತಿರಲಿಲ್ಲ. ಆದರೂ ಇವರು ಅಲ್ಪಸ್ವಲ್ಪ ವೃತ್ತಿ ಶಿಕ್ಷಣವನ್ನು ಪಡೆದು, "ಸ್ತ್ರೀ ಹುಟ್ಟಿದಾಗ ತಂದೆಯ ಆಶ್ರಯ, ಬೆಳೆದಾಗ ಗಂಡನ ಆಶ್ರಯ, ವೃದ್ಧಾಪ್ಯದಲ್ಲಿ ಮಗನ ಆಶ್ರಯ"ಎಂಬಂತೆ ನಾಣ್ಣುಡಿಯು ತಿಳಿಸುತ್ತದೆ. ಕಾಲಘಟ್ಟಗಳಲ್ಲಿ ಅರಸು ಮಕ್ಕಳ ಹಾಗೂ ಶ್ರೀಮಂತರ ಹೆಣ್ಣಮಕ್ಕಳು ತಕ್ಕಮಟ್ಟಿಗೆ ವಿದ್ಯಾವಂತರಾಗಿರುತ್ತಿದ್ದರು. ಇವರು ಸಂಗೀತ, ನೃತ್ಯ, ವೀಣೆ ನುಡಿಸುವಂತಹ ಕಲೆಗಳ ಅಭ್ಯಾಸಕ್ಕೆ ಮಹತ್ವ ಕೊಟ್ಟಿದ್ದರು.ಉದಾಹರಣೆಗೆ ಸುರಪುರದ ರಾಣಿ ರಂಗಮ್ಮ ಕವಿಯತ್ರಿಯಾಗಿದ್ದಳು.ಈಕೆಯು ಸಾಹಿತ್ಯ ರಚನೆಗಳು ಇದ್ದವೆಂದು ಹೇಳುತ್ತಾರೆ. ಈಕೆ ತೆಲುಗು ಮತ್ತು ಕನ್ನಡ ಓದಲು ಬರೆಯಲೂ ಬಲ್ಲವಳಾಗಿದ್ದಳು.ಕೆಲವರು ಯುದ್ಧ ವಿದ್ಯೆಯಲ್ಲಿಯೂ ಪರಿಣಿತರಾಗಿದ್ದರು. ಹೀಗೆ ಅರಸು ಮಕ್ಕಳು ರಾಣಿಯರು ಯುದ್ಧ ವಿದ್ಯೆ, ಖಡ್ಗ ವಿದ್ಯೆ, ರಾಜ್ಯಾಡಳಿತ ವಿದ್ಯೆಯಲ್ಲಿಯೂ ಪ್ರವೀಣರಾಗಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದರು.ರಾಣಿ ಕುಪ್ಪಮ್ಮ ಆನೆಗೊಂದಿಯ ನಾಯಕರ ಪಟ್ಟದ ರಾಣಿ ಈಕೆ ಹೊರಡಿಸಿದ ಶಾಸನಗಳು ಉರ್ದುಭಾಷೆ, ಕನ್ನಡ ಮತ್ತು ತೆಲುಗಿನಲ್ಲಿದೆ. ಇದರ ಮೂಲಕ ತಿಳಿದುಬರುವುದು ಬ್ರಿಟಿಷ್ ಹಾಗೂ ನಿಜಾಮ್ ಸರ್ಕಾರಗಳ ಆಳ್ವಿಕೆಯು ಆಡಳಿತ ಭಾಷೆ ಉರ್ದು ಭಾಷೆ ಹಾಗೂ ಇಂಗ್ಲಿಷ್‌ನಲ್ಲಿತ್ತು ಎಂದು ತಿಳಿದುಬರುತ್ತದೆ.ಸುರಪುರದ ರಾಣಿ ಈಶ್ವರಮ್ಮ ಸಹ ಮೂರು ಭಾಷೆಯವುಳ್ಳವಳು ಹಾಗೂ ಆಡಳಿತ ವೈಖರಿಯು ಅರಸರಂತೆ ಪರಿಣಿತಿ ಹೊಂದಿರುವ ರಾಣಿ ಆಡಳಿತ ಇಂದಿಗೂ ಐತಿಹಾಸಿಕವಾಗಿ ಛಾಪು ಮೂಡಿಸಿದ್ದಾಳೆ.ಆಡಳಿತ ಮಾಡಬೇಕಾದ ದಾಖಲೆಗಳನ್ನು ಪರಿಶೀಲನೆ, ಆಜ್ಞೆಗಳನ್ನು ಹೊರಡಿಸುವುದು, ಎಲ್ಲಾ ರೀತಿಯಿಂದ ಆಡಳಿತ ವೈಖರಿಯು ಮುಖ್ಯವಾಗಿ ದಾಖಲು ಪತ್ರಗಳು ಮುಖ್ಯವಾಗಿದ್ದವು.ಸ್ವತಂತ್ರಪೂರ್ವದಲ್ಲಿ ಶಿಕ್ಷಣ ಪಡೆಯುವ ಪದ್ಧತಿ ರಾಣಿಯರಿಗೆ ಸಾರ್ವಜನಿಕ ಶಿಕ್ಷಣ ಸ್ಥಳಗಳಲ್ಲಿ ನೀಡುತ್ತಿರಲಿಲ್ಲ. ಘೋಷ ಪದ್ಧತಿ ಇರುವುದರಿಂದ ರಾಣಿಯರಿಗೆ ಈ ಹಿಂದೆ ಅರಮನೆಯಲ್ಲಿ ಶಿಕ್ಷಣವನ್ನು ಪ್ರತ್ಯೇಕವಾಗಿ

ಗುರುಗಳು ಅರಮನೆಗೆ ಬಂದು ಶಿಕ್ಷಣ ನೀಡುವ ಪದ್ಧತಿ ಇತ್ತು.ಆದರೆ ಕಾಲಘಟ್ಟಗಳ ನಂತರ ಶಿಕ್ಷಣ ಸಾರ್ವಜನಿಕವಾಗಿ ಸರ್ವೇಸಾಮಾನ್ಯವಾಗಿ ಸರ್ಕಾರಿಯ ಶಿಕ್ಷಣ ಸಂಸ್ಥೆಯಲ್ಲಿ ಶಿಕ್ಷಣ ಪಡೆಯುವ ಪದ್ಧತಿ ಇದೆ.ಕನಕಗಿರಿ ನಾಯಕ ಸಂಸ್ಥಾನದ ರಾಣಿಯ ಸಾಮಾಜಿಕ, ಧಾರ್ಮಿಕ ದಾನ ದತ್ತಿ ನೀಡಿದರು ಎಂಬುದನ್ನು ಶಾಸನಗಳು ಹೇಳುತ್ತವೆ. ಕನಕಗಿರಿ ರಾಣಿಯರು ಶಿಕ್ಷಣ ಪಡೆದುಕೊಂಡಿದ್ದರು.ರಾಣಿ ಕಾಟಮ್ಮ, ರಾಣಿ ಲಕ್ಷ್ಮೀನಾಗತಿ, ರಾಣಿ ಅಚ್ಚಮ್ಮ, ರಾಣಿ ಚೆನ್ನಮ್ಮ, ರಾಣಿ ಕನಕಮ್ಮ, ರಾಣಿ ವೆಂಕಟಮ್ಮ, ಗಾಣಿ ಗೌರಮ್ಮ, ಅರಸು ಮನೆತನದ ರಾಣಿಯರ ಸಾಮಾಜಿಕ ಕಾರ್ಯಗಳು ಮಾಡಿರುವ ಹಾಗೂ ಹೊರಡಿಸಿರುವ ಶಾಸನಗಳ ಮೂಲಕ ತಿಳಿದುಬರುವುದು.

- **ನಾಯಕ ಸಂಸ್ಥಾನದ ರಾಣಿಯರು ಧಾರ್ಮಿಕ ಆಚರಣೆಯಲ್ಲಿ ಭಾಗವಹಿಸುವಿಕೆ**

ನಾಯಕ ಸಂಸ್ಥಾನದ ರಾಣಿ ಹೆಚ್ಚು ಧಾರ್ಮಿಕ ಆಚರಣೆಯಲ್ಲಿ ಭಾಗವಹಿಸುವುದಕ್ಕೆ ಅನುಮತಿ ಇತ್ತು. ಹಬ್ಬಗಳು ವರ್ಷಾದ್ಯಂತ ಹಂಚಿಕೊಂಡಿರುತ್ತಿದ್ದವು. ಸುರಪುರ, ಆನೆಗೊಂದಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ, ಗುಡೇಕೋಟೆ, ಜರಿಮಲೆ ಮೊದಲಾದ ಸಂಸ್ಥಾನಗಳಲ್ಲಿ ಹಬ್ಬಗಳು ಆಚರಿಸುತ್ತಿದ್ದರು. ಈ ಹಬ್ಬಗಳಲ್ಲಿ ವಿಜಯದಶಮಿ, ದೀಪಾವಳಿ, ಯುಗಾದಿ, ರಥಸಪ್ತಮಿ, ಮಕರ ಸಂಕ್ರಾಂತಿ, ಗೋಕುಲಾಷ್ಟಮಿ, ಶ್ರೀಜಯಂತಿ, ಏಕಾದಶಿ, ಚರ್ತುಮಾಸ ವ್ರತಗಳು, ರಾಮನವಮಿ, ಮೊದಲ ಹಬ್ಬಗಳು ಆಯಾಯ ಮಾಸಗಳಲ್ಲಿ ಹಬ್ಬಗಳು ಬರುವವು ಇದು ಸಂಸ್ಕೃತಿಯ ಪ್ರತಿಬಿಂಬವಾಗಿದೆ.

**೧. ಯುಗಾದಿ**

ಈ ಹಬ್ಬವು ಹೊಸವರುಷದ ಆರಂಭದ ದಿನವೆಂದು ತಿಳಿಯಲಾಗಿದೆ. ನಾಯಕ ಸಂಸ್ಥಾನಗಳ ಸುಣ್ಣ ಬಣ್ಣ ಬಳಿಸುವುದು, ಬಾಗಿಲಿಗೆ ಹಸಿರು ತೋರಣ, ದ್ವಾರಬಾಗಿಲ ಮುಂಭಾಗದಲ್ಲಿ ರಂಗಿನ ರಂಗವಲ್ಲಿಯನ್ನು ಹಾಕಿ ಅರಮನೆಯನ್ನು ಶೃಂಗಾರಿಸುತ್ತಾರೆ. ಹಬ್ಬದ ದಿನ ಅರಸ ಮತ್ತು ರಾಣಿಯರು ಬೆಳಿಗ್ಗೆ ಅಭ್ಯಂಜನ ಸ್ನಾನ ಮಾಡಿ ಹೊಸಬಟ್ಟೆಗಳನ್ನು ಧರಿಸುತ್ತಿದ್ದರು. ಅರಮನೆಯಲ್ಲಿ ನಿತ್ಯಪೂಜೆಗಳು ಜರುಗಿಸಿ ನಂತರದಲ್ಲಿ ತಮ್ಮ ಮನೆ ದೇವರ ದೇವಾಲಯಗಳಿಗೆ ಫಲಪುಷ್ಪಗಳನ್ನು ಸಮರ್ಪಣೆ ಮಾಡುವರು. ತಮ್ಮ ಸಂಸ್ಥಾನದಲ್ಲಿ ಕೆಲಸ ಮಾಡುವವರಿಗೆ ಹೊಸವಸ್ತ್ರ ಹಾಗೂ ಸಿಹಿ ತಿಂಡಿಯನ್ನು ನೀಡುವರು. ಈ ಸಂಸ್ಥಾನದವರು ಎಲ್ಲಾ ಸಂಬಂಧಿಕರೊಂದಿಗೆ ಈ ಹಬ್ಬವನ್ನುಆಚರಿಸುವರು. ಯುಗಾದಿಯ ಚಂದ್ರದರ್ಶನನ್ನು ಸಾಯಂಕಾಲದ ಸಂದರ್ಭದಲ್ಲಿ ಪರಿವಾರವೆಲ್ಲ ಚಂದ್ರದರ್ಶನವನ್ನು ಪಡೆದು ಹಿರಿಯರ ಕಾಲಿಗೆ ನಮಸ್ಕಾರ ಮಾಡಿ ಆರ್ಶೀವಾದ ಪಡೆಯುತ್ತಾರೆ. ಆದಿನ ಸ್ತ್ರೀಯರು (ರಾಣಿಯರು) ಉಪವಾಸ ಇದ್ದು ಸಂಜೆಯ ಚಂದ್ರನ ದರ್ಶನವಾದ ನಂತರ ಗಂಡನ ಕಾಲಿಗೆ ನಮಸ್ಕರಿಸಿ ಹಾಗೂ

ಹಿರಿಯರಿಗೆ ನಮಸ್ಕರಿಸುವರು ನಂತರ ಪ್ರಸಾದ(ಊಟ) ಮಾಡುವ ಪದ್ಧತಿ ಸರ್ವಸಾಮಾನ್ಯವಾಗಿ ಹಿಂದೂ ಧರ್ಮದ ಸ್ತ್ರೀಯರು ಆಚರಿಸುವ ಪದ್ಧತಿಯಾಗಿದೆ. ಯುಗಾದಿಯ ಮರುದಿನ ಹಾಗೂ ಮೂರನೆಯ ದಿನ ಅರಸನು ಬೇಟೆಗೆಂದು ಕಾಡಿಗೆ ತೆರಳುವ ವೇಳೆ ರಾಣಿಯರು ಆರತಿ ಮಾಡಿ ವೀರ ತಿಲಕ ಹಚ್ಚುವರು ಮತ್ತು ಬೇಟೆ ಆಡಿ ಮರಳಿ ಬಂದ ನಂತರ ಅರಮನೆಯ ದ್ವಾರಬಾಗಿಲಿನಲ್ಲಿಯೇ ಒಳಗಡೆ ಬರುವ ಮುಂಚಿತ ರಾಣಿಯರು ಆರತಿಮಾಡಿ ತಿಲಕವನ್ನು ಹಚ್ಚಿ ಒಳಗೆ ಬರಮಾಡುವರು. ಅದರೂ ಪ್ರಸ್ತುತ ದಿನಗಳಲ್ಲಿ ಈ ಬೇಟೆಯನ್ನು ಆಡುವುದು ನಿಶಿದ್ಧವಾಗಿದೆ.

ಕನಕಗಿರಿ ಸಂಸ್ಥಾನದವರು ಹೊಸವರುಷದ ಆರಂಭದ ದಿನವೆಂದು ಚಂದ್ರಮಾನದ ಯುಗಾದಿ ಆಚರಿಸಲಾಗುತ್ತಿತ್ತು. "ಈ ಹಬ್ಬವನ್ನು ಕರ್ನಾಟಕದ ನಾಯಕ ಸಂಸ್ಥಾನಗಳ ಮನೆತನದವರು ವಿಶಿಷ್ಟ ರೀತಿಯಿಂದ ಆಚರಿಸುತ್ತಿದ್ದರು. ಹಬ್ಬದ ಮುನ್ನ ಅರಮನೆಗಳಿಗೆ ಸುಣ್ಣಬಣ್ಣ ಬಳಿಸುವುದು. ಬಾಗಿಲಿಗೆ ತಳಿರು ತೋರಣ, ಬಾಳೇಕಂಬಗಳಿಂದ ಅಲಂಕರಿಸುತ್ತಿದ್ದರು." ಇಂದಿಗೂ ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ ಅರಸು ಮನೆತನದವರು ತಮ್ಮ ಅರಮನೆಯನ್ನು ಇದೇ ರೀತಿ ಶೃಂಗಾರಿಸುತ್ತಾರೆ. ಅರಸ ಮತ್ತು ರಾಣಿಯರು ಬೆಳಿಗ್ಗೆ ಅಭ್ಯಂಜನ ಸ್ನಾನ ಮಾಡಿ ಹೊಸ ಬಟ್ಟೆಗಳನ್ನು ಧರಿಸುತ್ತಿದ್ದರು.ಅರಮನೆಯಲ್ಲಿ ದೇವತಾಕಾರ್ಯ ಮಾಡುವರು ಕನಕಗಿರಿ ಸಂಸ್ಥಾನದವರು.ನಂತರ ತಮ್ಮ ಮನೆ ದೇವರು ಮತ್ತು ಆರಾಧ್ಯ ದೇವರುಗಳಿಗೆ ಕನಕಚಲಪತಿಗೆ ಅರಸ ಮತ್ತು ರಾಣಿ ಕುಟುಂಬ ಪರಿವಾರದ ಸಮೇತ ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸುವ ಪದ್ಧತಿ ಇದೆ.ಹೀಗೆ ಕನಕಗಿರಿ ರಾಣಿಯರು ಹೆಚ್ಚು ಹಬ್ಬಗಳಲ್ಲಿ ಭಾಗವಹಿಸುತ್ತಿದ್ದರು.ಅಂದು ಸಂಜೆ ಬಾನಲ್ಲಿ ಮೂಡುವ ಚಂದ್ರನನ್ನು ನೋಡಿ ಈ ಸಂಸ್ಥಾನದ ಹಿರಿಯರಿಂದ ಆಶೀರ್ವಾದ ಪಡೆಯುವರು. ಗುಡೇಕೋಟೆ ಅರಸರು ವಿಶೇಷವಾಗಿ ಗುಡೇಕೋಟೆಯ ತಣ್ಣೀರಿನ ಉಸಿಕಿನ ಹೊಂಡದ ಹತ್ತಿರ ಓಕುಳಿ ಹೊಂಡವನ್ನು ನಿರ್ಮಿಸಿ ಅಲ್ಲಿ ಯುಗಾದಿ ಹಬ್ಬದ ಸಂದರ್ಭದಲ್ಲಿ ಮನರಂಜನಾ ಕ್ರೀಡೆಗಳನ್ನು ಏರ್ಪಡಿಸುತ್ತಿದ್ದರು. ಆದರೆ ಈ ಸಂಸ್ಥಾನದ ರಾಣಿಯರು ಮನೆಯ ಒಳಗೆ ಆಡಬೇಕು, ಹೊರತು ಸಾರ್ವಜನಿಕರಲ್ಲಿ ಬೆರೆಯುತ್ತಿರಲಿಲ್ಲ. ಪುರುಷರು ಮಾತ್ರ ಓಕುಳಿ ಆಡುವರು ಸ್ತ್ರೀಯರಿಗೆ ಆದ್ಯತೆ ಇಲ್ಲ.

### ೨. ಶ್ರೀರಾಮನವಮಿ

ಚೈತ್ರ ಶುದ್ಧ ನವಮಿ ಶ್ರೀರಾಮನ ಜನ್ಮದಿನವಾಗಿರುವದರಿಂದ ಶ್ರೀರಾಮನವಮಿಯನ್ನು ಸುರಪುರ ಅರಸರು ಅದರಲ್ಲೂ ವಿಶೇಷವಾಗಿ ರಾಣಿಯರು ಆಚರಿಸುವಹಬ್ಬವಾಗಿತ್ತು. ಈ ಸಂಸ್ಥಾನದ ರಾಣಿಯರು ಇದೊಂದೇ ಹಬ್ಬ ಅಲ್ಲದೆ ಇನ್ನು ಹಬ್ಬಗಳನ್ನು ಆಚರಿಸುವ ಸಲುವಾಗಿ

ಅರಸರು ಅವರಿಗೆ ಖರ್ಚಿನ ಸಲುವಾಗಿ ಸುರಪುರದ ಅರಸರು ಈ ರೀತಿ ಹಬ್ಬದ ಠರಾವನ್ನು (ಹಣವನ್ನು) ನಿಗದಿಗೊಳಿಸಿದುದು ತಿಳಿದುಬರುತ್ತದೆ.

"ನಾಗರ ಪಂಚಮಿ- ರೂ೫೦೦, ಗೋಕುಲಾಷ್ಟಮಿ-ರೂ೨೫೦, ಬೃಂದಾವನ ಪ್ರಜೆ-ರೂ೨೫೦, ಸಂಕ್ರಾಂತಿ ಹಬ್ಬ-ರೂ೨೦೦, ರಾಮನವಮಿ-ರೂ೧೫೦, ಪಾರಣಿಗಳ ಸಲುವಾಗಿ-ರೂ೧೦೮, ದೀಪಾವಳಿ-ರೂ೧೨೦೦, ಯುಗಾದಿ-ರೂ೧೫೦೦, ಗ್ರಹಣ ಕಾಲದಲ್ಲಿ ದಕ್ಷಿಣೆ ಕೊಡಲು-ರೂ೧೦೦, ಶುಕ್ರವಾರ ಲಕ್ಷ್ಮಿ ಪೂಜೆಗಾಗಿ-ರೂ೪೦, ಶ್ರಾವಣದ ವರಮಹಾಲಕ್ಷ್ಮಿ ಪೂಜೆಗಾಗಿ-ರೂ೩೦೦ ಒಟ್ಟು ೫೩೦೨ರೂ.ಗಳು. ಈ ಹಬ್ಬಗಳೆಲ್ಲ ನಾಯಕ ಅರಸು ಮನೆತನದವರ ಕುಟುಂಬದಲ್ಲಿ ವಿಶಿಷ್ಟ ರೀತಿಯಿಂದ ಆಚರಿಸಲಾಗುತ್ತಿತ್ತು.

**೩. ಮಹಾನವಮಿ**

ಸುರಪುರದ ಸಂಸ್ಥಾನದವರು ಕರ್ನಾಟಕದ ನಾಯಕರ ಅರಸುಮನೆತನಗಳ ಆಚರಿಸುವ ಹಬ್ಬಗಳಲ್ಲಿ ಮಹಾನವಮಿ ಹಬ್ಬ ಪ್ರಮುಖವಾದ ಹಬ್ಬವಾಗಿದೆ. ಒಂಬತ್ತು ದಿನಗಳು ಆಚರಿಸುವ ಹಬ್ಬವಾಗಿದೆ. ಪ್ರಮುಖವಾಗಿ ವೀರರ ನೆನಪಿಗಾಗಿ ಪೂರ್ವಿಕರ ಆಯುಧಗಳನ್ನು ಪೂಜಿಸುವುದು ಮತ್ತು ಅವರನ್ನು ಸ್ಮರಿಸುವ ಹಬ್ಬವಾಗಿದೆ. ರಾಣಿಯರು ಆಯುಧಗಳನ್ನು ಹೊರತೆಗೆದು ಅವುಗಳು ಸ್ವಚ್ಛಗೊಳಿಸಿ ಹೂವು ಬನ್ನಿಪತ್ರಿಯಿಂದ ಪೂಜಿಸಿ ಕುಂಬಳಕಾಯಿಯನ್ನು ಬಲಿ ಕೊಡುವರು. ಸಂಜೆ ಸಮಯದಲ್ಲಿ ಬನ್ನಿ ಕಟ್ಟಿಗೆ ತೆರಳುವರು ಬನ್ನಿ ಮುಡಿಯುತ್ತಾರೆ. ಹಿಂದೆ ಸುರಪುರ ಸಂಸ್ಥಾನದಲ್ಲಿ "ಅರಸರು ಖಂಡೇಪೂಜೆಯ ದಿನದಂದು ಪ್ರಾಣಿ ಬಲಿಕೊಡುತ್ತಿದ್ದರು. ಆಗ ೧೪ ಕೇರಿಯ ಜನ ಬಂದು ರಾಜರ ಸಮ್ಮುಖದಲ್ಲಿ ಬಲಿ ನೀಡಿ ಪ್ರಾಣಿ ಬಲಿ ತಮ್ಮ ಮನೆಗೆ ಒಯ್ಯುತ್ತಿದ್ದರು". ನಂತರದಲ್ಲಿ ಬಲಿಯ ಆಚರಣೆಯನ್ನು ನಿಲ್ಲಿಸಲಾಗಿದೆ. ಸುರಪುರದ ಸಂಸ್ಥಾನದ ಅರಮನೆಯಲ್ಲಿ ಅರಸ ಸಮಸ್ತ ಪರಿವಾರದೊಂದಿಗೆ ವೇಣುಗೋಪಾಲಸ್ವಾಮಿಯ ಉತ್ಸವಕ್ಕೆ ಪೂಜೆಯನ್ನು ಸಲ್ಲಿಸಿದ ನಂತರ, ಧಾರ್ಮಿಕ ವಿಧಿ ವಿಧಾನಗಳು ಮುಗಿದ ಮೇಲೆ ವೇಣುಗೋಪಾಲಸ್ವಾಮಿಗೆ ಬನ್ನಿಯನ್ನು ಕೊಡಲಾಗುತ್ತಿತ್ತು. ಪ್ರಮುಖವಾಗಿ ಮೊದಲು ಅರಸನ ಮನೆತನದ ಹಿರಿಯರಿಗೆ, ದೊರೆಗಳಿಗೆ ಮತ್ತು ರಾಣಿಯರಿಗೆ ಬನ್ನಿಯನ್ನು ಕೊಡುತ್ತಿದ್ದರು. ನಂತರ ರಾಣಿಯು ತಮ್ಮ ಬಂದು ಬಳಗದವರೊಂದಿಗೆ ಬನ್ನಿಯನ್ನು ಕೊಡುತ್ತಿದ್ದರು."ಗುಡಗುಂಟಿಯ ಅರಸರು ಶ್ರೀವೆಂಕಟೇಶ್ವರ ದೇವಸ್ಥಾನದಲ್ಲಿ ನವರಾತ್ರಿಯಂದು ಉತ್ಸವಗಳನ್ನು ನಡೆಸುತ್ತಿದ್ದರು". ನವರಾತ್ರಿಯ ಎಂಟನೆಯ ದಿವಸ ಆಯುಧೋಪಕರಣಗಳಿಗೆ ಅರಸ ಮತ್ತು ರಾಣಿ ಪೂಜೆ ಜರುಗಿಸುವರು.ನಂತರ ಸಾಯಂಕಾಲ ಸಾರ್ವಜನಿಕ ಬನ್ನಿ ಮಂಟಪಕ್ಕೆ ತೆರಳಿ ಬನ್ನಿ ಪೂಜೆಯ ನಂತರ ಬನ್ನಿ ಮುಡಿಯುವುದು ಪ್ರಾರಂಭಿಸುತ್ತಿದ್ದರು. ಈ ಸಂಸ್ಥಾನದಲ್ಲಿ ಮೊದಲು ಬನ್ನಿಯ ಕೊಟ್ಟ ನಂತರ ಎಲ್ಲ ಸಾಮೂಹಿಕವಾಗಿ ಹಾಗೂ ಬಂಧು ಬಾಂಧವರಿಗೆ ಬನ್ನಿ ಮುಡಿಯುತ್ತಿದ್ದರು.

ಈ ಸಂಸ್ಥಾನದ ರಾಣಿಯರು ಸಂಸ್ಥಾನದಲ್ಲಿ (ಅರಮನೆ) ಜರುಗುವ ಹಬ್ಬಗಳಲ್ಲಿ ಹೆಚ್ಚು ಭಾಗವಹಿಸುವರು.ದೀಪಾವಳಿ ಹಬ್ಬವನ್ನು ವೈಭವ ಪೂರ್ವಕವಾಗಿ ಮಾಡುತ್ತಿದ್ದರು."ನಾಯಕ ಸಂಸ್ಥಾನದವರು ಇದನ್ನು ಮೂರು ದಿನಗಳವರೆಗೆ ಆಚರಿಸುತ್ತಿದ್ದರು" ಮೂರು ದಿನಸಿತ್ಮ ಬಹು ವಿಶೇಷವಾಗಿ ಪೂಜೆಯನ್ನು ಸಲ್ಲಿಸಲಾಗುತ್ತಿತ್ತು. "ಚೈತ್ರಮಾಸದ ಶುದ್ಧ ಪೂರ್ಣಿಮೆಯಂದು ಫಲಭೂಮಿ ಪೂರ್ಣಿಮೆಯೆಂದು ರಾಣಿಯರು ತುಳಸಿ ಪೂಜೆಯನ್ನು ಮಾಡುತ್ತಿದ್ದರು.ಇದು ಸ್ತ್ರೀಯರು ಈ ಪೂಜೆಯನ್ನು ತಮ್ಮ ಪತಿಗೆ ಆರೋಗ್ಯ, ಆಯಸ್ಸು, ವೃದ್ಧಿಯಾಗಲಿ ಕುಟುಂಬಕ್ಕೆ ಹಾರೈಸುವ ಮೂಲಕ ಈ ವ್ರತ ಆಚರಿಸುವರು.

"ಗುಡಗುಂಟಿ ಅರಸರ ಆರಾಧ್ಯದೈವ ಗುಡಗುಂಟಿಯ ಶ್ರೀ ಅಮರೇಶ್ವರ, ಗುಂತಗೋಳದ ಅರಸರಿಗೆ ಮನೆದೇವರು. ಈಗ ಈ ಜಾತ್ರೆಯಲ್ಲಿ ಗುಂತಗೋಳದ ಅರಸರು ಭಾಗವಹಿಸುವುದಿಲ್ಲ. ಕಾರಣ ಗುಡಗುಂಟಿ ರಾಜಾಸೋಮಪ್ಪನಾಯಕ ಕಾಲದಲ್ಲಿ ಆತನ ಮಡದಿ ಗುಂತಗೋಳದವಳಾಗಿದ್ದಳು. ಆಕೆ ತವರು ಮನೆಗೆ ಹೋಗುವಾಗ ಆಕೆಯ ಗಂಡ ಅರಸ ರಾಜಾಸೋಮಪ್ಪನಾಯಕ ಗುಡಗುಂಟಿಯ ಅಮರೇಶ್ವರನ ಜಾತ್ರೆಯಲ್ಲಿ ನಿಮ್ಮ ಮನೆತನದವರು ನಡೆಸಿಕೊಡುವ ಕಾರ್ಯಕ್ರಮಗಳನ್ನೆಲ್ಲ ತಮಗೆ ಬಿಟ್ಟುಕೊಡಲು ಕೇಳಿಕೊಂಡು ಬಾ ಎಂದು ತಾಕೀತು ಮಾಡಿ ಕಳುಹಿಸಿದ್ದರಂತೆ. ಆ ಪ್ರಕಾರ ರಾಣಿ ತಮ್ಮ ತಂದೆಯಿಂದ ಗುಡಗುಂಟಿ ಅಮರೇಶ್ವರನ ಜಾತ್ರೆಯಲ್ಲಿ ಗುಂತಗೋಳದ ಅರಸರಿಗೆ ಸಲ್ಲುವ ಎಲ್ಲ ಮರ್ಯಾದೆಗಳನ್ನು ಪಡೆದುಕೊಂಡು ಬಂದಂದಿನಿಂದ ಗುಡಗುಂಟಿ ಅರಸರೇ ಈ ಜಾತ್ರೆಯಲ್ಲಿ ಭಾಗವಹಿಸುತ್ತಿದ್ದರು" ಈ ರೀತಿಯಾಗಿ ಐತಿಹಾಸಿಕ ಹಿನ್ನೆಲೆ ಇದೆ. ಆದರೆ ವಂಶಜರ ಪ್ರಕಾರ ಗುಂತಗೋಳದ ಅರಸರಿಗೆ ಆರ್ಥಿಕ ನಷ್ಟ ಇರುವ ಸಂದರ್ಭದಲ್ಲಿ ಗುಡಗುಂಟಿ ಸಂಸ್ಥಾನಕ್ಕೆ ಶ್ರೀ ಆರಾಧ್ಯ ದೈವ ಶ್ರೀ ಅಮರೇಶ್ವರ ದೇವಾಲಯವನ್ನು ನಡೆಸಿಕೊಂಡು ಹೋಗುವ ಜವಾಬ್ದಾರಿಯನ್ನು ಅಂದಿನ ದಿನಗಳಲ್ಲಿ ನೀಡಿರುವರು, ಇಂದಿಗೂ ಅದರ ಪೋಷಣೆ ಗುಡಗುಂಟಿ ಸಂಸ್ಥಾನವೇ ನಡೆಸುತ್ತದೆ. ಪ್ರತೀ ವರ್ಷ ಫಾಲ್ಗುಣ ಮಾಸದ ಶುಕ್ಲಪಕ್ಷ ಪೌರ್ಣಮಿಯಂದು ಜಾತ್ರೆ ಜರುಗುತ್ತದೆ. ಈ ಜಾತ್ರೆಯ ಮುಂಚಿತವಾಗಿ ಒಂದು ದಿನ ಅಮರೇಶ್ವರನ ಕಳಸ ಗುಡಗುಂಟಿ ಅರಸರ ಮನೆಯಿಂದ ರಾಜಗುರುಗಳಾದ ಶ್ರೀ ಗಜದಂಡ ಮಹಾಸ್ವಾಮಿಗಳು ದೇವರ ಭೂಪರವರು ಬಂದು ಅರಸನ ಸಮ್ಮುಖದಲ್ಲಿ ಕಳಸ ಪಡೆಯಲು ಅನುಮತಿಯ ಮೇರೆಗೆ ಪಡೆದು ಜಾತ್ರೆಯ ನಂತರ ಮರಳಿಸುವುದಾಗಿ ತಿಳಿಸುವರು. ಈ ಪದ್ಧತಿಯು ಇಂದಿಗೂ ಮುಂದುವರಿದಿದೆ. ಮನೆಯ ದೇವರಾದ ಸೋಮನಾಥ ಜಾತ್ರೆಯೂ ಸಹ ಪ್ರತೀ ವರ್ಷ ಸಂಕ್ರಮಣದಲ್ಲಿ ಜರುಗುತ್ತದೆ ಈ ಜಾತ್ರೆಯಲ್ಲಿ ತೇರು ಎಳೆಯುವ ಮುನ್ನ ಗುಡಗುಂಟಿ ದರ್ಬಾರ ನಿಂದ ಹೀಡ್‌ಗಾಯಿ ಬಂದಿದೆ ಎಂದು ಕೂಗಿ ಹೇಳಿ ಕಾಯಿ ಹೊಡೆದು ತೇರು ಎಳೆಯುವ ಪದ್ಧತಿ ಇದೆ.

೪. ದೀಪಾವಳಿ

ದೀಪಾವಳಿಯು ದೀಪಗಳ ವೈಭವದಿಂದ ಆಚರಿಸುವ ಹಬ್ಬ ದೀಪಾವಳಿಯನ್ನು ಮೂರು ದಿನಗಳ ಕಾಲ ಹಬ್ಬವನ್ನು ಆಚರಿಸುತ್ತಿದ್ದರು ರಾಣಿಯರು ತಮ್ಮ ಮನೆಯನ್ನು ಬಣ್ಣದ ರಂಗೋಲಿ ಹಾಗೂ ದೀಪಗಳಿಂದ ಅಲಂಕರಿಸುವರು. ಮೂರು ದಿನಗಳು ವೈಭವಪೂರ್ವಕವಾಗಿ ದೀಪಗಳನ್ನು ಹಚ್ಚುವರು. ದೀಪಾವಳಿಯ ಮೊದಲನೇ ದಿನವೇ ನರಕ ಚತುರ್ದಶಿ. ಮಾರನೆಯ ದಿನ ಅಮಾವಾಸ್ಯೆ ಅಂದು ತಮ್ಮ ದಿನಪೂಜೆಯೊಂದಿಗೆ ಕೆಲವರು ಪಿತೃಗಳಿಗೆ ತಿಲ ತರ್ಪಣ ಬೀಡುವುದು ವಾಡಿಕೆ ಇದೆ. ಕೆಲವರು ಈ ಆಚರಣೆ ಮಾಡುವುದಿಲ್ಲ ಲಕ್ಷ್ಮಿ ಪೂಜೆಯ ದಿನ ಮಾಡುವುದಿಲ್ಲ ನವರಾತ್ರಿಯಲ್ಲಿ ಮಾಡುವರು. "ಆದರೆ ಸುರಪುರದ ಅರಸ ಪಾಮನಾಯಕ ತನ್ನ ಮಾತಾಪಿತೃಗಳಿಗೆ ಪುಣ್ಯ ಲಭಿಸಲೆಂದು ಬ್ರಾಹ್ಮಣರಿಗೆ ದೀಪಾವಳಿಯ ದಿನದಂದು ಭೂಮಿಯನ್ನು ಇನಾಮಾಗಿ ನೀಡಿದ್ದನು. ಈ ಪದ್ದತಿ ಕೊನೆಯ ಅರಸ ರಾಜಾ ಕೃಷ್ಣನಾಯಕರವರೆಗೂ ಮುಂದುವರೆದಿತ್ತು. ರಾಣಿಯರು ಲಕ್ಷ್ಮಿದೇವಿಯ ಕಳಶ ಪ್ರತಿಷ್ಠಾಪಿಸಿ ಪೂಜೆಯನ್ನು ಪ್ರತೀಕವಾಗಿ ವೈಭವದಿಂದ ಆಚರಿಸಲ್ಪಡುತ್ತಿದ್ದರು. ಎಲ್ಲಾ ನಾಯಕ ಸಂಸ್ಥಾನಗಳಲ್ಲೂ ಈ ಹಬ್ಬಗಳು ಪ್ರಮುಖವಾದವುಗಳು.

೫. ಆಚರಣೆಗಳು ಮತ್ತು ಸಂಪ್ರದಾಯಗಳು

ಮನುಷ್ಯನ ಜೀವನ ವರ್ತನೆಯು ಹುಟ್ಟಿನಿಂದ ತೊಡಗಿ ಸಾವಿನಲ್ಲಿ ಕೊನೆಗೊಳ್ಳುತ್ತದೆ. ಇವುಗಳ ನಡುವೆ ಅನೇಕ ಸ್ಥಿತ್ಯಂತರದ ಹಂತಗಳಿರುತ್ತವೆ. ಇಂತಹ ಸಂದರ್ಭದಲ್ಲಿ ನಡೆಸುವ ಆಚರಣೆಗಳನ್ನು ಸ್ಥಿತ್ಯಂತರದ ವಿಧಿಗಳು ಅಥವಾ ಪರಿವರ್ತನೆಯ ವಿಧಿಗಳೆಂದು ಕರೆಯಬಹುದು. ಇಂತಹ ವಿಧಿಗಳು ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಜಾತಿಯಿಂದ ಜಾತಿಗೆ, ಧರ್ಮದಿಂದ ಧರ್ಮಕ್ಕೆ ವ್ಯತ್ಯಾಸವಾಗುತ್ತ ಹೋಗುತ್ತವೆ. ಭಾರತೀಯ ಸಂದರ್ಭವನ್ನು ಗಮನಿಸಿ ಹೇಳುವುದಾದರೆ ಹೆಂಗಸರಲ್ಲಿ ಈ ಸ್ಥಿತ್ಯಂತರ ಹೆಚ್ಚು. ಹದಿಹರೆಯ, ಮೈನೆರೆಯುವಿಕೆ, ಮದುವೆ, ಸೀಮಂತ, ನಾಮಕರಣ, ಹುಟ್ಟಿನ ಆಚರಣೆ ಸಾವಿನ ಆಚರಣೆ ಹೀಗೆ ವೈವಿಧ್ಯಮಯ ಸಮಾಜವು ಒಂದು ವ್ಯಕ್ತಿಯನ್ನು ಅಂಗೀಕರಿಸುವಂತೆ ಮಾಡುವಲ್ಲಿ ಈ ಜೀವನಾವರ್ತನದ ಆಚರಣೆಗಳು ನೆರವಾಗುತ್ತವೆ.

ಈ ನಾಯಕ ಸಂಸ್ಥಾನಗಳಲ್ಲಿ ಸಾಮಾನ್ಯವಾಗಿ ಹೆಣ್ಣು ಮಕ್ಕಳಿಗೆ ಮಾಡುವ ಆಚರಣೆಗಳು ಹಾಗೆ ಗಮನಿಸಿದರೂ ಸಹ ಎಲ್ಲರಲ್ಲೂ ಬರುವ ಸಾಮಾನ್ಯ ಆಚರಣೆಗಳನ್ನು ಇಲ್ಲಿ ನೋಡಬಹುದಾಗಿದೆ.

೬. ಮದುವೆ

ಗಂಡುಹೆಣ್ಣಿನ ಸಂಬಂಧವನ್ನು ಕಾನೂನುಬದ್ಧಗೊಳಿಸಿ ಸಂತಾನವನ್ನು ಬೆಳೆಯುವುದಕ್ಕೆ ಅನುವು ಮಾಡಿಕೊಡುವ ವ್ಯವಸ್ಥೆ ಇದು. ಕುಟುಂಬ ರಚನೆಯ ಚಲನಾಶಕ್ತಿ ಮದುವೆ. ಈ ನಾಯಕ ಸಂಸ್ಥಾನಗಳು ಮದುಮಗಳನ್ನು ಮಾಡುವುದು, ನಿಶ್ಚಿತಾರ್ಥ, ಹೈರಾಣಿ ತರುವುದು, ಗೌರಿಪೂಜೆ, ಅರಿಸಿನೆಣ್ಣೆ ಶಾಸ್ತ್ರ, ಕಂಕಣ ಕಟ್ಟುವುದು, ಸಪ್ತಪದಿ, ಹಾಲ್ತುಪ್ಪ ಬಿಡುವುದು ಹಾಗೆಯೇ ವರನಿಗೆ ಹಲವು ಆಚರಣೆಗಳು ಜರುಗುತ್ತವೆ.

೭. ಸೀಮಂತ

ಸೀಮಂತ ಆಚರಣೆಯು ಇದು ೫ನೇ ಅಥವಾ ೭ನೇ ತಿಂಗಳಲ್ಲಿ ಮಾಡುವ ಸಂಪ್ರದಾಯವು ಇದೆ. ಈಕೆಗೆ ತವರಿನಿಂದ ಗರ್ಭಿಣಿಯಾದ ಮಗಳಿಗಾಗಿ ಬಯಕೆ ಬುತ್ತಿ ತರುತ್ತಾರೆ. [ಶೋಡೋಪಚರ] ಬಯಕೆ ಬುತ್ತಿಯನ್ನು ಕೇವಲ ಮಗಳಿಗಾಗಿ ಮಾತ್ರವಲ್ಲದೆ. ಸೀಮಂತ ಕಾರ್ಯಕ್ಕೆ ಬಂದು ಬಳಗಕ್ಕೆ ಸಾಕಾಗುವಷ್ಟು ತಂದಿರುತ್ತಾರೆ. ಇದು ಗುಡೇಕೋಟೆ ನಾಯಕ ಸಂಸ್ಥಾನದಲ್ಲಿ ಇಂದಿಗೂ ಇದೆ. ಗರ್ಭಿಣಿಯಾದ ರಾಣಿಗೆ ತವರು ಮನೆಯಿಂದ, ಗಂಡನ ಮನೆಯವರಿಂದ, ಬಂಧು ಬಳಗದವರಿಂದ ಸೀರೆ, ಕುಪ್ಪಸ ಕೊಡುತ್ತಾರೆ. ಗರ್ಭಿಣಿ ಸ್ತ್ರೀ ಮತ್ತು ಅವಳ ಗಂಡನನ್ನು ಜೊತೆಗೆ ಕೂಡಿಸಿ ಹೂವಿನ ಹಾರ ಹಾಕಿ ಆರತಿ ಮಾಡಿ ಹಾಡು ಹಾಡುತ್ತಾರೆ. ಗರ್ಭಿಣಿಗೆ ಮಾನಸಿಕವಾಗಿ, ದೈಹಿಕವಾಗಿ ತುಂಬಾ ಸಂತೋಷವಾಗಿರಬೇಕಾಗಿರುತ್ತದೆ. ಸದಾ ಉಲ್ಲಾಸಿತಳಾಗಿರುವುದರಿಂದ ಹುಟ್ಟುವ ಮಗು ಎಲ್ಲಾ ರೀತಿಯಿಂದಲೂ ಚೆನ್ನಾಗಿರುತ್ತದೆ ಎಂಬ ದೃಷ್ಟಿಯಿಂದ ಗರ್ಭಿಣಿಯರಿಗೆ ಈ ರೀತಿಯಾದ ಆಚರಣೆಗಳನ್ನು ಮಾಡಿ ಸಂತೋಷಪಡಿಸುವ ಉದ್ದೇಶ ಇದಾಗಿದೆ.

ರಾಣಿಯರಿಗೆ ಮಡಲಕ್ಕಿ ತಂಬುವುದು (ಸೀಮಂತ) ಕಾರ್ಯ ಮಾಡುತ್ತಿದ್ದರು. ಸಂಬಂಧಿಕರನ್ನು ಕರೆಯಿಸಿ ಆಕೆಗೆ ಎಲ್ಲಾ ರೀತಿಯ ವಿಧಿ ವಿಧಾನಗಳಿಂದ ಆಚರಿಸಲಾಗುತ್ತಿತ್ತು. ಈ ಆಚರಣೆ ಉದ್ದೇಶ ಗರ್ಭವತಿಯ ರಕ್ಷಣೆ, ಎಲ್ಲಾ ಹಿರಿಯರು, ಆರೈಕೆ, ಹಾಗೂ ಅವರ ಹಿತವಚನಗಳಿಂದ ಮಾನಸಿಕ ಸದೃಢತೆ, ಆರೋಗ್ಯ ಚೆನ್ನಾಗಿರಲಿ ಎಂದು ಕೆಲವು ಸಲಹೆಗಳನ್ನು ನೀಡುವುದಾಗಿರುತ್ತದೆ. "ಗರ್ಭಿಣಿ ರಾಣಿಯ ಜೊತೆಗೆ ಅರಸನನ್ನು ಕೂಡಿಸುತ್ತಿದ್ದರು", ಈ ಆಚರಣೆಯು ಗುಡೇಕೋಟೆ ಸಂಸ್ಥಾನದಲ್ಲಿ ಆಚರಣೆಯಲ್ಲಿದೆ. ಹಾಗೂ ಮಗುವಿನ ಜನಿಸಿದ ನಂತರ ಮೂರನೆಯ ತಿಂಗಳಿನಲ್ಲಿ ಅಥವಾ ಐದನೆ ತಿಂಗಳಿನಲ್ಲಿ ಉತ್ತಮ ದಿನದೊಂದು ಹೆಸರಿಡುವ ಕಾರ್ಯ ಮಾಡುವರು, ರಾಣಿಯರು ಈ ಕಾರ್ಯಗಳಲ್ಲಿ ಭಾಗವಹಿಸುವರುಹಾಗೂ ತಮ್ಮ ಹತ್ತಿರ ಸಂಬಂಧಿಕರ ವಿವಾಹ, ಸೀಮಂತ, ಕಾರ್ಯದಲ್ಲಿ ಮಾತ್ರ ರಾಣಿಯರು ಭಾಗವಹಿಸುವ ಪದ್ಧತಿ ಇದೆ.

**೮. ಹುಟ್ಟು ಮತ್ತು ನಾಮಕರಣ**

ಈ ನಾಯಕ ಸಂಸ್ಥಾನದಲ್ಲಿ ಸ್ತ್ರೀಯರಿಗೆ ಹೆರಿಗೆಯಾದ ದಿನದಿಂದ ನಾಮಕರಣ ದಿನದವರೆಗೆ ಅನೇಕ ಆಚರಣೆಗಳೂ ಈಗಲೂ ಆಚರಿಸುವರು. ಹೆರಿಗೆಯಾದ ದಿನದಿಂದ ಮೂರು ದಿನ ಅಥವಾ ಒಂಭತ್ತು ದಿನಗಳವರೆಗೆ ಆಚರಣೆ ಮಾಡುತ್ತಾರೆ. ಈ ದಿನಗಳಲ್ಲಿ ದೇವರಿಗೆ ರಕ್ತ ಸಂಬಂಧಿಕರು ಮಾತ್ರ ಪೂಜೆ ಮಾಡುವಂತಿಲ್ಲ. ೯ನೇ ಅಥವಾ ೧೧ನೇ ದಿನ ಬಾಣಂತಿಯನ್ನು ಗಂಗಮ್ಮಗೆ ಪೂಜೆ ಸಲ್ಲಿಸಬೇಕು. ರಾಣಿಯರ ಪ್ರತ್ಯೇಕ ಅವರ ಮನೆ (ಸಂಸ್ಥಾನದಲ್ಲಿಯೇ) ಬಾವಿ ಸಾಮಾನ್ಯವಾಗಿ ಸಾಮಾನ್ಯರು ಕೆರೆಯ ಬಾವಿಗೆ ಹೋಗುವರು. ಅದರ ರಾಣಿಯರು ಘೋಷ ಪದ್ದತಿ ಇರುವುದರಿಂದ ತಮ್ಮ ಹತ್ತಿರ ಬಾವಿಯಲ್ಲಿ ಗಂಗಮ್ಮಗೆ ಪೂಜೆ ಸಲ್ಲಿಸುವ ಪದ್ದತಿ ಇದೆ.

**೯. ನಾಮಕರಣ**

ಮಗುವಿಗೆ ಹೆಸರು ಕರೆಯುವ ಮೊದಲು ಆ ಮಗುವಿಗೆ ಮೊದಲು ಮನೆಯ ದೇವರ ಹೆಸರು ನಂತರ ಗ್ರಾಮದೇವತೆಯ ಹೆಸರು, ತಮ್ಮ ಹಿರಿಯರ ಹೆಸರು ಕರೆದು ನಂತರ ವ್ಯಾವಹಾರಿಕವಾದ ನಾಮಕರಣ (ಹೆಸರು ಕರಿಯುವ) ಮಾಡುವರು.

ರಾಣಿಯರಿಗಾಗಿಯೇ ಈ ರೀತಿಯ ಆಚರಣೆಗಳನ್ನು ಎಲ್ಲಾ ನಾಯಕ ಸಂಸ್ಥಾನದವರು ಅಂದಿನಿಂದ ಇಂದಿನ ತನಕ ಅದ್ದೂರಿಯಾಗಿ ನೆರವೇರಿಸಿಕೊಂಡು ಬರುತ್ತಿದ್ದಾರೆ.

## ಟಿಪ್ಪಣಿಗಳು

೧. ನಾರಾಯಣ ಗಿರಿಯಪ್ಪ, **ಆನೆಗೊಂದಿ ಜಾನಪದ,** ಪು.೧೯.

೨. **ಅದೇ,** ಪು.೧೯.

೩. ಶರಣಬಸಪ್ಪ ಕೋಲ್ಕಾರ, **ದರ್ಶನ ಮಾಲಿಕೆ ಗಂಗಾವತಿ,** ಪು.೨೪.

೪. ನಾರಾಯಣ ಗಿರಿಯಪ್ಪ, **ಪೂರ್ವೋಕ್ತ,** ಪು.೪೭.

೫. ಶರಣಬಸಪ್ಪ ಕೋಲ್ಕಾರ, **ವಿಜಯನಗರ ಹಂಪಿ ಪರಿಸರ,** ಪು.೬೪.

೬. ಪಂಚಾಕ್ಷರಿ ಹಿರೇಮಠ, **ಉರ್ದುಸಾಹಿತ್ಯ- ಒಂದು ಪರಿಚಯ,** ಪು.೦೩.

೭. ಅಮರೇಶ ಯತಗಲ್, **ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು,** ಪು.೭೧.

೮. ಕೃಷ್ಣಪ್ಪ ಎಂ.ವಿ. ಚನ್ನಬಸಪ್ಪ ಎಸ್, ಪಾಟೀಲ್(ಸಂ), **ವಿಜಯನಗರ ಅಧ್ಯಯನ ಸಂಪುಟ ೫,** ಪು.೬೯.

೯. ಶರಣಬಸಪ್ಪ ಕೋಲ್ಕಾರ, **ಪೂರ್ವೋಕ್ತ,** ಪು.೬೭.

೧೦. ಇವರ ಹೇಳಿಕೆ, **ಶ್ರೀಕೃಷ್ಣದೇವರಾಯರು ಹಾಗು ಮಾತೃಶ್ರೀ ಯವರು.**

೧೧. ತಾರಿಹಳ್ಳಿ ಹನುಮಂತಪ್ಪ, **ಕನಕಗಿರಿ ನಾಯಕರು,** ಪು.೫೩.

೧೨. **ಅದೇ,** ಪು.೫೧.

೧೩. **ಅದೇ,** ಪು.೫೧.

೧೪. **ಅದೇ,** ಪು.೫೫.

೧೫. **ಅದೇ,** ಪು.೫೬.

೧೬. ದೇವರಕೊಂಡಾರೆಡ್ಡಿ (ಸಂ), ಭಟಸೂರಿ ಕೆ.ಜಿ. ಶ್ರೀಕಲವೀರ ಮನ್ವಾಚಾರ್, ಪರಮಶಿವಮೂರ್ತಿ ಡಿ.ವಿ (ಸಂ), **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ : ೨ ಕೊಪ್ಪಳ ಜಿಲ್ಲೆ,** , ಪು.೩೬೯.

೧೭. ತಾರಿಹಳ್ಳಿ ಹನುಮಂತಪ್ಪ, **ಪೂರ್ವೋಕ್ತ,** ಪು. ೦೨.

೧೮. ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ಪು.೩೬೭.

೧೯. ತಾರಿಹಳ್ಳಿ ಹನುಮಂತಪ್ಪ, **ಪೂರ್ವೋಕ್ತ,**ಪು.೪೪.

೨೦. **ಅದೇ,**ಪು.೪೫.

೨೧. ದೇವರಕೊಂಡಾರೆಡ್ಡಿ, **ಪೂರ್ವೋಕ್ತ,**ಪು.೩೭೭.

೨೨. ಅಮರೇಶ ಯತಗಲ್, **ಚಾರಿತ್ರಿಕ ಸುರಪುರ ಅಧ್ಯಯನಾತ್ಮಕ ನೋಟಗಳು,** ಪು.೫೭.

೨೩. **ಅದೇ,** ಪು.೫೮.

೨೪. **ಅದೇ,** ಪು.೫೮.

೨೫. **ಅದೇ,** ಪು.೫೮.

೨೬. **ಅದೇ,** ಪು.೫೮.

೨೭. **ಅದೇ,** ಪು.೫೯.

೨೮. **ಅದೇ,** ಪು.೫೯

೨೯. **ಅದೇ,** ಪು. ೬೦.

೩೦. ಅಮರೇಶ ಯತಗಲ್, **ಪೂರ್ವೋಕ್ತ,** ಪು.೦೧.

೩೧. ಅಮರೇಶ ಯತಗಲ್, **ಪೂರ್ವೋಕ್ತ,** ಪು.೨೦೨-೨೦೩.

# ಅಧ್ಯಾಯ : ಐದು

## ಸಮಾರೋಪ

ಮಾತೃಸ್ಥಾನೀಯ ಕುಟುಂಬಗಳಲ್ಲಿ ಕುಟುಂಬದ ಅಧಿಕಾರವನ್ನು ಅಥವಾ ಯಜಮಾನಿಕೆಯನ್ನು ಸ್ತ್ರೀಯು ಹೊಂದಿರುತ್ತಾಳೆ. ಇಲ್ಲಿ ಯಜಮಾನಿಕೆ ಎನ್ನುವುದು ತಾಯಿಂದ ಮಗಳಿಗೆ ಹಸ್ತಾಂತರವಾಗುತ್ತದೆ. ಆದರೆ ಪುರುಷ ಪ್ರಧಾನ ಕುಟುಂಬಗಳಲ್ಲಿ ಕುಟುಂಬದ ಯಜಮಾನಿಕೆ ಅಥವಾ ಒಡೆತನ ಪುರುಷನ ಅಧೀನದಲ್ಲಿರುತ್ತದೆ. ಇಲ್ಲಿ ವಂಶಾವಳಿಯನ್ನು ಪುರುಷರ ಮೂಲಕ ಗುರುತಿಸಲಾಗುತ್ತದೆ. ಪಿತೃಪ್ರಧಾನ ಕುಟುಂಬಗಳಲ್ಲಿ ಹೆಣ್ಣು ವಿವಾಹದ ನಂತರ ತನ್ನ ವಾಸಸ್ಥಾನವನ್ನು ಗಂಡನ ಮನೆಯಲ್ಲಿ ಪಡೆಯುತ್ತಾಳೆ. ಪ್ರಸ್ತುತ ಅಧ್ಯಯನದಲ್ಲಿ ನಾಯಕ ಸಂಸ್ಥಾನದ ರಾಣಿಯ ಕುರಿತಾದ ಮಾಹಿತಿಗಳನ್ನು ಕಲ್ಯಾಣ ಕರ್ನಾಟಕದ ಸಂಸ್ಥಾನಗಳ ಮೂಲಕ ವಿವರಣಾತ್ಮಕವಾಗಿ ವಿಶ್ಲೇಷಿಸಲಾಗಿದೆ. ಇಲ್ಲಿ ಅಧ್ಯಯನಕ್ಕೊಳಪಡಿಸಿದ ಸಂಸ್ಥಾನಗಳೆಲ್ಲವೂ ಪುರುಷ ಪ್ರಧಾನ ನೆಲೆಯಲ್ಲಿ ಸಾಗಿಬಂದಿವೆ ಎಂಬುದು ಸ್ಪಷ್ಟವಾದ ಸಂಗತಿಯಾಗಿದೆ. ಇಂತಹ ಸಂಸ್ಥಾನದ ರಾಣಿಯರ ಕುರಿತ ಆಡಳಿತ ಈ ಅಧ್ಯಯನದಲ್ಲಿ ಗಮನಾರ್ಹವಾದ ವಿಷಯವಾಗಿದೆ. ಕೆಲವು ಸಂಸ್ಥಾನದ ರಾಣಿಯ ಬಗ್ಗೆ ಮಾಹಿತಿ ಸಿಗುವುದು ತುಣುಕು ಮಾತ್ರ. ಕೆಲವು ಶಾಸನಗಳಲ್ಲಿಯೂ ಚಿಕ್ಕ ಪ್ರಾಂತ್ಯವನ್ನಾಳುವ ರಾಣಿಯರಾಗಿಯೋ, ಕೆಲವು ದಾನದತ್ತಿಗಳನ್ನು ಪುರುಷರಿಂದ ಅನುಮತಿ ಪಡೆದು ನೀಡಿದವವಾಗಿಯೋ ಕಾಣಿಸಿಕೊಳ್ಳುತ್ತದೆ. ಆದಿ ಮಾನವನ ಸಂಸ್ಕೃತಿಯಿಂದ ಎಷ್ಟೋ ವರ್ಷಗಳವರೆಗೆ ಸ್ತ್ರೀ ಪ್ರಾಧಾನ್ಯತೆಯೇ ಪ್ರಧಾನ ವೈದಿಕ ಸಂಸ್ಕೃತಿಯು ಬಂದೆರೆಗಿದಾಗ ಮಹಿಳೆಯರ ಸ್ಥಾನಗಳು ಪಲ್ಲಟಗಳಾಗತೊಡಗಿದವು ಮಾತೃ ಪ್ರಧಾನ ಸಂಸ್ಕೃತಿಯಲ್ಲಿ ಎಲ್ಲಿಯೂ ಲಿಂಗತಾರತಮ್ಯತೆ, ಅಸಮಾನತೆಗಳು ಕಂಡುಬರುವುದಿಲ್ಲ.

ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ತೆಗೆದುಕೊಂಡಿರುವ ನಾಯಕ ಸಂಸ್ಥಾನದ ರಾಣಿಯರು, ಆಡಳಿತ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ಬಹುಮುಖ್ಯ ಪಾತ್ರವಹಿಸುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಕಟ್ಟಿಕೊಡುತ್ತದೆ. ಮಹಿಳೆಯರಿಗೆ ಯಾವುದೇ ರೀತಿಯ ಪ್ರಶ್ನೆಗಳನ್ನು ಕೇಳುವ ಅಧಿಕಾರವಿಲ್ಲವೆಂದು ಎಲ್ಲಾ ಧರ್ಮಗಳು ಸಹ ಹೇಳುತ್ತವೆ. ವೇದಕಾಲದಿಂದ ಹಿಡಿದು ಇಂದಿನವರೆಗೂ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಮಹಿಳೆಯರು ಸ್ವಾತಂತ್ರ್ಯವನ್ನು ಮತ್ತು ಸಮಾನತೆಯನ್ನು ದಮನಗೊಳಿಸುವುದ್ದಕೋಸ್ಕರ ಸಂಸ್ಕೃತಿ ಅಥವಾ ಸಂಪ್ರದಾಯಗಳಿಂದ ಹೊರಬಂದು ಧರ್ಮ, ವೇದ, ಪುರಾಣ, ಶಾಸ್ತ್ರಗಳ ಮೌಲ್ಯವನ್ನು ಅರಿತುಕೊಳ್ಳಬೇಕಾಗಿದೆ ಮತ್ತು ಪುರಷ ಪ್ರಧಾನ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಬೇಕಾಗಿದೆ.

ನಾಯಕ ಸಂಸ್ಥಾನದ ರಾಣಿಯರಿಗೆ ಎಲ್ಲಾ ರೀತಿಯ ಆಡಳಿತಾಧಿಕಾರವನ್ನು ಕಲ್ಪಿಸಿಕೊಡಲಾಗಿತ್ತು. ಗಂಡ ಸತ್ತ ನಂತರ ಹಾಗೂ ಮಗನು ಚಿಕ್ಕ ವಯಸ್ಸಿನಲ್ಲಿ ಇರುವ ಸಂದರ್ಭದಲ್ಲಿ ಸಂಸ್ಥಾನದ ರಾಣಿಯರು ಆಡಳಿತ ವ್ಯವಸ್ಥೆಯನ್ನು ಮುಂದುವರೆಸುತ್ತಿದ್ದರು. ಆದರೆ ನಾಯಕ ಸಂಸ್ಥಾನದ ರಾಣಿಯರಿಗೆ ಇಂದಿನ ಕಾಲದಲ್ಲೂ ಕೊಟ್ಟು ಕೊಡದಂತೆ ಸಾಂದರ್ಭಿಕವಾಗಿ ಪರಿಹಾರ ರೂಪದಲ್ಲಿ ಕೊಡಲಾಗಿದೆ. ಇನ್ನು ಶೈಕ್ಷಣಿಕವಾಗಿ ಕೊರತೆ ಕಂಡುಬರುತ್ತದೆ. ಕೆಲವು ಸಂಸ್ಥಾನಗಳಲ್ಲಿ ಸ್ತ್ರೀಯರಿಗೆ ಉನ್ನತ ಶಿಕ್ಷಣಕ್ಕೆ ಅವಕಾಶ ನೀಡಲಾಗಿದೆ. ಕೆಲವೊಂದು ಸಂಸ್ಥಾನಗಳಲ್ಲಿ ಉನ್ನತ ಶಿಕ್ಷಣಕ್ಕೆ ಅವಕಾಶ ನೀಡಿಲ್ಲ. ಅಂದಿನ ಕಾಲದಲ್ಲಿ ಘೋಷ ಪದ್ಧತಿ ಆಚರಣೆಯಲ್ಲಿ ಸಂಸ್ಥಾನದ ಒಳಗೆ ಶಿಕ್ಷಣಕ್ಕೆ ಆದ್ಯತೆಯನ್ನು ನೀಡಲಾಗಿತ್ತು. ಆ ಸಂಸ್ಥಾನದ ರಾಣಿಯರಿಗೆ ಶಿಕ್ಷಣವು ಕುಂಠಿತವಾಗಿದೆಂಬುದು ಗಮನಾರ್ಹ ಸಂಗತಿಯಾಗಿದೆ.

ಕೆಲವು ರಾಣಿಯರಿಗೆ ಪಂಚಾಯತ್ ಮಟ್ಟದಲ್ಲಿ ಸ್ಥಾನಮಾನಗಳನ್ನು ಸಮಕಾಲೀನ ಮತ್ತು ಉನ್ನತ ಮಟ್ಟದ ಶೈಕ್ಷಣಿಕ ವ್ಯವಸ್ಥೆಯನ್ನು ಕಲ್ಪಿಸಿಕೊಡಲಾಗಿತ್ತು. ಸಮಕಾಲೀನ ಸಂದರ್ಭದಲ್ಲಿ ಮಹಿಳೆಯನ್ನು ಎರಡನೇ ದರ್ಜೆಯ ಪ್ರಜೆಯಾಗಿ ಗುರುತಿಸಲಾಗಿದೆ. ಪುರುಷರಿಗಿಂತ ಮಹಿಳೆಯರು ಪ್ರತಿಯೊಂದು ರಂಗದಲ್ಲಿಯೂ ಒಂದು ಹೆಜ್ಜೆ ಮುಂದಿರುವ ಸಾಮರ್ಥ್ಯ ಮಹಿಳೆಯರಲ್ಲಿ ಅಡಗಿದೆ ಎಂಬುದನ್ನು ತಿಳಿಯಬಹುದು ಆದರೆ ಪ್ರತಿಯೊಂದು ಮಹಿಳೆಯರಿಗೆ ಆಡಳಿತ, ಅಧಿಕಾರ ಹಕ್ಕುಗಳು ಕೊಡದೆ ಮಹಿಳೆಯರಿಗೆ ಕೇವಲ ಬಾಧ್ಯತೆಗಳನ್ನು ಹೊರಿಸುತ್ತಾರೆ. ಪ್ರಸ್ತುತ ಸಮಾಜದ ವಿವಿಧ ಅಂಗ ಸಂಸ್ಥೆಗಳಾದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ವಲಯಗಳಲ್ಲಿ ಆಡಳಿತಮಟ್ಟ ಸ್ಥಾನವನ್ನು ಪಡೆದುಕೊಂಡಿರುವುದರಿಂದ ಅವರ ಸ್ಥಿತಿಗತಿಗಳು ಅತಿ ಶೋಚನೀಯವಾಗಿದೆ.

ನಮ್ಮ ಸಮಾಜ ನಿಂತನೀರಿನಂತೆ ಜಡವಾದುದಲ್ಲ ಅದು ಕಾಲ ಬದಲಾದಂತೆ ಸಂದರ್ಭಕ್ಕೆ ಅನುಗುಣವಾಗಿ ಹೊಂದಿಕೊಂಡು ಚಲನಶೀಲವಾಗುತ್ತಲೇ ಸಾಗುತ್ತಿದೆ. ಇತಿಹಾಸವೆಂದರೆ ಗತಿಸಿದ ಘಟನೆಗಳ ಮೇಲೆ ಬೆಳಕು ಚೆಲ್ಲುವಂತಹದ್ದಾಗಿದೆ. ಪ್ರಸ್ತುತ ಅಧ್ಯಯನ ಅಂದಿನ ರಾಣಿಯರ ಸ್ಥಿತಿಗತಿ ಮತ್ತು ಇಂದಿನ ರಾಣಿಯರಿಗೆ ಕೊಡುತ್ತಿರುವ ಸ್ಥಾನಮಾನಗಳನ್ನು ಕೂಲಂಕುಷವಾಗಿ ಚರ್ಚಿಸಲಾಗಿದೆ.

ಯಶಸ್ವಿ ಪುರುಷನ ಹಿಂದೆ ಒಬ್ಬ ಮಹಿಳೆಯ ಪಾತ್ರ ಇರುತ್ತದೆ. ಅದೇ ರೀತಿ ರಾಜರ ಯಶಸ್ಸಿಗೆ ರಾಣಿಯರು ಭಾಗಿಗಳಾಗಿದ್ದಾರೆ. ಸಪ್ತ ಕರ್ತವ್ಯಗಳಲ್ಲಿ ಒಂದಾದ ರಾಣಿಯರ ಪೋಷಣೆ, ಪ್ರೇರಣೆ, ಅವರ ಕರ್ತವ್ಯ ಪ್ರಜ್ಞೆ ಭಾಗವಾಗಿರುವುದನ್ನು ಗಮನಿಸಬಹುದು. ಕರ್ನಾಟಕದ ರಾಣಿಯರು ಚಕ್ರವರ್ತಿಗಳಿಗೆ, ಸಾಮಂತರಿಗೆ, ಪಾಳೇಗಾರರಿಗೆ ಸದಾಕಾಲ ಬೆಂಗಾವಲಾಗಿ ನಿಂತ ಇವರ ಬದುಕು ಚಾರಿತ್ರಿಕವಾದುದಾಗಿದೆ. ಶಾಂತಸಂಹಿತೆಯಾದ ಮಹಿಳೆ, ಹುಟ್ಟಿದ ಮಕ್ಕಳಿಗೆ ಮಾರ್ಗದರ್ಶನ ಧಾರ್ಮಿಕ, ರಾಜಕೀಯ, ಸಾಮಾಜಿಕ ಸಂಬಂಧವನ್ನು ಕಾಯ್ದುಕೊಂಡು ಆಡಳಿತ ಮಾಡಿದವರನ್ನು ಅಧ್ಯಯನದ ಚೌಕಟ್ಟಿನಲ್ಲಿ ಕಟ್ಟಿಕೊಡಲಾಗಿದೆ. 'ತೊಟ್ಟಿಲು ತೂಗುವ ಕೈ

ಇಡೀ ಜಗತ್ತನ್ನೆ ತೂಗಬಲ್ಲದು' ಎನ್ನುವಂತೆ ಮೇಲುಗೈ ಹೇಗೆ ಆಗುತ್ತದೆ ಎಂಬುದನ್ನು ರಾಣಿಯರ ಆಡಳಿತಾತ್ಮಕ ವೈಖರಿ ಮತ್ತು ವೈಶಿಷ್ಟ್ಯವನ್ನು ಇಲ್ಲಿ ದಾಖಲಿಸಲಾಗಿದೆ. ಸಾಹಿತ್ಯ ರಚನೆ, ಯುದ್ಧ ನಿರ್ವಹಣೆಯಲ್ಲಿ ರಾಜರಿಗಿಂತ ರಾಣಿಯರದೇ ಮೇಲುಗೈ ಎನ್ನಬೇಕು. ರಾಣಿಯರು ಸಾಹಿತ್ಯ ಕ್ಷೇತ್ರದ ಮೂಲಕ ಕೂಡ ಗುರುತಿಸಬಹುದಾಗಿದೆ. ರಾಣಿ ಈಶ್ವರಮ್ಮನವರ ವೀರತ್ವದ ಪದ, ಮಂಗಳಾರತಿ, ಆಕೆಯ ಗುಣಗಾನದ ಪದ, ರಾಣಿ ರಂಗಮ್ಮ ತನ್ನಪತಿಯ ಮರಣ ನಂತರ ತಾನು ವಿಧವೆಯಾದ ಸಂದರ್ಭದಲ್ಲಿ ಆಡಿದ ಮಾತು ಜನಪದ ಹಾಡಾಗಿದೆ, ಮುಮ್ಮಡಿ ರಾಜದೇವೇಂದ್ರ ವೆಂಕಟಪ್ಪ ನಾಯಕನ ಪತ್ನಿ ರಾಣಿ ರಂಗಮ್ಮ ಈಕೆ ತಿರುಪತಿಯ ವೆಂಕಟರಮಣನ ಅನನ್ಯ ಭಕ್ತಳಾಗಿದ್ದು ಆತನ ಭಕ್ತಿಗೀತೆಗಳನ್ನು ರಚಿಸಿದ್ದಾಳೆ. ಈ ರೀತಿಯಾಗಿ ಕನ್ನಡ ಸಾಹಿತ್ಯ ಲೋಕಕ್ಕೆ ಮಹತ್ವವಾದ ಒಂದು ಭಾಗವಾಗಿ ಕಂಡು ಬರುತ್ತಾರೆ. ಒಟ್ಟಿನಲ್ಲಿ ಆಧುನಿಕ ಕಾಲಮಾನದ ಸ್ತ್ರೀವಾದ ಚಿಂತನೆಯ ಪ್ರಖರತೆ ಎದ್ದು ಕಾಣುತ್ತಿರುವ ಈ ಹೊತ್ತಿನ ಸಂದರ್ಭದಲ್ಲಿ "ನಾಯಕ ಸಂಸ್ಥಾನದ ರಾಣಿಯರು;"(ಕಲ್ಯಾಣ ಕರ್ನಾಟಕವನ್ನು ಅನುಲಕ್ಷಿಸಿ) ಎಂಬ ಈ ಅಧ್ಯಯನ ಕೆಲವು ಸಮಸ್ಯೆಗಳಿಗೆ ಸಮಾಧಾನವನ್ನು ಹೇಳುತ್ತದೆ ಮತ್ತು ಕೆಲವು ಸವಾಲುಗಳನ್ನು ಮುಂದಿಡುತ್ತದೆ.

## ಅನುಬಂಧಗಳು

---

- ನಕಾಶೆ
- ವಂಶಾವಳಿ
- ವಕ್ತೃಗಳ ವಿವರ
- ಜನಪದ ಗೀತೆಗಳು
- ಗ್ರಂಥಋಣ
- ಛಾಯಚಿತ್ರಗಳು

# ಅನುಬಂಧಗಳು

## ೧. ನಕಾಶೆ

## ಕಲ್ಯಾಣ ಕರ್ನಾಟಕದ ವ್ಯಾಪ್ತಿಗೆ ಒಳಪಡುವ ಜಿಲ್ಲೆಗಳ ನಕಾಶೆ

## ಯಾದಗಿರಿ ಜಿಲ್ಲೆ



# ಬಳ್ಳಾರಿ ಜಿಲ್ಲೆ



BELLARY
RIVER MAP
N
RAICHUR
KOPPAL
GADAG
HAVERI
DEVANGERE
CHITTRADURGA
ANDHRA PRADESH
Kottalchinta
Rajav
Nittur
Kuriganur
Kampi
Sanavasapura
Upparahalli
HOSPET
Sindavala
Hosaderoji
Sidaragadda
Toranagallu
Gunda Road
BALLARI
SANDUR
Belagal
Mallanakere
Rupanagudi
BOMMANAHALLI
Rajapur
HUVVINAHADAGALLI
Mahajanahalli
KUDLIGI
Svamihalli
Doopadahalli
Holalu
Halsagara
Kotturu
Huralihalu
Nibalageri
LEGEND
River
District Boundary
State Boundary
District HQ
Other Town
Major Town
Map not to Scale
Copyright © 2014 www.mapsofindia.com
(Updated on 17th November 2014)

## ಕೊಪ್ಪಳ ಜಿಲ್ಲೆ



ರಾಯಚೂರು ಜಿಲ್ಲೆ



## ೨ ವಂಶಾವಳಿಗಳು

## ಸುರಪುರ ನಾಯಕ ಅರಸು ಮನೆತನದ ವಂಶಾವಳಿ

ನರಸಿಂಹನಾಯಕ (ಕ್ರಿ.ಶ.೧೩೬೧–೧೩೮೬)

ವೀರಬೊಮ್ಮನಾಯಕ (೧೩೮೬–೧೪೧೧)

ನಿಂಗಪ್ಪನಯಕ (೧೪೧೧–೧೪೩೬)

ಒಡೆಯರ್ ನಾಯಕ (೧೪೩೬–೧೪೬೧)

ಕಲ್ಲಪ್ಪನಾಯಕ (೧೪೬೧–೧೪೮೬)




ಜಕ್ಕಪ್ಪದೇಸಾಯಿ (೧೬೧೧–೧೬೩೬) | ಹುಚ್ಚಸೋಮನಾಯಕ

ಗಡ್ಡಿಪಿಡ್ಡಿನಾಯಕ
(ಕೇಂದ್ರಸ್ಥಾನ ಕಕ್ಕೇರಿ ದೇವಪುರಗಡ್ಡಿ)
ಪತ್ನಿ ೧. ಅಮ್ಮವ್ವನಾಗತಿ
೨. ಹನುಮವ್ವನಾಗತಿ
(ದತ್ತುಮಗ) ಹಸರಂಗಿ ಪಾಮನಯಕ ತಂದೆ ಗಡ್ಡಿಲಿಂಗನಾಯಕ

ಗಡ್ಡಿ ಲಿಂಗನಾಯಕ
(ಕೇಂದ್ರಸ್ಥಾನ ಗುಡಗುಂಟಿ)




೨ನೇ ಪಿಡ್ಡನಾಯಕ (೧೬೮೭–೧೭೨೬) ಪಿತಾಂಬರ ಬಹರಿ ಪಿಡ್ಡನಾಯಕ ಪತ್ನಿಯರು




ಪತ್ನಿ ತಿಮ್ಮಾಂಭ
ಇಮ್ಮಡಿ ವೆಂಕಟಪ್ಪ ನಾಯಕ
ಹಿರೇವೆಂಕಟಪ್ಪನಾಯಕ (೧೭೭೩-೧೮೦೨) ಮುಸ್ಲಿಂ ಜಾತಿಯ ಕನ್ಯೆಯನ್ನು ವಿವಾಹವಾದನು
ರುಕ್ಮವ್ವ
ಬಂಗಾರಮ್ಮ
೩ನೇ ಪಿಡ್ಡನಾಯಕ (೧೭೪೨-೧೭೪೬)
ಪತ್ನಿ ಸತ್ಯಮ್ಮ
೧ನೇ ವೆಂಕಟಪ್ಪನಾಯಕ (೧೭೪೬-೧೭೫೨
ಮೊಂಡಗೈ ವೆಂಕಟಪ್ಪನಾಯಕ
ಪತ್ನಿಯರು
ಓಂಕಾರಮ್ಮ
ರಂಗಮ್ಮ
ರಾಣಿ ವೆಂಕಟಮ್ಮ (ಪ್ಯಾಪಲಿ ರಂಗಪ್ಪ ನಾಯಕನ ಮಗಳು)
ಅವ್ವಭೀಮವ್ವ
ಹಿರೇವೆಂಕಟಪ್ಪ ನಾಯಕ
ಕಿರಿಯವೆಂಕಟಪ್ಪ ನಾಯಕ
ವೆಂಕಟಪ್ಪನಾಯಕ
ಗಿರಿಯಮ್ಮ
ಸತ್ಯಮ್ಮ
ದೇವೆಂದ್ರ ವೆಂಕಟಪ್ಪನಾಯಕ (ಪತ್ನಿಯರು)
ಸೀತಾರಾಮ ನಾಯಕ
ತಾತಾವೆಂಕಟಪ್ಪ ನಾಯಕ
ವೆಂಕಮ್ಮ
ಪದ್ಮಮ್ಮ
ಮಂಗಮ್ಮ
ರಂಗಮ್ಮ (ರತ್ನಗಿರಿ)
ಚಿನ್ನಮ್ಮ
ಹನುಮಪ್ಪನಾಯಕ
ಗೋವಿಂದಮ್ಮ
ಕೃಷ್ಣಮ್ಮ
ರುಕ್ಕಮ್ಮ
ರಂಗಮ್ಮ
೨ನೇ ಕೃಷ್ಣಪ್ಪ ನಾಯಕ (ಕ್ರಿ.ಶ.೧೮೨೭- ೧೮೪೨)
೫ನೇಪಿಡ್ಡ ನಾಯಕ
ಪಾಮ ನಾಯಕ
ವಾಸುದೇವ ನಾಯಕ
ಶ್ರೀನಿವಾಸ ನಯಕ
ರಂಗಮ್ಮ
ಸೀತಮ್ಮ ನಾಯಕ
ಮದನಗೋಪಾಲ
ಗೋವಿಂದಮ್ಮ
ಸತ್ಯಮ್ಮ
ವೆಂಕಮ್ಮ
೩ನೇ ಕೃಷ್ಣಪ್ಪನಾಯಕ
ವೆಂಕಟಪ್ಪನಾಯಕ
೬ನೇ ಪಿಡ್ಡನಾಯಕ
ರಾಣಿ ಈಶ್ವರಮ್ಮ
ಚುಂಡಿವೆದ್ದಮ್ಮ
ಲಕ್ಷ್ಮಮ್ಮ
ನಾಲ್ವಡಿ ವೆಂಕಟಪ್ಪ ನಾಯಕ (೧೮೪೨-೧೮೫೮) (೧೧.೫.೧೮೫೮ ಮರಣ) ಬ್ರಿಟಿಷರ ವಿರುದ್ಧ ಹೋರಾಡಿ ಮಡಿದನು. ೮ ಮಂದಿ ಪತ್ನಿಯರಿದ್ದರು. ರಾಣಿರಂಗಮ್ಮ ಪಟ್ಟದರಾಣಿಯಾಗಿ ಇದ್ದಳು ನಂತರ ೧೯೦೬ರಲ್ಲಿ ಮರಣ ಹೊಂದಿದಳು.
ರಾಜ ಕೃಷ್ಣಪ್ಪನಾಯಕ (ರಾಣಿ ರಂಗಮ್ಮನ ದತ್ತು ಪುತ್ರ) (೧೯೦೬-೧೯೫೨)
ರಾಜ ಪಿಡ್ಡನಾಯಕ ಮರಣ ೧೯೯೨
ರಾಜಾ ವೆಂಕಟಪ್ಪನಾಯಕ (ತಾತಾ)
ರಾಜಾ ವೆಂಕಟಪ್ಪನಾಯಕ (ಬ್ಯಾರಿಸ್ಟರ್)
ರಾಜಾ ಸೀತಾರಾಮ ನಾಯಕ
ರಾಜಕೃಷ್ಣಪ್ಪ ನಾಯಕ
ರಾಜಾ ಶ್ರೀನಿವಾಸ ನಾಯಕ

**ಜರಿಮಲೆ ಸಂಸ್ಥಾನದ ವಂಶಾವಳಿ (೧೫೦೦-೧೮೦೦)**

ಪಾಪಣ್ಣನಾಯಕ

ಪೆನ್ನಪ್ಪನಾಯಕ

ಬಸಂತರಾಜ ಭೂಮಿರಾಜ ಬೂದಿಸಿದ್ದರಾಜ

ಇಮ್ಮಡಿನಾಯಕ

ಬೊಮ್ಮಂತರಾಜ ಕಿರಿಇಮ್ಮಡಿನಾಯಕ

ಬೊಮ್ಮಣ್ಣನಾಯಕ

ಮುಮ್ಮಡಿನಾಯಕ ಇಮ್ಮಡಿನಾಯಕ

ಬೊಮ್ಮಣ್ಣನಾಯಕ ಮಲ್ಲಿಕಾರ್ಜುನನಾಯಕ ಇಮ್ಮಡಿನಾಯಕ

**ಜರಿಮಲೆ ಸಂಸ್ಥಾನದ ವಂಶಾವಳಿ**

ಶ್ರೀ ಗುರು ಬಸವಲಿಂಗರಾಯ ನಮಃ ಶ್ರೀ ಶಾರದಾಂಬಾಯ ನಮಃ

ಶ್ರೀಗಣಾಧಿಪತಿಯೇನ್ನಮಃ

ಶ್ರೀ ಗುರು ಮುರುಳಾದ್ಯನ್ನಮಃ

ಶ್ರೀ ಗುರು ಪ್ರಸನ್ನಂ

ಆರಿಷಿಯಿಂದ ಬಂದಂಥಾ ಜರಿಮಲಿ ಸಮುಸ್ಥಾತರುದ

ವಂಶಾವಳಿ ಬಂದದ್ದೂ.

ಶ್ರೀ ಗುರು ಪ್ರಸನ್ನಂ

## ಆನೆಗೊಂದಿ ನಾಯಕ ಅರಸು ಮನೆತನದ ವಂಶಾವಳಿ



- ವೆಂಕಟರಾಮರಾಯಲು
  - ವೆಂಕಮ್ಮ
  - ನರಸಿಂಗಮ್ಮ

- ಕೃಷ್ಣದೇವರಾಯಲು
  - ಶ್ರೀ ರಂಗದೇವರಾಯಲು (ಪಂಪಾತಿ ರಾಜು)
    - ಸಂತ ಕ್ರಿಷ್ಣಮ್ಮ
    - ತಿರುಮಲ ಕೊಂಡಮ್ಮ
    - ದರ್ಬಾರ್ ರಾಜ ಕೃಷ್ಣದೇವರಾಯ
      - ರಾಜ ಅಚ್ಯುತ ದೇವರಾಜ
        - ಕೃಷ್ಣಕುಮಾರಿ
        - ಶ್ರೀ ಕೃಷ್ಣದೇವರಾಯ
          - ತಿರುಮಲ ವೆಂಕಟದೇವರಾಯ
    - ತಿರುಮಲ ದೇವರಾಯ
      - ರಾಮದೇವರಾಯ
      - ವಿಜಯಕುಮಾರಿ
      - ಶಂಕರಕುಮಾರಿ
      - ಹರಿಹರದೇವರಾಯ
    - ವೆಂಕಟ ದೇವರಾಯ
      - ಅಚ್ಯುತದೇವರಾಯ (ದತ್ತುಪುತ್ರ)
      - ಶ್ರೀರಂಗದೇವರಾಯ
      - ನರಸಿಂಹದೇವರಾಯ
      - ರಘುದೇವರಾಯ



## ಗುಡಗುಂಟೆ ನಾಯಕ ಅರಸು ಮನೆತನದ ವಂಶಾವಳಿ



# ಗುಂತಗೋಳ ನಾಯಕ ಅರಸು ಮನೆತನದ ವಂಶಾವಳಿ



# ದೇವದುರ್ಗ ನಾಯಕ ಅರಸು ಮನೆತನದ ವಂಶಾ



# ೩. ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ಉದ್ಯೋಗ | ವಯಸ್ಸು | ಊರು |
|---|---|---|---|---|
| ೧ | ದೊರೆ ಸಿದ್ದಪ್ಪನಾಯಕ | ವ್ಯವಸಾಯ | ೬೫ | ಜರಿಮಲೆ |
| ೨ | ರಾಜಾ ಕೃಷ್ಣಪ್ಪನಾಯಕ | ರಾಜಕೀಯ ಮುಖಂಡರು | ೪೦ | ಸುರಪುರ |
| ೩ | ದೊರೆ ಶ್ರೀನಿವಾಸನಾಯಕ | ರಾಜಕೀಯ ಮುಖಂಡರು | ೪೫ | ಗುಂತಗೋಳ |
| ೪ | ರಾಜಾ ಶರತ್ ಚಂದ್ರನಾಯಕ | ರಾಜಕೀಯ ಮುಖಂಡರು | ೩೫ | ಕನಕಗಿರಿ |
| ೫ | ರಾಜಾ ರವಿವರ್ಮ ನಾಯಕ | ರಾಜಕೀಯ ಮುಖಂಡರು | ೪೫ | ದೇವದುರ್ಗ |
| ೬ | ರಾಣಿ ಪದ್ಮಾವತಿ | ಗೃಹಿಣಿ | ೪೫ | ಗುಡೇಕೋಟೆ |
| ೭ | ದೊರೆ ವೆಂಕಟರಾಜ | ರಾಜಕೀಯ ಮುಖಂಡರು | ೨೭ | ಗುಡೇಕೋಟೆ |
| ೮ | ರಾಜಾ ಸೋಮನಾಥನಾಯಕ | ರಾಜಕೀಯ ಮುಖಂಡರು | ೪೦ | ಗುಡಗುಂಟಿ |
| ೯ | ಸೋಮನಾಥನಾಯಕ | ಶಾಸಕರ ಆಪ್ತ ಸಹಾಯಕರು | ೫೫ | ಗುಡಗುಂಟಿ |
| ೧೦ | ರಾಜಾ ಕೃಷ್ಣನಾಯಕ | ವ್ಯಾಪಾರಸ್ಥರು | ೪೦ | ಆನೆಗೊಂದಿ |

# ೪. ಜನಪದ ಗೀತೆಗಳು

**ಮಂಗಳಾರತಿ ಹಾಡು**

ಮಂಗಳ ಹೂ ಎನ್ನಿರೇ ಮಲ್ಲಿಕಾರ್ಜುನ ಮಹಾದೇವನಿಗೆ
ಸಂಗೀತ ಲೋಲನಿಗೆ ಚಂಗ್ಗು ಪ್ರಶ್ರೀಗೆ

ಗಂಗೆಯ ದಾರಿಸಿಪಗೆ
ಲೋಲಟ ವಾರದಗೇ
ಅಪಾರ ಕಾರುಣ್ಯ ಸಾಗರಗೇ

ಮೇಲದ ಬ್ರಹ್ಮನು ಪಾರುಮಾಡಲು ಇದ್ದು
ರುದ್ರಗೇ ಹನುಮ ರುದ್ರಗೇ
ಮೋಗಳ ಹೋ ಎನ್ನಿರೇ ಮಹದೇವ ಮಲ್ಲಿಕಾರ್ಜುನಗೇ

ರಕ್ಷಕದ ಗುಡಗುಂಟೆ ಪೂರ್ವದ ಪಟ್ಟದ ರಾಣಿಗೆ
ರಾಣಿಗೌರಮ್ಮನ ಪತಿದೇವಗೆ
ವಾಸವಾಗ ಬನ್ನೀರೆ ಎಡಬದಿಗೆ ಎಡಗಡೆ ವಿಶ್ವದಾರೆ ವಾಣಿಗೆ

ಹಾಸಿನ ಮನೆಯೊಳಗೆ
ವಾಸಮಾಡಿರುವ ಅಮರೇಶ ದೇವಮೂರ್ತಿಗೆ

(ಗುಡಗುಂಟಿ ಸೋಮನಾಥನಾಯಕ)

## ಭಕ್ತಿಗೀತೆ

ಪ್ರಾಂತ್ಯದೋಳು ಇಲ್ಲ ಇಂತಹ ದರ್ಬಾರ
ರಸಿಕನ ನೋಡಲು ಮನಸು ಇಂತಹದು
ಈಶನು ನೋಡಲು ಬಾಬಾ

ಪಾಲ್ಕಿಯೊಳು ಕಳಸ ಧರಿನ್ಯಾಸ ನೋಡ
ಗುಡಿಗುಂಟಿಯೋಳು ಶಿವ ವಂಟನ ನೋಡ
ಗುಂತಗೋಳದಲ್ಲಿ ಶಿವ ರೂಪನ ನೋಡ
ಅಲ್ಲಿ ಸಂಭ್ರಮ ನಡಿದಾತೋ ನೋಡ
ಈಶನು ನೋಡಲು ಬಾಬಾ

ಅಲ್ಲಿಂದ ಶಿವ ಬರುತಾನ ನೋಡ
ತೇರಿನ ಮೇಲೆ ಇರುತಾನ ನೋಡ
ಈಶನು ನೋಡಲು ಬಾಬಾ
ಈದು ಪ್ರದಕ್ಷಿಣ ತಿರಿಗ್ಯಾನ ನೋಡ

ಗುಡಗುಂಟಿಲಿಂದ ದೋರೆ ಬರುತಾನೆ ನೋಡ
ಬಿಳೀಯ ಕುದುರೆ ಹೇರ್‍ಯಾನ ನೋಡ
ಸುರ್ ಪೀಸ್ ಆಚ್ಯಾನ ನೋಡ

ಬಿಳೀಯ ಛತ್ರಿ ಹಿಡಿದಾನ ನೋಡ
ದುಂಟು ದರ್ಬಾರ್ ಒಟ್ಟುತ್ತ ನೋಡ
ಎಡಕ್ಕೆ ಬಲಕ್ಕೆ ಚಪ್ಪರವಾ ನೋಡ

ಬಿಳಿಯ ಬೆತ್ತ ಹಿದಾರ ನೋಡ
ಅಲ್ಲಿಂದ ಶಿವ ಒಂಟಾನ ನೋಡ
ಈಶನ ನೋಡಲು ಬಾಬಾ

ಒಬ್ಬದೋಳಗೆ ಈಶನು ಬಾ
ಸಬಾನ ಸಂಭ್ರಮ ನೋಡಲು ಬಾ
ಬಿಂಬದ ಜಗದೊಳಗೆ ಪಾವಮನ

ಈಶನ ನೋಡಲು ಬಾಬಾ
ಪಾಲ್ ಗುಣ ಶುದ್ಧ ಹೋಳಿ ಹುಣ್ಣಿಮೆಲ್ ಗಡೆ ಜನರು
ಬಂದು ಇಳಿಯುವರು ಇಲ್ಲಿ

ಕಡಿಯುವ ಮೊಸರನ್ನು ಕುಡಿಯಲು ತಾನು
ಈಶನು ನೋಡಲು ಬಾಬಾ
ಕೆಂದ ಕುದುರಿಯ ಗಾಡಿಯ ಹೇರ್‍ಯಾನ(ಹತ್ತಿದನು)ನೋಡ

ಗೋಕುಲದಿಂದ ಶಿವ ಬರುತಾನ ನೋಡ
ಕಳಸದ ಗುಡಿಯಲ್ಲಿ ಇರುತನ ನೋಡ
ಪಲ್ಲಕ್ಕಿಯೊಳ ಕಾಳದಾಸ್ಯನ ನೋಡ

ಈಶನು ನೋಡಲು ಬಾಬಾ
ಅಲ್ಲಿದ್ದ ಶಿವ ಬರುತಾನ ನೋಡ
ದರ್ಬಾರದಲ್ಲಿ ಇರುತಾನ ನೋಡ

ಬೆಳ್ಳಿಯ ಚೌರ ಬೀಸ್ಯಾನ ನೋಡ
ಈಶನ ನೋಡಲು ಬಾಬಾ
ಎತ್ತ ನೋಡಿದಡತ್ತ ಶಿವನ ಸ್ವರೂಪೇ
ಈಶನ ನೋಡಲು ಬಾಬಾ
ನಂಬಿಕೆಯೊಳಗೆ ಜೀವನದ ಒಮ್ಮೆಶರಣನನ್ನು ನೋಡಲು ಬಾಬಾ
ಸಂಬಾನ ಸಂಬ್ರಮ ನೋಡಲು ಬಾಬಾ

ನಂಬಿಕೆಯ ಜಗದೊಳಗೊಮ್ಮೆ ನೋಡಲು ಬಾಬಾ
ಈಶನ ನೋಡಲು ಬಾಬಾ
ತೆರಿಗೆ ಮೇಲೆ ಶಿವ ಕುಂತ ನೋಡ

ಐದು ಪ್ರದಕ್ಷಿಣೆ ತಿರಿಗ್ಯಾನನೋಡ
ಗಾಲಿ ಗಾಲಿಗೆ ಕಾಯಿ ಹೋಡೆದರು ನೋಡ
ಹೂವಿನ ಚಂಡನು ಆಡ್ಯಾನ ನೋಡ

ಚಂದುಳ್ಳ ತಿಪ್ಪರಾಜು ಇರುವನು ನೋಡ
ಹೂವಿನ ಚಂಡನು ಆಡ್ಯಾನ ನೋಡ
ಚಮ್ಮಳಗಿ ಹೊಡೆದು ತೇರು ಸಾಗಿಸ್ಯಾರ ನೋಡ

ಈಶನ ನೋಡಲು ಬಾಬಾ
ಎತ್ತನೋಡಿದಡತ್ತ ಮನಿ ಮಂಜನ ಎತ್ತನೋಡಿದಡತ್ತ ಮನಿ ಮಂಜನ
ಎತ್ತರ ಗುಡ್ಡದ ಅಡಿಯಲ್ಲಿ ಎತ್ತರದ ಆಲಾ

ಈಶನ ನೋಡಲು ಬಾಬಾ
ನಂದೀಕೇಳಾ ದೇಶಗೆ ಹೋಗನು ಬಾಬಾ
ಬಾರಿಕಿಮ್ಮತ್ತು ವುಳ್ಳ ಬೆಲೆಬಾಳುವ ಕಳಸ

ಈಶನು ನೋಡಲು ಬಾಬಾ
ಎತ್ತನೋಡಿದಡತ್ತ ಮನಿಮಂಜನ ಗಾನ
ನೋಬಿಕೆಯೊಳಗೆ ಈಜೀವನದ ಗೊಂಬೆ

ಶರಣನ ನೋಡಲು ಬಾಬಾ
ಏಸುದಿನಸಿನ ಪುಷ್ಪದ ಫಲವ ಸೋಸಿ ಹರಿಯುವ ಗಂಗೆಯ ಜಲವ
ಜಂಗು ಜಾಗಟೆಯ ನಾದದೊಳಗಿರುವ

ಪಂಪಾಪತಿ ಇಂಪಾಗಿ ಇರು
ನಂಬಿಕೆ ಇರುವ ಜೀವದ ಗೊಂಬೆ
ಈಶನ ನೋಡಲು ಬಾಬಾ

(ಗುಡಗುಂಟಿ ಸೋಮನಾಥನಾಯಕ)

# ೫. ಗ್ರಂಥಋಣ

## ಮೂಲ ಆಕರಗಳು


ದೇವರಕೊಂಡಾರೆಡ್ಡಿ (ಸಂ), ಭಟ್‌ಸೂರಿ ಕೆ.ಜಿ.ಕಲವೀರ ಮನ್ವಾಚಾರ, ಪರಮಶಿವಮೂರ್ತಿ ಡಿ.ವಿ. (ಸಂ), ೧೯೯೯. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ:೨ ಕೊಪ್ಪಳ ಜಿಲ್ಲೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ದೇವರಕೊಂಡಾರೆಡ್ಡಿ. (ಸಂ), ಭಟ್‌ಸೂರಿ ಕೆ.ಜಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ ಡಿ.ವಿ. (ಸಂ), **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ:೭ ರಾಯಚೂರು ಜಿಲ್ಲೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.


## ಪರಾಮರ್ಶನ ಗ್ರಂಥಗಳು


ಅಮರೇಶ ಯತಗಲ್, **ಇತಿಹಾಸ ಇಂಚನ,** ಅದಿತಿ ಪ್ರಕಾಶ ಲಿಂಗಸೂಗೂರು. ೨೦೦೭

ಅಮರೇಶ ಯತಗಲ್, **ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು,** ಪಲ್ಲವಿ ಪಬ್ಲಿಕೇಶನ್, ಕಸಬಾ ಲಿಂಗಸೂಗೂರು. ೨೦೧೮

ಅಮರೇಶ ಯತಗಲ್, **ಚಾರಿತ್ರಿಕ ಸುರಪುರ ಅಧ್ಯಯನಾತ್ಮಕ ನೋಟಗಳು,** ಪಲ್ಲವಿ ಪಬ್ಲಿಕೇಶನ್, ಕಸಬಾ ಲಿಂಗಸೂಗೂರು.೨೦೧೮

ಕಪಟರಾಳ ಕೃಷ್ಣರಾಯರು, **ಸುರಪುರ ಸಂಸ್ಥಾನದ ಇತಿಹಾಸ,** ಪ್ರಕಾಶಕರು ಕಪಟರಾಳ ಕೃಷ್ಣರಾಯರ ಸಮಿತಿಗಾಗಿ ಪುಸ್ತಕ ಶಕ್ತಿ. ಬೆಂಗಳೂರು, ೨೦೦೫

ಕರಿಬಸಪ್ಪ ಎ. **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು,** ಸಾಯಿಮಣಿ ಪ್ರಕಾಶನ, ಹೊಸಪೇಟೆ.೨೦೦೯

ಕೃಷ್ಣಪ್ಪ ಎಂ.ವಿ. ಚನ್ನಬಸಪ್ಪ ಎಸ್, ಪಾಟೀಲ್, (ಸಂ) **ವಿಜಯನಗರ ಅಧ್ಯಯನ ಸಂಪುಟ ೫,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. ೨೦೦೦

ಕೊಟ್ರೇಶ್ ಎಂ. **ಕಲ್ಯಾಣ ಕರ್ನಾಟಕದ ಅರಸು ಮನೆತನಗಳು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೧೮

ಚಿನ್ನಸ್ವಾಮಿ ಸೋಸಲೆ ಎನ್. **ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೧೩-೧೮

ತಾರಿಹಳ್ಳಿ ಹನುಮಂತಪ್ಪ, **ಕನಕಗಿರಿ ನಾಯಕರು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೨

ನಂಜಣ್ಣನವರ ಎಸ್.ಎಸ್. **ಕರ್ನಾಟಕ ಪ್ರಾದೇಶಿಕ ಭೂಗೋಳಶಾಸ್ತ್ರ,** ಜಿ.ಎಂ. ಪಬ್ಲಿಕೇಷನ್ಸ್ ಬೆಂಗಳೂರು.೨೦೧೩

ಪಾಟೀಲ್ ಎಚ್.ಎಸ್. **ಕೊಪ್ಪಳ ಜಿಲ್ಲಾ ದರ್ಶನ**, ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ. ೨೦೦೫

ಪಂಚಾಕ್ಷರಿ ಹಿರೇಮಠ, **ಉರ್ದುಸಾಹಿತ್ಯ- ಒಂದು ಪರಿಚಯ**, ಪ್ರಕಾಶಕರು,ಪ್ರಸಾರಾಂಗ ಕರ್ನಾಟಕ, ವಿಶ್ವವಿದ್ಯಾಲಯ, ಧಾರವಾಡ.೧೯೮೮

ಮಲ್ಲಪ್ಪ ವಿ. **ಕರ್ನಾಟಕದ ಭೂಗೋಳಶಾಸ್ತ್ರ**, ಚೇತನ ಬುಕ್‌ಹೌಸ್ ಮೈಸೂರು.೨೦೦೯

ಯೋಗಿಶ್ವರಪ್ಪ ಡಿ.ಎನ್. **ನಾಯಕತನ ಪದ್ದತಿ**, ಪ್ರತಿಗ್ರಾಫಿಕ್ಸ್ ಹಂಪಿನಗರ, ಬೆಂಗಳೂರು.೨೦೧೬

ಲಕ್ಷ್ಮಣ್ ತೆಲಗಾವಿ, **ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ**, ವಿಶ್ವಾಸ್ ಪ್ರಿಂಟ್ಸ್ ಬೆಂಗಳೂರು.೨೦೦೮

ಲಕ್ಷ್ಮಣ್ ತೆಲಗಾವಿ, **ಎಪ್ಪತ್ತೇಳು ಪಾಳೆಯಗಾರರು**, ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ, ವಿಶ್ವಾಸ್ ಪ್ರಿಂಟರ್ಸ್ ಬೆಂಗಳೂರು.೨೦೧೦

ವಸಂತ ಕುಷ್ಟಗಿ, **ಸುರಪುರದ ದೊರೆ ವೆಂಕಟಪ್ಪನಾಯಕ**, ಶ್ರೀ ಬತ್ತೇರೇಶ ಪ್ರಕಾಶನ ಗುಲ್ಬರ್ಗಾ.೨೦೧೧

ವಸಂತ ಕೃಷ್ಟಗಿ,**ಹೈದರಾಬಾದ್ ಕರ್ನಾಟಕ ಕಣಜದಿಂದ**, ಶ್ರಿ ಬತ್ತೇರೇಶಕ ಪ್ರಕಾಶಕ ಗುಲ್ಬರ್ಗಾ. ೨೦೧೪

ವಿಜಯದೇವಿ, ಎಂ.ಜಿ. ಮಂಜುನಾಥ (ಸಂ), **ರಾಣಿಯರು ಮತ್ತು ವೀರಮಹಿಳೆಯರು**, ಪ್ರಸಾರಾಂಗ, ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯ ವಿಜಾಪುರ,೨೦೧೩

ವೀರನಾಯಕ ಹೆಚ್.ವಿ, **ಕ್ಷಾತ್ರಂಶ ಪ್ರಬೋಧ(ಸಂ), ಹರ್ತಿಕೋಟೆ ಹಿರಿಯೂರು ತಾಲ್ಲೂಕು**, ಚಿತ್ರದುರ್ಗ ಜಿಲ್ಲೆ, ವಿಶ್ವಾಸ್ ಪ್ರಿಂಟ್ಸ್ ಚಾಮರಾಜಪೇಟೆ ಬೆಂಗಳೂರು. ೨೦೦೮

ವೆಂಕಟೇಶ್.ಕೆ. ಸರೋಜಾ ಬಿ.(ಸಂ), **ಹೈದರಾಬಾದ್ ಕರ್ನಾಟಕ ವರ್ತಮಾನ ತಲ್ಲಣಗಳು**, ಪಲ್ಲವಿ ಪ್ರಕಾಶನ ಬಳ್ಳಾರಿ. ೨೦೦೬

ಶರಣಬಸಪ್ಪ ಕೋಲ್ಕಾರ, **ಆನೆಗೊಂದಿ**, ಶ್ರೀಕೊತ್ತಲಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಸೇಡಮ್.೨೦೦೮

ಶರಣಬಸಪ್ಪ ಕೋಲ್ಕಾರ,**ದರ್ಶನ ಮಾಲಿಕೆ ಗಂಗಾವತಿ**, ಮುದ್ರಣ ವಿಶ್ವಾಸ್ ಪ್ರಿಂಟರ್ಸ್ ಬೆಂಗಳೂರು, ೨೦೧೦

ಶರಣಬಸಪ್ಪ ಕೋಲ್ಕಾರ, **ವಿಜಯನಗರ ಹಂಪಿ ಪರಿಸರ**, ಮುದ್ರಣ ವಿಶ್ವಾಸ್ ಪ್ರಿಂಟರ್ಸ್ ಬೆಂಗಳೂರು. ೨೦೧೨

ಶರಣಬಸಪ್ಪ ಕೋಲ್ಕಾರ,ವಿಜಯನಗರದ **ಮಾತೃಸ್ಥಾನ ಆನೆಗೊಂದಿ**, ವಿಶ್ವಾಸ್ ಪ್ರಿಂಟ್ಸ್ ಬೆಂಗಳೂರು, ೨೦೧೩

ಶಾಂತಪ್ಪ ಬೂದಿಹಾಳ್, **ದರ್ಶನ ಮಾಲಿಕೆ ಸುರಪುರ**, ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು ಮುಖ್ಯರಸ್ತೆ, ಗುಲ್ಬರ್ಗಾ.

